# ಇಂಗ್ಲಂಡಿನ ಅರ್ವಾಚೀನ ಇತಿಹಾಸವು

## ಭಾಗ ೧

(ಇ. ಸ. ಪೂ. ೫೫ರಿಂದ ಇ. ಸ. ೧೬೦೩)

ಲೇಖಕ:

ಪರಶುರಾಮ ಹರಿ ಬರ್ವೆ, ಎಂ.ಎ., ಬಿ.ಟಿ.



೧೯೪೯

ಮೆಕ್‌ಮಿಲನ್ ಮತ್ತು ಕಂಪನಿ, ಲಿಮಿಟೆಡ್,
ಹಾರ್ನಬಿ ರೋಡ, ಫೋರ್ಟ, ಮುಂಬಯಿ

ಬೆಲೆ: ೧ ರೂ. ೮ ಆಣೆ.

# ಇಂಗ್ಲಂಡಿನ
# ಅರ್ವಾಚೀನ ಇತಿಹಾಸವು

## ಭಾಗ ೧

(ಇ. ಸ. ಪೂ. ೫೫ರಿಂದ ಇ. ಸ. ೧೬೦೩)

# ಇಂಗ್ಲಂಡಿನ
# ಅರ್ವಾಚೀನ ಇತಿಹಾಸವು

## ಭಾಗ ೧

ಟ್ಯೂಡರ ಪೂರ್ವಕಾಲದ ಮತ್ತು
ಟ್ಯೂಡರ ಕಾಲದ ಇಂಗ್ಲಂಡದ ಇತಿಹಾಸವು

**(ಇ. ಸ. ಪೂ. ೫೫ರಿಂದ ಇ. ಸ. ೧೬೦೩)**

ಈ ಪುಸ್ತಕವನ್ನು

**ಪರಶುರಾಮ ಹರಿ ಬರ್ವೆ**, ಎಂ.ಎ., ಬಿ.ಟಿ.

ಯುರೋಪದ ಅರ್ವಾಚೀನ ಇತಿಹಾಸ, ಜರ್ಮನ್ ಕಾರಸ್ಥಾನದ ಉಚ್ಚಾಟನ,
ಅಧಃಪಾತ, ಜಾನ್ ರಸ್ಕಿನ್

ಈ ಪುಸ್ತಕಗಳ ಲೇಖಕರು

ಇವರು

ಮರಾಠಿ ಭಾಷೆಯಲ್ಲಿ ಬರೆದರು

ಅದನ್ನು

**ಸಾಲಿ ರಾಮಚಂದ್ರರಾಯರು**, ಬಿ.ಎ.,

ಅಧ್ಯಾಪಕ, ಕರ್ನಾಟಕ ಹೈಸ್ಕೂಲ್, ಧಾರವಾಡ

ಇವರು ಕನ್ನಡದಲ್ಲಿ ಪರಿವರ್ತಿಸಿದರು.

ಮೆಕ್‌ಮಿಲನ್ ಮತ್ತು ಕಂಪನಿ, ಲಿಮಿಟೆಡ್,
ಹಾರ್ನಬಿ ರೋಡ, ಫೋರ್ಟ, ಮುಂಬಯಿ

೧೯೪೯



[ಬೆಲೆ ರೂ. ೧ ಆಣೆ ೮.

# ಪ್ರಸ್ತಾವನೆ

ಜನಶಿಕ್ಷಣದ ಕಾರ್ಯದಲ್ಲಿ ಇತಿಹಾಸದ ಮಹತ್ವವು ಎಷ್ಟಿದೆಂಬುದನ್ನು ವಿವರಿಸಿ ಹೇಳುವ ಕಾರಣವಿಲ್ಲ. ನಮ್ಮ ನಿತ್ಯದ ವ್ಯವಹಾರದಲ್ಲಿ ಹಿಂದಿನ ಅನುಭವವು ಉಪಯುಕ್ತವಾಗಿರುವಂತೆ ಯಾವುದೊಂದು ದೇಶದವರಿಗೆ ಆ ದೇಶದ ಮತ್ತು ಮಿಕ್ಕ ದೇಶಗಳ ಇತಿಹಾಸವು ಬೋಧಪ್ರದವೂ ಮಾರ್ಗದರ್ಶಕವೂ ಆಗಿರುತ್ತದೆಂಬುದು ನಿಃಸಂದೇಹವು. ಆದುದರಿಂದ ಶಾಲೆ-ಕಾಲೇಜುಗಳ ಶಿಕ್ಷಣಕ್ರಮದಲ್ಲಿ ಇತಿಹಾಸಕ್ಕೆ ಕೊಡಲಾಗಿರುವ ಸ್ಥಾನವು ಎಲ್ಲ ಬಗೆಯಿಂದಲೂ ಯೋಗ್ಯವಾಗಿರುವುದು.

ಪ್ರಪಂಚದಲ್ಲಿ ಇಂದು ಮಹತ್ವವನ್ನೂ ಶ್ರೇಷ್ಠತೆಯನ್ನೂ ಪಡೆದ ರಾಷ್ಟ್ರಗಳಲ್ಲಿ ಇಂಗ್ಲಂಡು ಪ್ರಮುಖವಾದುದಾಗಿ ಎಣಿಸಲ್ಪಡುತ್ತದೆ. ಪ್ರದೇಶವಿಸ್ತಾರ, ಜನಸಂಖ್ಯೆ, ವ್ಯಾಪಾರ, ಉದ್ಯೋಗ-ವ್ಯವಸಾಯಗಳು, ಸಮುದ್ರದ ಮೇಲಿನ ಪ್ರಭುತ್ವ ಮತ್ತು ಸಾಮರ್ಥ್ಯ ಈಯೆಲ್ಲ ವಿಷಯಗಳಲ್ಲಿ ಇಂಗ್ಲಂಡು (ಬ್ರಿಟಿಶ್ ಸಾಮ್ರಾಜ್ಯವು) ಜಗತ್ತಿನಲ್ಲಿ ಮೇಲಿನ ಸ್ಥಾನವನ್ನು ಸಂಪಾದಿಸಿದೆ. ಇದಾದರೂ ಕಳೆದ ಮೂರು ನಾಲ್ಕು ಶತಕಗಳ ಸಂಪಾದನೆಯೆ ಆಗಿದೆ. ಈ ಶ್ರೇಷ್ಠತೆಯನ್ನು ದೊರಕಿಸಲು ಇಂಗ್ಲಂಡು ಬೇರೆ ಬೇರೆ ಕಾಲಕ್ಕೆ ಅನೇಕ ರಾಷ್ಟ್ರಗಳೊಡನೆ ಹೋರಾಡಬೇಕಾಯ್ತು. ೧೬ನೆಯ ಶತಕದಲ್ಲಿ ಸ್ಪೇನದೊಡನೆ, ೧೭ನೆಯ ಶತಕದಲ್ಲಿ ಹಾಲಂಡಿನೊಡನೆ, ೧೮ನೆಯ ಶತಕದಲ್ಲಿ ಫ್ರಾನ್ಸಿನೊಡನೆ, ೧೯ನೆಯ ಶತಕದಲ್ಲಿ ರಶಿಯದೊಡನೆ ಮತ್ತು ೨೦ನೆಯ ಶತಕದಲ್ಲಿ ಜರ್ಮನಿಯೊಡನೆ ಇಂಗ್ಲಂಡು ಕಾದಿತು; ಇಂಗ್ಲಿಶ್ ಜನರ ಶೌರ್ಯ, ದೃಢೋದ್ಯೋಗ, ಸಾಹಸವೃತ್ತಿ, ಸ್ವದೇಶಭಕ್ತಿ, ಆತ್ಮವಿಶ್ವಾಸ ಮತ್ತು ಸಂಘಶಕ್ತಿಯಿಂದ ಕೆಲಸಮಾಡುವ ಬುದ್ಧಿ ಈ ಗುಣ ಸಮುಚ್ಚಯದಿಂದ ಇಂಗ್ಲಂಡಿಗೆ ಜಯವು ದೊರೆಯುತ್ತ ಬಂದಿತು. ಅಮೇರಿಕೆಯಲ್ಲಿಯ ಉಪನಿವೇಶಗಳೊಡನೆ ಆದ ಯುದ್ಧವನ್ನುಳಿದು ಮಿಕ್ಕಾವ ಮಹತ್ವದ ಯುದ್ಧದಲ್ಲಿಯೂ ಇಂಗ್ಲಂಡಿಗೆ ಸೋಲು ಇರಲಿಲ್ಲ. ಆದರೆ ಈ ಅನುಭವದಿಂದ ಇಂಗ್ಲಂಡು ತನ್ನ ಉಪನಿವೇಶಗಳ ವಿಷಯದ ನೀತಿಯಲ್ಲಿ (Policy) ಬದಲಾವಣೆಯನ್ನು ಮಾಡಿತು. ಅದು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಉಪನಿವೇಶಗಳಿಗೂ ದೇಶಗಳಿಗೂ ಸ್ವರಾಜ್ಯದ (self-government) ಅಧಿಕಾರಗಳನ್ನು ಕೊಡಲು ಮತ್ತು ಸಾಮ್ರಾಜ್ಯದ ಸಮಸ್ಯೆಗಳನ್ನು ಕುರಿತು ಅವುಗಳ ಆಲೋಚನೆಯನ್ನು ಕೇಳಲು

ಉಪಕ್ರಮಿಸಿತು. ಅದರಿಂದ ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಬೇರೆ ಬೇರೆ ದೇಶಗಳಲ್ಲಿ ಒಬ್ಬರೊಬ್ಬರ ವಿಷಯದಲ್ಲಿ ಆಪ್ತಭಾವನೆ ಬೆಳೆದು ಬ್ರಿಟಿಶ್ ಸಾಮ್ರಾಜ್ಯದ ಸಾಮರ್ಥ್ಯವು ಹೆಚ್ಚಲು ಅನುವಾಯ್ತು. ಇಂಗ್ಲಂಡಿನಲ್ಲಿಯ ರಾಜ್ಯಘಟನೆಯೂ ಪ್ರಪಂಚದ ಅನೇಕ ದೇಶಗಳಿಗೆ ಮಾರ್ಗದರ್ಶಕವಾಗಿರುವುದು. ಪರಿಸ್ಥಿತಿಗನು ಸಾರವಾಗಿ ಸ್ವಲ್ಪ ಹೆಚ್ಚು ಕಡಿಮೆ ಮಾಡಿ ಅನೇಕ ದೇಶಗಳು ತಮ್ಮ ರಾಜ್ಯಘಟನೆ ಗಳನ್ನು ಇಂಗ್ಲಂಡಿನ ರೀತಿಯಂತೆ ಮಾಡಿಕೊಂಡಿರುವುವು. ಹಿಂದುಸ್ಥಾನವು ಬ್ರಿಟಿಶ್ ಸಾಮ್ರಾಜ್ಯದಲ್ಲಿಯ ಮಹತ್ವದ ಭಾಗವಾಗಿರುವುದರಿಂದ ಹಿಂದುಸ್ಥಾನ ದವರಿಗೆ ಇಂಗ್ಲಂಡಿನ ಇತಿಹಾಸದ ಪರಿಚಯವಿರುವುದು ಅವಶ್ಯವಾಗಿದೆ.

ಮುಂಬಯಿ ಯುನಿವರ್ಸಿಟಿಯ ಮೆಟ್ರಿಕ್ಯುಲೇಶನ್ ಪರೀಕ್ಷೆ, ನಾಗಪುರ ಯುನಿವರ್ಸಿಟಿಯ ಹೈಸ್ಕೂಲ್ ಪರೀಕ್ಷೆ, ಆಗ್ರಾ, ಅಜಮೀರ, ಮಧ್ಯ ಹಿಂದುಸ್ಥಾನ ಇವುಗಳಲ್ಲಿಯ ಶಾಲೆಗಳ ಕೊನೆಯ ಪರೀಕ್ಷೆ, ಶ್ರೀ ನಥೀಬಾಯಿ ಠಾಕರಸಿ ಸ್ತ್ರೀ ಯರ ಯುನಿರ್ವಸಿಟಿಯ ಪ್ರವೇಶಪರೀಕ್ಷೆ ಇವೆಲ್ಲವುಗಳ ಅಭ್ಯಾಸಕ್ರಮವನ್ನು ಅನುಸರಿಸಿ ಮೇಲೆ ಹೇಳಿದ ಪರೀಕ್ಷೆಗಳಿಗೋಸುಗ ಕೊನೆಯ ನಾಲ್ಕು ವರ್ಷಗಳಿಗೆ ಪಠ್ಯಪುಸ್ತಕವೆಂದು ಉಪಯೋಗವಾಗುವಂತೆ ಈ ಪುಸ್ತಕವನ್ನು ರಚಿಸಲಾಗಿದೆ. ಇಂಗ್ಲಂಡಿನ ಇತಿಹಾಸದಂತೆ ಅಲ್ಲಿಯ ರಾಜ್ಯಘಟನೆಯ ಉತ್ಕ್ರಾಂತಿ, ಈಗಿನ ರಾಜ್ಯಘಟನೆ, ಬ್ರಿಟಿಶ್ ಸಾಮ್ರಾಜ್ಯದ ಬೆಳವಣಿಗೆ, ಇಂಗ್ಲಂಡಿನಲ್ಲಿಯ ಬೇರೆ ಬೇರೆ ಕಾಲದ ಸಾಮಾಜಿಕ ಸ್ಥಿತಿ, ಔದ್ಯೋಗಿಕ ಮತ್ತು ವ್ಯಾಪಾರ ವಿಷಯಕ ಸಂಗತಿ ಗಳಲ್ಲಿ ಇಂಗ್ಲಂಡು ಮಾಡಿದ ಪ್ರಗತಿ ಮತ್ತು ರಾಷ್ಟ್ರಸಂಘ ಇವೆಲ್ಲವನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಪುಸ್ತಕದಲ್ಲಿಯ ಭಾಷೆ ಸುಲಭವಾಗುವಂತೆ ಪ್ರಯತ್ನವನ್ನು ಮಾಡಲಾಗಿದೆ.

ಇಂಗ್ಲಿಶ್ ಭಾಷೆಯಲ್ಲಿ ಇಂಗ್ಲಂಡಿನ ಇತಿಹಾಸದ ವಿಷಯದಲ್ಲಿ ಉತ್ಕೃಷ್ಟ ವಾದ ಅನೇಕ ಗ್ರಂಥಗಳಿರುವುವು. ಅವುಗಳಲ್ಲಿ ಹೆಚ್ಚಾಗಿ ಟಾವುಟ್, ಮೇರಿ ಯಟ್, ಮೆಕಲಿ ಜಾನ್, ಹಸಲ್ ವಾರ್ನರ ಮತ್ತು ಮಾರ್ಟಿನ್, ಟ್ರೆವಲಿನ್, ಗಾರ್ಡಿನರ, ರಮ್ಸೆ ಮೂರ್, ಟೌಸ್‌ವೆಲ್—ಲಿಂಗ್‌ಮೇಡ, ಗ್ರೀನ್, ಈಗರ್ಟನ್, ಕೀಥ್ ಮೊದಲಾದ ವಿದ್ವಜ್ಜನರ ಗ್ರಂಥಗಳನ್ನು ಈ ಪುಸ್ತಕವನ್ನು ಬರೆವಾಗ ನಾನು ಉಪಯೋಗಿಸಿಕೊಂಡಿರುವೆನು. ಈಯೆಲ್ಲ ಲೇಖಕರಿಗೆ ನಾನು ಋಣಿಯಾಗಿರುವೆನು.

ಪರಶುರಾಮ ಹರಿ ಬರ್ವೆ.

# ಅನುವಾದಕರ ಎರಡು ಮಾತುಗಳು

ಅಲ್ಪ ಕಾಲದಲ್ಲಿ ಜನರ ಮೆಚ್ಚುಗೆಯನ್ನು ಪಡೆದು ವಿದ್ಯಾರ್ಥಿಗಳಿಗೂ ಸಾಮಾನ್ಯ ವಾಚಕರಿಗೂ ಬಹಳ ಉಪಯುಕ್ತವಾಗಿ ಪರಿಣಮಿಸಿದ ಶ್ರೀ. ಪರಶುರಾಮ ಹರಿ ಬರ್ವೆ ಇವರ ಮರಾಠಿ ಗ್ರಂಥದ ಅನುವಾದವಿದು. ಮೂಲ ಮರಾಠಿ ಮತ್ತು ಅದರ ಗುಜರಾಥಿ ಮತ್ತು ಹಿಂದಿ ಅನುವಾದಗಳು ಆ ಆ ಭಾಷೆಯ ಅಭ್ಯಾಸಿಗಳಿಗೆ ಉಪಕಾರಿಯಾದಂತೆ ಈ ಅನುವಾದವಾದರೂ ಕನ್ನಡ ವಾಚಕರಿಗೆ ಪ್ರಯೋಜನಕಾರಿಯಾಗುವುದೆಂದು ಆಶಿಸುವೆವು.

ಅನುವಾದವು ಸಾಧ್ಯವಿದ್ದ ಮಟ್ಟಿಗೆ ಸರಲವಾಗಿಯೂ, ಸುಲಭವಾಗಿಯೂ, ಕನ್ನಡ ಶುದ್ಧ ಭಾಷಾಸರಣಿಗೆ ಅನುಗುಣವಾಗಿಯೂ ಇರುವಂತೆ ಎಚ್ಚರಪಟ್ಟಿರುವೆವು. ಎಲ್ಲಾ ಭಾಗದ ಜನರಿಗೆ ತಿಳಿವಂತಹ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಿರುವೆವು. ಹೆಚ್ಚಾಗಿ ರೂಢಿಗೆ ಬಂದು ನಮ್ಮವಂತೆ ಆದ ಪರಭಾಷೆಯ ಕೆಲವು ಸಾಂಕೇತಿಕ ಪದಗಳನ್ನು ಅಲ್ಲಲ್ಲಿ ಬಳಸಿರುವೆವು. ಇಷ್ಟಾದರೂ ಕನ್ನಡದ ರೀತಿಗೆ ಕುಂದಾಗದಂತೆ ಪ್ರಯತ್ನಿಸಿರುವೆವು.

ಇಂಗ್ಲಂಡಿನ ಇತಿಹಾಸವು ಪ್ರಬೋಧಕವಾದುದು. ಇದು ಭಾರತೀಯರಿಗೂ ಕನ್ನಡಿಗರಿಗೂ ಹೆಚ್ಚಾಗಿ ಮಾರ್ಗದರ್ಶಿಯಾಗಿದೆ. ಇಂಗ್ಲಂಡಿನ ಚರಿತ್ರೆಗೆ ಸಂಬಂಧಪಟ್ಟ ಇಷ್ಟೊಂದು ವಿಷಯಗಳನ್ನು ತಿಳಿಯಾಗಿ ಹೇಳುವ ಗ್ರಂಥಗಳು ಕನ್ನಡದಲ್ಲಿ ಇಲ್ಲ. ಈ ಕೊರತೆ ಈ ಗ್ರಂಥದಿಂದ ಕೆಲಮಟ್ಟಿಗಾದರೂ ಹೋಗಲೆಂದು ಹಾರಯಿಸುವೆವು.

ಕರ್ನಾಟಕ ಹೈಸ್ಕೂಲ್,
ಧಾರವಾಡ.
ಪ್ರಮಾಥಿ, ಚೈತ್ರ ಶುದ್ಧ ೧.
ಮಾರ್ಚ ೨೨, ೧೯೩೯.

ಸಾಲಿ ರಾಮಚಂದ್ರರಾಯ.

# ಅನುಕ್ರಮಣಿಕೆ

# ಪಠಗಳು



# ವಂಶವೃಕ್ಷ

# ಸಂಸ್ಮರಣೀಯ ಸಂಗತಿಗಳು

| | | |
|---|---|---|
| ಇ. ಸ. ಪೂ. | ೫೫ | ಇಂಗ್ಲಂಡಿನ ಮೇಲೆ ಸೀಝರನ ದಾಳಿ. |
| ಇ. ಸ. | ೪೧೦ | ಇಂಗ್ಲಂಡಿನಿಂದ ರೋಮನ್ ಸೈನ್ಯವು ತಿರುಗಿ ಒಯ್ಯಲ್ಪಟ್ಟಿತು. |
| ,, | ೫೯೭ | ಇಂಗ್ಲಂಡಿನಲ್ಲಿ ಕ್ರೈಸ್ತಧರ್ಮದ ಪ್ರಾರಂಭವು. |
| ,, | ೧೦೬೬ | ನಾರ್ಮನರ ಪ್ರಭುತ್ವವು ಇಂಗ್ಲಂಡಿನಲ್ಲಿ ಪ್ರಸ್ಥಾಪಿಸಲ್ಪಟ್ಟಿತು. |
| ,, | ೧೨೧೫ | ಇಂಗ್ಲಿಶ್ ಜನತೆ 'ಮೆಗ್ನಾ ಚಾರ್ಟಾ' ಸನದನ್ನು ಜಾನ್ ರಾಜನಿಂದ ದೊರಕಿಸಿತು. |
| ,, | ೧೨೯೫ | ಮಾದರಿಯ (model) ಪಾರ್ಲಿಮೆಂಟಿನ ಸ್ಥಾಪನೆ. |
| ,, | ೧೪೫೫ | 'ವಾರ್ ಆಫ್ ದಿ ರೋಜಿಸ್' ಯುದ್ಧದ ಪ್ರಾರಂಭವು. |
| ,, | ೧೪೮೫ | ಇಂಗ್ಲಂಡಿನಲ್ಲಿ ಟ್ಯೂಡರ ವಂಶದವರ ಪ್ರಭುತ್ವದ ಪ್ರಾರಂಭವು. |
| ,, | ೧೪೯೨ | ಅಮೇರಿಕೆಯ ಮತ್ತು ವೆಸ್ಟ ಇಂಡೀಜ ನಡುಗಡ್ಡೆಗಳ ಶೋಧವು. |
| ,, | ೧೫೩೪ | 'ಅಕ್ಟ ಆಫ್ ಸುಪ್ರಿಮಸಿ' ಕಾಯ್ದೆ ಪಾಸಾಯಿತು. |
| ,, | ೧೫೪೯ | ೬ನೆಯ ಎಡವರ್ಡನ ಆಳ್ಕೆಯಲ್ಲಿಯ ೧ನೆಯ ಪ್ರಾರ್ಥನೆಯ ಪುಸ್ತಕವು. |
| ,, | ೧೫೫೯ | 'ಅಕ್ಟ ಆಫ್ ಸುಪ್ರಿಮಸಿ' ಮತ್ತು 'ಅಕ್ಟ ಆಫ್ ಯುನಿಫಾರ್ಮಿಟಿ' ಕಾಯ್ದೆಗಳು ಪಾಸಾದುವು. |
| ,, | ೧೫೭೦ | ಪೋಪ ೫ನೆಯ ಪಾಯಸನು ಎಲಿಝಬೆಥ್ ರಾಣಿಯನ್ನು ಧರ್ಮಬಹಿಷ್ಕೃತೆಯಾಗಿ ಮಾಡುವನು. |
| ,, | ೧೫೮೭ | ಸ್ಕಾಟಲಂಡಿನ ರಾಜಕನ್ಯೆ ಮೇರಿ ಸ್ಟುವರ್ಟ ಇವಳು ಶೂಲಕ್ಕೇರಿಸಲ್ಪಟ್ಟಳು. |
| ,, | ೧೫೮೮ | ಸ್ಪೇನದ 'ಅಜಿಂಕ್ಯ ನೌಕಾದಳ'ದ ಪರಾಭವವು. |
| ,, | ೧೬೦೦ | ಇಂಗ್ಲಿಶ್ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ. |



ಬ್ರಿಟಿಶ ಸಾಮ್ರಾಜ್ಯದ ಬೆಳವಣಿಗೆ
ಇಂಗ್ಲಂಡಿನ ಮಹತ್ವವು ಮತ್ತು ವರ್ಚಸ್ಸು.
ಬರ್ಲಿನದ ಒಪ್ಪಂದ (೧೮೭೮)
ನೆಪೋಲಿಯನನ ಸೋಲು (೧೮೧೫)
ಫ್ರಾನ್ಸದ ಸೋಲು (೧೭೬೩)
ಎಲಿಝಬೆಥ್. ಸ್ಪೇನದ ಸೋಲು (೧೫೮೮)
೮ನೇ ಹೆನ್ರಿ
೭ನೇ ಹೆನ್ರಿ
ಇಂಗ್ಲಂಡ
೩ನೇ ವಿಲ್ಯಮ್
ಪ್ಯಾರಿಸದ ಒಪ್ಪಂದ (೧೭೬೩)
ವರ್ಸೇಲ್ಸದ ಒಪ್ಪಂದ (೧೭೮೩)
(೧೬೦೩)
ಬ್ರಿಟಿಶ ಸಾಮ್ರಾಜ್ಯ



ಆರನೆಯ ಜಾರ್ಜ ಬಾದಶಹರು

KING GEORGE VI

*Photo: Dorothy Wilding.*

# ಇಂಗ್ಲಂಡಿನ
# ಅರ್ವಾಚೀನ-ಇತಿಹಾಸವು

## ೧ನೆಯ ಪ್ರಕರಣವು

### ಪ್ರಾಚೀನ ಮತ್ತು ಮಧ್ಯಯುಗದ ಇಂಗ್ಲಂಡು

---

#### ಮಹತ್ವದ ಇಸ್ವಿಗಳು

| | | |
|---|---|---|
| ಇ. ಸ. ಪೂ. | ೫೫ | ಬ್ರಿಟನಿನ ಮೇಲೆ ಸೀಝರನ ದಾಳಿ. |
| ಇ. ಸ. ಪೂ. | ೪ | ಯೇಸುಕ್ರಿಸ್ತನ ಜನ್ಮವು. |
| ಇ. ಸ. | ೪೧೦ | ಬ್ರಿಟನನ್ನು ರೋಮನ್ ಸೈನ್ಯವು ಬಿಟ್ಟುಹೋಗುತ್ತದೆ. |
| ,, | ೪೪೯ | ಬ್ರಿಟನಿನ ಮೇಲೆ ಅಂಗಲ್ಸ, ಸ್ಯಾಕ್ಸನ್ಸ ಮತ್ತು ಜೂಟ್ಸ ಇವರ ದಾಳಿಗಳ ಪ್ರಾರಂಭವು. |
| ,, | ೪೭೬ | ಪಶ್ಚಿಮ ರೋಮನ್ ಸಾಮ್ರಾಜ್ಯದ ನಾಶವು. |
| ,, | ೧೦೬೬ | ಇಂಗ್ಲಂಡಿನಲ್ಲಿ ನಾರ್ಮನರ ಆಳ್ಕೆ. |
| ,, | ೧೨೧೫ | ಮ್ಯಾಗ್ನಾ ಚಾರ್ಟಾ. |
| ,, | ೧೨೯೫ | ಪಾರ್ಲಿಮೆಂಟ ಸಭೆಯ ಸ್ಥಾಪನೆ. |
| ,, | ೧೩೩೮ | ಶತವಾರ್ಷಿಕ ಯುದ್ಧದ ಪ್ರಾರಂಭವು. |
| ,, | ೧೪೫೩ | ತುರ್ಕಿ ಜನರು ಕಾನ್ಸ್ಟಂಟಿನೋಪಲನ್ನು ತೆಗೆದುಕೊಳ್ಳುತ್ತಾರೆ. ಪೂರ್ವರೋಮನ್ ಸಾಮ್ರಾಜ್ಯದ ನಾಶವು. |
| ,, | ೧೪೫೫-೮೫ | ಯಾರ್ಕ ಮತ್ತು ಲ್ಯಾಂಕೆಸ್ಟರ ಮನೆತನಗಳಲ್ಲಿಯ ಯುದ್ಧವು—ವಾರ್ ಆಫ್ ದಿ ರೋಜೆಸ್. |
| ,, | ೧೪೮೫ | ಟ್ಯೂಡರ ಆಳ್ಕೆಯ ಆರಂಭವು. |

## ೧. ಪ್ರಾಚೀನ ಯುಗವು, ಮಧ್ಯ ಯುಗವು ಮತ್ತು ಅರ್ವಾಚೀನ ಯುಗವು

**ಪ್ರಾಚೀನ ಯುಗವು** (ಬಹು ಪ್ರಾಚೀನ ಕಾಲದಿಂದ ಇ. ಸ. ೪೭೬ರ ವರೆಗೆ) – ಯುರೋಪದ ಮತ್ತು ಇಂಗ್ಲಂಡಿನ ಇತಿಹಾಸದಲ್ಲಿ ಪ್ರಾಚೀನ ಯುಗವು,

ಮಧ್ಯ ಯುಗವು ಮತ್ತು ಅರ್ವಾಚೀನ ಯುಗವು ಎಂದು ಮೂರು ಭಾಗಗಳು ಕಲ್ಪಿಸಲ್ಪಟ್ಟಿವೆ. ಯುರೋಪದಲ್ಲಿ ಪ್ರಾಚೀನಕಾಲದಲ್ಲಿ **ಗ್ರೀಸ** ಮತ್ತು **ರೋಮ** ಇವುಗಳಲ್ಲಿಯ ರಾಜ್ಯಗಳು ಪ್ರಮುಖವಾಗಿದ್ದುವು. ಇಸ್ವಿಸನಿನ ಮೊದಲು ೫ನೆಯ ಮತ್ತು ೪ನೆಯ ಶತಕಗಳಲ್ಲಿ ಗ್ರೀಸದಲ್ಲಿ ಅನೇಕ ರಾಜ್ಯಗಳಿದ್ದುವು; ಮತ್ತು ಅವು ವಿದ್ಯೆ, ಕಲೆ ಮತ್ತು ಆಚಾರವಿಚಾರ ಇವುಗಳಲ್ಲಿ ಮುಂದುವರಿದಿದ್ದುವು. ಇ. ಸ. ಪೂ. ೩೩೮ರಲ್ಲಿ **ಅಲೆಕ್‌ಝಾಂಡರನು** ಗ್ರೀಕ ರಾಜ್ಯಗಳ ಏಕೀಕರಣವನ್ನು ಮಾಡಿದನು ಮತ್ತು ಇರಾಣಿ ಸಾಮ್ರಾಜ್ಯವನ್ನು ನಾಶಗೊಳಿಸಿ ಗ್ರೀಕ ಜನರ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದನು (ಇ. ಸ. ಪೂ. ೩೩೫). ಆದರೆ ಅಲೆಕ್‌ಝಾಂಡರನ ಮರಣದನಂತರದಲ್ಲಿ (ಇ. ಸ. ಪೂ. ೩೨೩) ಎರಡು ಶತಕಗಳಲ್ಲಿ ಗ್ರೀಕ ಸಾಮ್ರಾಜ್ಯಕ್ಕೆ ಅಳಿಗಾಲವು ಒದಗಿತು, ಮತ್ತು ಕೊನೆಗೆ ಇ. ಸ. ಪೂ. ೧೪೮ರಲ್ಲಿ ಗ್ರೀಕ ಸಾಮ್ರಾಜ್ಯದ ಮೇಲೆ ರೋಮನ್ ಜನರ ಸತ್ತೆ ಪ್ರಸ್ಥಾಪಿಸಲ್ಪಟ್ಟಿತು. ರೋಮನ್ ಜನರ ಮೂಲ ರಾಜ್ಯವು ಇಟಲಿಯಲ್ಲಿಯ ರೋಮನಗರದಲ್ಲಿ ಇದ್ದಿತು. ಆದರೆ ಮೆಲ್ಲಮೆಲ್ಲನೆ ಆ ರಾಜ್ಯವು ದೊಡ್ಡದಾಗಿ ಭೂಮಧ್ಯಸಮುದ್ರದ ಸುತ್ತಲಿನ ಪ್ರದೇಶದಲ್ಲೆಲ್ಲ ಹಬ್ಬಿತು. ಈ ರೋಮನ್ ಸಾಮ್ರಾಜ್ಯವು ಬಹಳ ದೊಡ್ಡದಾದುದರಿಂದ ಅದರಲ್ಲಿ ಎರಡು ಭಾಗಗಳು ಮಾಡಲ್ಪಟ್ಟುವು. ಈ ಸಾಮ್ರಾಜ್ಯದ ಪಶ್ಚಿಮಭಾಗದ ರಾಜಧಾನಿ **ರೋಮ** ಮತ್ತು ಪೂರ್ವಭಾಗದ ರಾಜಧಾನಿ **ಕಾನ್‌ಸ್ಟಂಟಿನೋಪಲ್** ಆಗಿದ್ದುವು. ಈ ಎರಡು ಭಾಗಗಳ ಮೇಲೆ ಬೇರೆ ಬೇರೆ ಬಾದಶಹರು ರಾಜ್ಯಮಾಡುತ್ತಿದ್ದರು. ರೋಮನ್ ಜನರು ಸುಧಾರಿಸಿದವರಾಗಿದ್ದು ಸಂಸ್ಕೃತಿ, ವಿದ್ಯೆ, ಕಲಾಕೌಶಲ್ಯ ಇವುಗಳಲ್ಲಿ ಮುಂದುವರಿದಿದ್ದರು. ಆದರೆ ಈ ಸಾಮ್ರಾಜ್ಯದ ಮೇಲೆ ಯುರೋಪದ ಉತ್ತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಗಾಥ್ಸ, ವ್ಯಾಂಡಾಲ್ಸ, ಹನ್ಸ ಮತ್ತು ಫ್ರ್ಯಾಂಕ ಮೊದಲಾದ ಸಂಸ್ಕೃತಿಹೀನರ ಗುಂಪುಗಳ ದಾಳಿಗಳು ಎಷ್ಟೋ ವರ್ಷಗಳ ವರೆಗೆ ಅವ್ಯಾಹತವಾಗಿ ಸಾಗಿದ್ದುವು. ಕೊನೆಗೆ ಇ. ಸ. ೪೭೬ರಲ್ಲಿ ಅವರು ರೋಮ ನಗರವನ್ನು ಗೆದ್ದು **ಪಶ್ಚಿಮ ರೋಮನ್ ಸಾಮ್ರಾಜ್ಯವನ್ನು** ಮಣ್ಣುಗೂಡಿಸಿದರು ಮತ್ತು ರೋಮನ್ ಸಾಮ್ರಾಜ್ಯದ ಪ್ರದೇಶಗಳಲ್ಲಿ ತಮ್ಮ ವಸಾಹತುಗಳನ್ನೂ ರಾಜ್ಯಗಳನ್ನೂ ಸ್ಥಾಪಿಸಿದರು. ಈ ಜನರ ಆಗಮನದಿಂದ ಮೊದಲಿನ ರೋಮನ್ ಸಂಸ್ಕೃತಿ, ರೋಮನ್ ಆಚಾರವಿಚಾರಗಳು ಮತ್ತು ರೋಮನ್ ಜನರ ಜ್ಞಾನಭಾಂಡಾರವು ಮತ್ತು ಅವರ ಕಲಾಕೌಶಲ್ಯವು ಇವೆಲ್ಲವು ನಷ್ಟವಾಗಿ ವನ್ಯರೂ ಸಂಸ್ಕೃತಿಹೀನರೂ ಆದ ಜನರ ವರ್ಚಸ್ಸು ಸ್ಥಾಪಿತವಾಯಿತು. ಇದು

ಪ್ರಾಚೀನಯುಗದ ಅಂತಕಾಲವೆಂದೂ ಮಧ್ಯಯುಗದ ಪ್ರಾರಂಭಕಾಲವೆಂದೂ ಮನ್ನಿಸಲಾಗಿದೆ.

ಮಧ್ಯಯುಗವು (ಇ. ಸ. ೪೭೬—ಇ. ಸ. ೧೪೫೦)—ಮಧ್ಯಯುಗದ ಪ್ರಾರಂಭದಲ್ಲಿ ಯುರೋಪದಲ್ಲಿ ವನ್ಯಜನರ ಬೇರೆಬೇರೆಯಾದ ಅನೇಕ ರಾಜ್ಯಗಳಿದ್ದುವು. ಅಲ್ಲಿಯ ರಾಜರು ತಮ್ಮ ರಾಜ್ಯವು ಬೆಳೆಯಬೇಕೆಂದು ತಮ್ಮ ನೆರೆಯ ರಾಜ್ಯಗಳ ಮೇಲೆ ದಾಳಿಯನ್ನು ಮಾಡುತ್ತಿದ್ದರು, ಅದರಿಂದ ಆಗಾಗ ಯುದ್ಧಗಳು ಆಗುತ್ತಿದ್ದುವು. ಅಮೀರ ಉಮರಾವ ಮತ್ತು ಸರದಾರ ಇವರ ಕೈಯಲ್ಲಿ ಸತ್ತೆಯಿರುತ್ತಿತ್ತು. ಅವರು ಕೆಳಗಿನ ವರ್ಗಗಳ ಜನರನ್ನು ಪರಿಪರಿಯಾಗಿ ಪೀಡಿಸುತ್ತಿದ್ದರು. ಜ್ಞಾನ, ಕಲೆ ಮತ್ತು ವಿದ್ಯೆ ಇವುಗಳು ನಾಶವಾದುದರಿಂದ ಎಲ್ಲೆಲ್ಲಿಯೂ ಅಜ್ಞಾನಾಂಧಃಕಾರವು ಹಬ್ಬಿತ್ತು. ವನ್ಯರೂ ಸಂಸ್ಕೃತಿವಿಹೀನರೂ ಆದ ಈ ಜನರು ಕಾಲಕ್ರಮದಿಂದ ಸುಧಾರಿಸತೊಡಗಿದರು. ರೋಮನ್ ಜನರು ಕ್ರೈಸ್ತಧರ್ಮದವರಾಗಿದ್ದರು, ಮತ್ತು ಪಶ್ಚಿಮ ರೋಮನ್ ಸಾಮ್ರಾಜ್ಯದಲ್ಲಿಯ ಧಾರ್ಮಿಕ ವಿಷಯಗಳು ರೋಮನ್ ಧರ್ಮಾಧಿಕಾರಿಯ (ಬಿಶಪ್) ನಿಯಂತ್ರಣದಲ್ಲಿದ್ದುವು. ಈ ಧರ್ಮಾಧಿಕಾರಿಗೆ 'ಪೋಪ'ನೆಂದೆನ್ನುತ್ತಿದ್ದರು. ವನ್ಯಜನರು ಪಶ್ಚಿಮ ರೋಮನ್ ಸಾಮ್ರಾಜ್ಯವನ್ನು ನಾಶಗೊಳಿಸಿದ್ದರು; ಆದರೆ ಪೋಪನ ಪಟ್ಟವು ನಷ್ಟವಾಗಿದ್ದಿಲ್ಲ. ಆದುದರಿಂದ ಪೋಪನ ಪ್ರಯತ್ನದಿಂದ ಯುರೋಪದಲ್ಲಿ ಹಬ್ಬಿಕೊಂಡಿದ್ದ ವನ್ಯಜನರ ಗುಂಪುಗಳಲ್ಲಿ ಮೆಲ್ಲಮೆಲ್ಲನೆ ಶಿಕ್ಷಣದ ಮತ್ತು ಕ್ರೈಸ್ತಧರ್ಮದ ಪ್ರಸಾರವಾಗತೊಡಗಿತು. ಇದರಿಂದ ತಮ್ಮ ರಾಜ್ಯಗಳು ಬೇರೆಬೇರೆಯಾಗಿದ್ದರೂ ಧರ್ಮದಿಂದ ತಾವೆಲ್ಲರೂ ಒಂದು ಎಂಬ ಭಾವನೆ ಅವರಲ್ಲಿ ಒಡಮೂಡಿತು. ಅವರಲ್ಲಿಯ ತಾಮಸ ಮತ್ತು ಕ್ರೂರ ವೃತ್ತಿ ಹೋಗತೊಡಗಿತು. ಈ ವನ್ಯಜನರ ಗುಂಪುಗಳಲ್ಲಿಯ ಫ್ರ್ಯಾಂಕ್ ಗುಂಪಿನ ಮುಖ್ಯನಾದ ಚಾರ್ಲಮೇನ ಎಂಬ ಪರಾಕ್ರಮಿಯಾದ ರಾಜನು ೮ನೆಯ ಶತಕದ ಕೊನೆಯ ಭಾಗದಲ್ಲಿ ಜರ್ಮನಿ, ಫ್ರಾನ್ಸ್, ಸ್ಪೇನ್ ಮತ್ತು ಇಟಲಿ ಈ ಭಾಗಗಳನ್ನು ವಶಪಡಿಸಿಕೊಂಡು ಅಲ್ಲಿ ತನ್ನದೊಂದು ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಆಗ ರೋಮದಲ್ಲಿಯ ಪೋಪ ಲಿಯೊ ಇವನು ಇ. ಸ. ೮೦೦ರಲ್ಲಿ ದೊಡ್ಡ ಸಮಾರಂಭದಿಂದ ರೋಮ ನಗರದಲ್ಲಿ ರೋಮನ್ ಬಾದಶಹನೆಂದು ಅವನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ಪೋಪನ ಈ ಕೃತಿಯಿಂದ ಇ. ಸ. ೪೭೬ರಲ್ಲಿ ನಷ್ಟವಾದ ಪಶ್ಚಿಮ ರೋಮನ್ ಸಾಮ್ರಾಜ್ಯದ ಪುನಃಸ್ಥಾಪನೆಯಾಯಿತು. ಆದುದರಿಂದ ಈ ಸಾಮ್ರಾಜ್ಯಕ್ಕೆ ಪವಿತ್ರ ರೋಮನ್ ಸಾಮ್ರಾಜ್ಯ (Holy

Roman Empire) ಎಂಬ ಹೆಸರು ಪ್ರಾಪ್ತವಾಯಿತು ಮತ್ತು **ಚಾರ್ಲಮೇನನು ರೋಮನ್** ಬಾದಶಹನೆಂದು ಪ್ರಸಿದ್ಧಿಯನ್ನು ಪಡೆದನು. ಮುಂದೆ ೧೨ನೆಯ ಶತಕದಿಂದ ಈ ಸಾಮ್ರಾಜ್ಯಕ್ಕೆ ಒಳಪಟ್ಟ ದೇಶಗಳು ಸ್ವತಂತ್ರವಾಗತೊಡಗಿದುವು, ಮತ್ತು ರೋಮನ ಬಾದಶಹನ ಆಳ್ಕೆ ಜರ್ಮನಿಯಷ್ಟಕ್ಕೆ ಮರ್ಯಾದಿತವಾಯಿತು. ಇದರಿಂದ ರೋಮನ್ ಬಾದಶಹನು **ಜರ್ಮನ್ ಬಾದಶಹನಾದನು.** ಈ ಮಧ್ಯಯುಗದ ಕೊನೆ ಇ. ಸ. ೧೪೫೦ರ ಒಳಹೊರಗೆ ಆಯಿತು.

**ಅರ್ವಾಚೀನ ಯುಗವು** (ಇ. ಸ. ೧೪೫೦ರಿಂದ ಮುಂದೆ)—ಇ. ಸ. ೧೪೫೦ರ ಒಳಹೊರಗೆ ಅರ್ವಾಚೀನ ಯುಗದ ಆರಂಭವಾಯಿತು. ಇ. ಸ. ೧೪೫೩ರಲ್ಲಿ ತುರ್ಕಿ ಜನರು ಪೂರ್ವ ರೋಮನ್ ಸಾಮ್ರಾಜ್ಯದ ರಾಜಧಾನಿಯಾದ **ಕಾನ್ಸ್ಟಂಟಿನೋಪಲ್** ಪಟ್ಟಣವನ್ನು ವಶಪಡಿಸಿಕೊಂಡು ಆ ಸಾಮ್ರಾಜ್ಯವನ್ನು ಮಣ್ಣುಗೂಡಿಸಿದರು. ಆದುದರಿಂದ ಅಲ್ಲಿ ಇರುತ್ತಿದ್ದ ಅನೇಕ ಗ್ರೀಕ ಮತ್ತು ರೋಮನ್ ಪಂಡಿತರೂ ವಿದ್ವಾಂಸರೂ ಆ ಪಟ್ಟಣವನ್ನು ಬಿಡಬೇಕಾಯಿತು. ಈ ಜನರು ಪ್ರಾಚೀನ ಕಾಲದ ಗ್ರೀಕ ಮತ್ತು ರೋಮನ್ ತತ್ವಜ್ಞರ ಮತ್ತು ಕಲ್ಪಕ ವಿದ್ವಜ್ಜನರ ಹಸ್ತಲಿಖಿತ ಗ್ರಂಥಗಳನ್ನು ತಮ್ಮೊಡನೆ ಒಯ್ದರು, ಮತ್ತು ಇಟಲಿಯಲ್ಲಿಯೂ ಯುರೋಪದಲ್ಲಿಯ ಇತರ ದೇಶಗಳಲ್ಲಿಯೂ ಆಶ್ರಯಕ್ಕೋಸುಗ ಹೋಗಿ ವಾಸಿಸಿದರು. ಅವರು ಆ ಆ ಸ್ಥಳಗಳಲ್ಲಿಯ ಜನರಿಗೆ ಪ್ರಾಚೀನ ಗ್ರಂಥಗಳಲ್ಲಿಯ ಜ್ಞಾನವನ್ನು ಕೊಡುತ್ತ ತಮ್ಮ ಚರಿತಾರ್ಥವನ್ನು ಸಾಗಿಸಲಾರಂಭಿಸಿದರು. ಅವರ ಪ್ರಯತ್ನದಿಂದ ಮಧ್ಯಯುಗದಲ್ಲಿ ಅಂಧಃಕಾರದಲ್ಲಿದ್ದ ಯುರೋಪದಲ್ಲಿಯ ಜನರಿಗೆ ಜ್ಞಾನದ ಪ್ರಕಾಶವು ದೊರೆತು ಅವರ ದೃಷ್ಟಿ ವಿಶಾಲವಾಯಿತು. ಅವರ ಆಚಾರವಿಚಾರಗಳಲ್ಲಿ, ಧಾರ್ಮಿಕ ವಿಚಾರಗಳಲ್ಲಿ, ಸಾಮಾಜಿಕ ಮತ್ತು ರಾಜಕೀಯ ಕಲ್ಪನೆಗಳಲ್ಲಿ ಕ್ರಾಂತಿಯೊದಗಲು ಆರಂಭವಾಯಿತು. ಇದು ಮಧ್ಯಯುಗದ ಅಂತಕಾಲವೆಂದೂ ಅರ್ವಾಚೀನ ಯುಗದ ಪ್ರಾರಂಭಕಾಲವೆಂದೂ ಮನ್ನಿಸಲಾಗಿದೆ.

## ೨. ಇಂಗ್ಲಂಡಿನ ಪ್ರಾಚೀನ ನಿವಾಸಿಗಳು

**ಬ್ರಿಟನರು**—ಬಹು ಪ್ರಾಚೀನ ಕಾಲದಲ್ಲಿ ಇಂಗ್ಲಂಡ್ ದೇಶಕ್ಕೆ **ಶ್ವೇತ ದ್ವೀಪ** (Albion)ವೆಂದು ಹೆಸರಿದ್ದಿತು. ಇಂಗ್ಲಂಡಿನ ಪೂರ್ವ ಸಮುದ್ರತೀರದ ಬಿಳಿಮಣ್ಣಿನ ಬೆಟ್ಟಗಳಿಂದ ಈ ಹೆಸರು ಆ ದೇಶಕ್ಕೆ ಬಂದಿರುವುದು. ಆ ಕಾಲ

ದಲ್ಲಿ ಇಂಗ್ಲಂಡಿನಲ್ಲಿ ದಟ್ಟಾದ ಅರಣ್ಯಗಳಿದ್ದುವು. ಅವುಗಳ ಬಹು ಭಾಗವು ಜವಳು ಭೂಮಿಯಾಗಿತ್ತು. ಆ ಪ್ರದೇಶಗಳಲ್ಲಿ ತೋಳ, ಕರಡಿ, ಕಾಡುಹಂದಿ ಮೊದಲಾದ ವನ್ಯಮೃಗಗಳು ಅನೇಕವಾಗಿದ್ದುವು. ಬ್ರಿಟನಿನಲ್ಲಿ ಆಗ ಮನುಷ್ಯ ವಸ್ತಿಯೂ ಇದ್ದಿತು. ಈ ಜನರು ಈ ನಡುಗುಡ್ಡೆಗೆ ಬಹು ಪ್ರಾಚೀನ ಕಾಲದಲ್ಲಿ ಯುರೋಪ್ಖಂಡದಲ್ಲಿಯ ಆಯ್‌ಬೀರಿಯಾ (ಸ್ಪೇನ ಮತ್ತು ಪೋರ್ತುಗಾಲ್) ಮತ್ತು ಗಾಲ್ (ಫ್ರಾನ್ಸ) ಈ ದೇಶಗಳಿಂದ ಬಂದರು. ಗಾಲ್ ಎಂಬಲ್ಲಿಂದ ಬಂದವರು **ಕೆಲ್ಟ** ವಂಶದವರಿದ್ದರು. ಈ ಎಲ್ಲ ಜನರು **ಬ್ರಿಟನ**ರೆಂದು ಕರೆಯಲ್ಪಡುತ್ತಿದ್ದರು. ಬ್ರಿಟನರ ಬೇರೆಬೇರೆ ಗುಂಪುಗಳಿದ್ದು ಅವು ದೇಶದಲ್ಲಿಯ ಎಲ್ಲ ಭಾಗಗಳಲ್ಲಿ ನೆಲಸಿದ್ದುವು. ಅವುಗಳಲ್ಲಿ ಪಶ್ಚಿಮಭಾಗದಲ್ಲಿ ವಾಸಿಸುತ್ತಿದ್ದ ಗುಂಪುಗಳು ವನ್ಯಸ್ಥಿತಿಯಲ್ಲಿದ್ದುವು. ಅಲ್ಲಿಯ ಜನರಿಗೆ ಹಸಿ ಮಾಂಸವು ಅನ್ನವಾಗಿತ್ತು, ಮೃಗಚರ್ಮವು ವಸ್ತ್ರವಾಗಿತ್ತು. ಒಕ್ಕಲತನವನ್ನೂ ನೇಕಾರಿಕೆಯನ್ನೂ ಅವರು ಅರಿಯರು. ಆದರೆ ಬ್ರಿಟನಿನ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ವಾಸಿಸುತ್ತಿದ್ದ ಗುಂಪುಗಳು ಪರಕೀಯ ವ್ಯಾಪಾರಸ್ಥರ ಮತ್ತು ಪ್ರವಾಸಿಗಳ ಸಹವಾಸದಿಂದ ಕೆಲಮಟ್ಟಿಗೆ ಸುಧಾರಿಸಿದ್ದರು. ಅವರು ಒಕ್ಕಲತನವನ್ನೂ ನೇಕಾರಿಕೆಯನ್ನೂ ಬಲ್ಲರು. ಧಾತುಗಳ ಉಪಯೋಗವೂ ಅವರಿಗೆ ಗೊತ್ತಿತ್ತು. ಪ್ರತಿಯೊಂದು ಗುಂಪಿಗೆ ಒಬ್ಬ ನಾಯಕನು ಅಥವಾ ರಾಜನು ಇರುತ್ತಿದ್ದನು. ಅವರವರಲ್ಲಿ ಆಗಾಗ ಯುದ್ಧಗಳಾಗುತ್ತಿದ್ದುವು. ಯುದ್ಧಗಳಲ್ಲಿ ಅವರು ಕತ್ತಿ, ಭಲ್ಲೆ, ಢಾಲು ಮೊದಲಾದುವನ್ನು ಉಪಯೋಗಿಸುತ್ತಿದ್ದರು, ಮತ್ತು ಕುದುರೆಗಳಿಂದ ಎಳೆಯಲ್ಪಡುವ ಸದ್ದುಮುದ್ದಾದ ಬಂಡಿಗಳನ್ನೂ ಉಪಯೋಗಿಸುತ್ತಿದ್ದರು. ಯುರೋಪದೊಳಗಿನ ವ್ಯಾಪಾರಸ್ಥರಿಗೆ ಈ ದೇಶವು ಗೊತ್ತಾದ ಬಳಿಕ ಅವರು ಇಲ್ಲಿಗೆ ಬರಲಾರಂಭಿಸಿ ಬ್ರಿಟನಿನ ಜನರಿಂದ ಸೀಸು, ಚರ್ಮ, ಸತುವು ಮೊದಲಾದ ಪದಾರ್ಥಗಳನ್ನು ತೆಗೆದುಕೊಂಡು ಅವರಿಗೆ ಉಪ್ಪು, ಮಣ್ಣಿನ ಪಾತ್ರೆ, ಶಸ್ತ್ರ, ಬಟ್ಟೆ ಮುಂತಾದ ಪದಾರ್ಥಗಳನ್ನು ಕೊಡುತ್ತಿದ್ದರು. ಅವರ ಆರಂಭದ ವ್ಯಾಪಾರವು ಈ ಬಗೆಯದಾಗಿತ್ತು. ಬ್ರಿಟನ ಜನರಿಂದ ಈ ದೇಶಕ್ಕೆ ಬ್ರಿಟನ್ ಎಂದು ಹೆಸರು ಬಂದಿತು.

ಧಾರ್ಮಿಕ ಕಲ್ಪನೆಗಳೂ ಮಂದಿಗಳೂ—ಬ್ರಿಟನರು ಮೂರ್ತಿಪೂಜಕರಾಗಿದ್ದರು. ಸೂರ್ಯ, ಚಂದ್ರ ಮತ್ತು ನಕ್ಷತ್ರಗಳನ್ನು ದೇವತೆಗಳೆಂದು ತಿಳಿದು ಅವರು ಅವನ್ನು ಪೂಜಿಸುತ್ತಿದ್ದರು. ಈ ದೇವತೆಗಳನ್ನು ಸಂತುಷ್ಟಗೊಳಿಸಲು ಅವರು ಪಶುಗಳ ಮತ್ತು ಮನುಷ್ಯರ ಬಲಿಗಳನ್ನು ಕೊಡುತ್ತಿದ್ದರು. ಓಕ ಎಂಬ

ವೃಕ್ಷವೂ ಅವರಿಗೆ ಪೂಜ್ಯವಾಗಿತ್ತು. ಅವರ ಧಾರ್ಮಿಕ ಕ್ರಿಯೆಗಳೆಲ್ಲವೂ ಓಕ ವೃಕ್ಷದ ಕೆಳಗೆ ಆಗುತ್ತಿದ್ದುವು. ಬ್ರಿಟನರ ಧರ್ಮಾಧಿಕಾರಿಗಳಿಗೆ ಡ್ರುಯಿಡ್ ಎಂದು ಹೆಸರು. ಬ್ರಿಟನರ ಮೇಲೆ ಡ್ರುಯಿಡರ ವರ್ಚಸ್ಸು ಬಹಳವಾಗಿತ್ತು. ಅವರು ಬ್ರಿಟನರ ಧರ್ಮಕಾರ್ಯಗಳನ್ನು ಮಾಡಿಸುವುದಲ್ಲದೆ ಅವರ ಜಗಳಗಳನ್ನು ಬಗೆಹರಿಸುತ್ತಿದ್ದರು, ಮತ್ತು ಅವರಿಗೆ ಶಿಕ್ಷಣವನ್ನು ಕೊಡುತ್ತಿದ್ದರು. ಬ್ರಿಟನ ಜನರಲ್ಲಿ ನಮ್ಮಲ್ಲಿಯಂತೆ ವಂದಿಗಳೂ ಇರುತ್ತಿದ್ದರು. ಅವರು ಶೂರ ಪುರುಷರ ಪರಾಕ್ರಮಗಳನ್ನು ಹಾಡುಕಟ್ಟಿ ಜನರ ಮುಂದೆ ಹಾಡಿ ಅವರ ಮನೋರಂಜನೆಯನ್ನು ಮಾಡುತ್ತಿದ್ದರು.

## ೩. ಇಂಗ್ಲಂಡಿನಲ್ಲಿ ರೋಮನ್ ಜನರ ಆಳ್ಕೆ

(ಇ. ಸ. ಪೂ. ೫೫ರಿಂದ ಇ. ಸ. ೪೧೦.)

**ರೋಮನ ಸಾಮ್ರಾಜ್ಯವು**—ಇ. ಸ. ಪೂ. ೫೫ರ ಸುಮಾರಕ್ಕೆ ರೋಮನ್ ಜನರು ಬಲಾಢ್ಯರಾಗಿದ್ದರು. ಇಟಲಿಯಲ್ಲಿಯ ರೋಮ ನಗರವು ಅವರ ರಾಜಧಾನಿಯ ಸ್ಥಳವಾಗಿತ್ತು. ಇಲ್ಲಿಯ ಜನರಿಗೆ ರೋಮನರೆಂಬ ಹೆಸರು ಬಂದುದು ಈ ರೋಮದಿಂದೆಯೆ. ಇವರು ಮೊತ್ತಮೊದಲು ಇಟಲಿಯನ್ನು ಅನಂತರದಲ್ಲಿ ಭೂಮಧ್ಯ ಸಮುದ್ರದ ಸುತ್ತಲಿರುವ ಗ್ರೀಸ, ಸೀರಿಯಾ, ಆಸಿಯಾ ಮಾಯನರ, ಆಫ್ರಿಕೆಯ ಉತ್ತರದಂಡೆ, ಸ್ಪೇನ ಮತ್ತು ಫ್ರಾನ್ಸ ಮೊದಲಾದ ದೇಶಗಳನ್ನು ಗೆದ್ದರು. ಇದರಿಂದ ಅವರ ಸಾಮ್ರಾಜ್ಯವು ಬಹು ಬಲಾಢ್ಯವಾಯ್ತು. ಇದುವೆ **ರೋಮನ್ ಸಾಮ್ರಾಜ್ಯವು**. ಈ ಸಾಮ್ರಾಜ್ಯವು ಆಗ ಲೋಕಸತ್ತಾತ್ಮಕವಾಗಿತ್ತು, ಆದರೆ ಇ. ಸ. ೨೭ರಿಂದ ಅದು ರಾಜಸತ್ತಾತ್ಮಕವಾಯ್ತು. ರೋಮನರು ಸುಧಾರಿಸಿದವರಾಗಿದ್ದರು. ಅವರ ರಾಜ್ಯಕಾರಭಾರದ ಪದ್ಧತಿ ಚೆನ್ನಾಗಿತ್ತು. ಅವರು ತಮ್ಮ ಕಾಯ್ದೆಕಾನೂನುಗಳನ್ನು ನಿಶ್ಚಯಿಸಿದ್ದರು. ಅದರಂತೆಯೆ ಅವರು ಕಲಾಕೌಶಲ್ಯದ ವಿವಿಧ ಪದಾರ್ಥಗಳನ್ನೂ ನಿರ್ಮಿಸುತ್ತಿದ್ದರು. ಇದಲ್ಲದೆ ಸಾಮ್ರಾಜ್ಯದ ದೂರದೂರದ ಭಾಗಗಳಿಂದ ಸಂಪತ್ತು, ಕಲಾಕೌಶಲ್ಯದ ಮಾದರಿಗಳು, ವಿದ್ವಜ್ಜನರು, ಗುಣಿಗಳು ಇವೆಲ್ಲವುಗಳ ಓಘವು ಸತತವಾಗಿ ರೋಮನಗರದ ಕಡೆಗೆ ಹರಿಯುತ್ತಿದ್ದಿತು. ಇದರಿಂದ ಈ ನಗರದ ವೈಭವವು ಬಹಳವಾಗಿ ವೃದ್ಧಿಗೊಂಡಿತ್ತು. ರೋಮನ್ ಜನರು ತಾವು ಗೆದ್ದ ದೂರದೂರದ ದೇಶಗಳಲ್ಲಿ ರಾಜ್ಯಮಾಡಲು ತಮ್ಮ ಅಧಿಕಾರಿಗಳನ್ನು (ಗವರ್ನರ

ರನ್ನು) ಕಳಿಸುತ್ತಿದ್ದರು, ಮತ್ತು ಅಲ್ಲಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸುತ್ತಿದ್ದರು. ಈ ಕಾರಣದಿಂದ ರೋಮನರ ಸಹವಾಸದಿಂದ ಆ ಆ ಸ್ಥಳಗಳಲ್ಲಿಯ ವನ್ಯಸ್ಥಿತಿಯಲ್ಲಿದ್ದ ಜನರೂ ಸುಧಾರಿಸತೊಡಗಿದರು.

**ಬ್ರಿಟನಿನಲ್ಲಿ ರೋಮನರ ಆಳ್ಕೆ**—ಬ್ರಿಟನ್ ಜನರು ಅರ್ಧವನ್ಯಸ್ಥಿತಿಯಲ್ಲಿದ್ದಾಗ ರೋಮನ್ ಸಾಮ್ರಾಜ್ಯದಲ್ಲಿಯ ಪ್ರಸಿದ್ಧ ಸೇನಾಪತಿಯೂ ರಾಜಕಾರಣಿ ಪುರುಷನೂ ಆದ **ಜ್ಯೂಲಿಯಸ್ ಸೀಝರನು ಗಾಲ್** (ಫ್ರಾನ್ಸ) ದೇಶವನ್ನು ಗೆದ್ದನು. ಗಾಲ್‌ದೇಶದಲ್ಲಿಯ ಜನರಿಗೆ ರೋಮನರ ವಿರುದ್ಧವಾಗಿ ಬ್ರಿಟನರು ಸಾಹಾಯ್ಯವಿತ್ತರು. ಅದರಿಂದ ಸೀಝರನು ಬ್ರಿಟನ್ ನಡುಗಡ್ಡೆಯನ್ನು ಗೆಲ್ಲಲು ನಿಶ್ಚಯಿಸಿ ಇ. ಸ. ಪೂ. ೫೫ನೆಯ ವರ್ಷ ೮೦ ಹಡಗುಗಳನ್ನೂ ದೊಡ್ಡದಾದ ಸೈನ್ಯವನ್ನೂ ತೆಗೆದುಕೊಂಡು ಬಂದು ಬ್ರಿಟನಿನ ಮೇಲೆ ದಾಳಿಮಾಡಿದನು. ಈ ಪರಶತ್ರುವನ್ನು ಇದಿರಿಸಲು ಬ್ರಿಟನರು ಸಿದ್ಧರಿದ್ದರು. ಅವರು ತಮ್ಮ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ರೋಮನ್ ಸೈನ್ಯದೊಡನೆ ಜೀವದ ಹಂಗುದೊರೆದು ಕಾದಿದರು. ಆದರೆ ರೋಮನರ ಸುಧಾರಿಸಿದ ಶಸ್ತ್ರಾಸ್ತ್ರಗಳ ಮತ್ತು ಶಿಸ್ತಿನ ಮುಂದೆ ಅವರ ಆಟವು ಸ್ವಲ್ಪವೂ ಸಾಗಲಿಲ್ಲ. ಕೊನೆಗೆ ಅವರು ಸೋತರು. ಬ್ರಿಟನಿನ ಪೂರ್ವ ಮತ್ತು ದಕ್ಷಿಣ ಸಮುದ್ರತೀರಗಳ ಪ್ರದೇಶಗಳಲ್ಲಿ ರೋಮನರ ಸತ್ತೆ ಸ್ಥಾಪಿತವಾಯಿತು. ವಿಜಯಶಾಲಿಯಾದ ಜ್ಯೂಲಿಯಸ ಸೀಝರನು ಎಷ್ಟೋ ಸಂಪತ್ತನ್ನೂ ಬಂದಿಗಳನ್ನೂ ತನ್ನೊಡನೆ ತೆಗೆದುಕೊಂಡು ರೋಮಕ್ಕೆ ತಿರುಗಿ ಹೋದನು. ಜ್ಯೂಲಿಯಸ್ ಸೀಝರನು ಲೇಖಕನೂ ಆಗಿದ್ದನು. ಆತನು ಬರೆದಿಟ್ಟ ವೃತ್ತಾಂತದಿಂದ ನಮಗೆ ಬ್ರಿಟನರ ಪ್ರಾಚೀನಕಾಲದ ಇತಿಹಾಸವು ಕೆಲಮಟ್ಟಿಗೆ ಗೊತ್ತಾಗುತ್ತದೆ.

**ಬ್ರಿಟನರೊಡನೆ ಯುದ್ಧಗಳು**—ಇದಾದ ಬಳಿಕ ಮುಂದೆ ಒಂದು ನೂರು ವರ್ಷಗಳ ವರೆಗೆ ರೋಮನರ ಲಕ್ಷ್ಯವು ಬ್ರಿಟನ್ ನಡುಗಡ್ಡೆಯ ಕಡೆಗೆ ಅಷ್ಟು ಹೋಗಲಿಲ್ಲ. ಆದರೆ ಕ್ರಮೇಣ ಈ ನಡುಗಡ್ಡೆಯಲ್ಲಿಯ ಬೇರೆಬೇರೆ ಭಾಗಗಳನ್ನು ಗೆಲ್ಲಲು ರೋಮನರು ಮತ್ತೆ ದಾಳಿಮಾಡಲಾರಂಭಿಸಿದರು. ಆಗಲೂ ಬ್ರಿಟನರು ಅವರನ್ನು ಬಲವಾಗಿ ವಿರೋಧಿಸಿದರು. ಕೊನೆಗೆ ಎಂಟು ವರ್ಷಗಳ ವರೆಗೆ ಎಡೆಬಿಡದೆ ಯುದ್ಧವು ನಡೆದ ಬಳಿಕ ಇ. ಸ. ೫೦ರಲ್ಲಿ ರೋಮನರು ಬ್ರಿಟನಿನಲ್ಲಿಯ ಒಂದು ಗುಂಪಿನ ಶೂರನೂ ಪರಾಕ್ರಮಿಯೂ ಆದ **ಕಾರಕ್ಟೇಟಸ** ಎಂಬ ಅರಸನನ್ನು ಸೋಲಿಸಿ ಅವನನ್ನು ಬಂದಿಯಾಗಿ ಮಾಡಿ ರೋಮನಗರಕ್ಕೆ ಕಳುಹಿದರು. ಬ್ರಿಟನರ ಇನ್ನೊಂದು ಗುಂಪಿನ **ಬೋಡಿಶಿಯಾ** ಎಂಬ ರಾಣಿ ತನ್ನ ಜನರನ್ನು ಪ್ರೋತ್ಸಾಹಿಸಿ ರೋಮನರೊಡನೆ ಯುದ್ಧಕ್ಕೆ ನಿಂತಳು. ಆದರೆ ಅವಳಿಗೂ

ಯಶವು ದೊರೆಯಲಿಲ್ಲ. ಅವಳು ಕೊನೆಗೆ ಹತಾಶೆಯಾಗಿ ರೋಮನರ ಕೈಯಲ್ಲಿ ತಾನು ಸಿಕ್ಕಬಾರದೆಂದು ವಿಷವನ್ನು ತೆಗೆದುಕೊಂಡು ಆತ್ಮಹತ್ಯೆಯನ್ನು ಮಾಡಿಕೊಂಡಳು. ಆ ಬಳಿಕ ರೋಮನರು ಡ್ರುಯಿಡರನ್ನು ನಾಶಗೊಳಿಸಿದರು. ಇದರಿಂದ ಬ್ರಿಟನರ ಮೇಲಿನ ಧರ್ಮಗುರುಗಳ ವರ್ಚಸ್ಸು ಸಂಪೂರ್ಣವಾಗಿ ಇಲ್ಲದಂತಾಯ್ತು. ಅದರಿಂದ ಧರ್ಮ, ವಾಙ್ಮಯ, ಆಚಾರವಿಚಾರ ಈ ವಿಷಯಗಳಲ್ಲಿ ಬ್ರಿಟನರ ಪರಂಪರೆ ನಷ್ಟವಾಗಿ ಅವರು ಸಂಪೂರ್ಣವಾಗಿ ರೋಮನರ ವಶಕ್ಕೊಳಗಾದರು.

**ಗಡಿನಾಡುಗಳ ರಕ್ಷಣೆ**—ಬ್ರಿಟನಿನಲ್ಲಿಯ ರೋಮನ್ ರಾಜ್ಯದ ಉತ್ತರದ ಗಡಿನಾಡಿನಾಚೆಯ ಗುಡ್ಡಗಾಡಿನ ಪ್ರದೇಶದಲ್ಲಿ (ಈಗಿನ ಸ್ಕಾಟಲಂಡ್) ಪಿಕ್ಟ ಎಂಬ ಜನರೂ ಆಯರ್ಲಂಡಿನಿಂದ ಬಂದ **ಸ್ಕಾಟ್** ಎಂಬ ಜನರೂ ವಾಸಿಸುತ್ತಿದ್ದರು. ಅವರು ಒಮ್ಮೊಮ್ಮೆ ರೋಮನರ ಪ್ರದೇಶಗಳ ಮೇಲೆ ದಾಳಿಮಾಡುತ್ತಿದ್ದರು. ಆದುದರಿಂದ ಬ್ರಿಟನಿನ ರೋಮನ ಗವರ್ನರನಾದ **ಅಗ್ರಿಕೋಲಾ** ಎಂಬವನು ಉತ್ತರದ ಗಡಿನಾಡಿನಲ್ಲಿ ಅಲ್ಲಲ್ಲಿ ಕೋಟೆಗಳನ್ನು ಕಟ್ಟಿಸಿದುದಲ್ಲದೆ ಒಂದು ಗೋಡೆಯನ್ನಾದರೂ ಕಟ್ಟಿಸಿದನು. ಅದರಿಂದ ಈ ಜನರ ಉಪದ್ರವವು ಕೆಲಮಟ್ಟಿಗೆ ಕಡಿಮೆಯಾಯ್ತು. ಯುರೋಪಖಂಡದ ಪಶ್ಚಿಮ ಸಮುದ್ರತೀರದ ಮೇಲಿನ ಸ್ಯಾಕ್ಸನಿ ಮತ್ತು ಡೆನ್ಮಾರ್ಕ ಈ ದೇಶಗಳಲ್ಲಿ ವಾಸಿಸುವ ಸ್ಯಾಕ್ಸನರು ಬ್ರಿಟನಿನ ಪೂರ್ವ ಸಮುದ್ರತೀರಕ್ಕೆ ಬಹಳವಾಗಿ ಉಪದ್ರವವೀಯುತ್ತಿದ್ದರು. ಅವರ ಉಪದ್ರವವನ್ನು ತಪ್ಪಿಸಲು ಬ್ರಿಟನಿನ ರೋಮನ ಗವರ್ನರನು ಆ ಭಾಗದಲ್ಲಿಯೂ ಒಬ್ಬ ಅಧಿಕಾರಿಯ ನೇತೃತ್ವದಲ್ಲಿ ಒಂದು ಹಡಗುಪಡೆಯನ್ನಿಟ್ಟು ಬ್ರಿಟನಿನ ರಕ್ಷಣೆಯನ್ನು ಮಾಡಿದನು.

**ರೋಮನ್ ಸೈನ್ಯವು ಬ್ರಿಟನನ್ನು ಬಿಟ್ಟು ಹೋದುದು (೪೧೦)**—ರೋಮನರು ಬ್ರಿಟನಿನಲ್ಲಿ ೪೦೦ ವರ್ಷಗಳವರೆಗೆ ರಾಜ್ಯಮಾಡಿದರು. ಇ. ಸ. ೪ನೆಯ ಶತಕದ ಕೊನೆಯಲ್ಲಿ ಇಟಲಿ ಮತ್ತು ರೋಮ ಇವುಗಳ ಮೇಲೆಯೆ ಯುರೋಪದ ಉತ್ತರಭಾಗದಲ್ಲಿದ್ದ ವನ್ಯಜನರ ಗುಂಪುಗಳ ದಾಳಿಗಳು ಬರತೊಡಗಿದುವು. ಆದುದರಿಂದ ರೋಮದ ರಕ್ಷಣೆಗೋಸುಗ ದೂರದೇಶದಲ್ಲಿಯ ತನ್ನ ಸೈನ್ಯವನ್ನು ರೋಮನ್ ಬಾದಶಹನಾದ **ಹೊನೊರಿಯಸನು** ತಿರುಗಿ ಕರೆಯಿಸಿಕೊಂಡನು. ಈ ಕಾರಣದಿಂದ ಇ. ಸ. ೪೧೦ರಲ್ಲಿ ರೋಮನ್ ಸೈನ್ಯವು ಅಧಿಕಾರಿಗಳೊಡನೆ ಬ್ರಿಟನನ್ನು ಬಿಟ್ಟುಹೋಯ್ತು.

**ಬ್ರಿಟನಿನ ಮೇಲೆ ರೋಮನರ ಆಳ್ಕೆಯ ಪರಿಣಾಮವು**—ರೋಮನ

ಜನರು ವಿದ್ಯೆ, ಕಲೆ ಮತ್ತು ಸಂಸ್ಕೃತಿ ಈ ವಿಷಯಗಳಲ್ಲಿ ಸುಧಾರಿಸಿದವರಿದ್ದರು. ಆದುದರಿಂದ ಅವರ ಸಹವಾಸದಿಂದ ಬ್ರಿಟನರಲ್ಲಿಯೂ ಎಷ್ಟೋ ಸುಧಾರಣೆ ಯಾಯ್ತು. ರೋಮನರ ಆಚಾರವಿಚಾರಗಳನ್ನು, ಲ್ಯಾಟಿನ್ ಭಾಷೆಯನ್ನು ಮತ್ತು ಅವರ ಉಡುಪನ್ನು ಬ್ರಿಟನರು ಸ್ವೀಕರಿಸಿದರು. ರೋಮನರ ಸಹವಾಸ ದಿಂದ ಬ್ರಿಟನರು ಕ್ರೈಸ್ತಧರ್ಮಿಗಳಾದರು. ರೋಮನರು ಅಲ್ಲಲ್ಲಿ ಚೆನ್ನಾದ ಮಾರ್ಗಗಳನ್ನು ನಿರ್ಮಿಸಿದರು, ಒಕ್ಕಲತನಕ್ಕೆ ಉತ್ತೇಜನವಿತ್ತು ಎಷ್ಟೋ ಭೂಮಿ ಯನ್ನು ಸಾಗುಮಾಡಿದರು, ಮತ್ತು ಅಲ್ಲಲ್ಲಿ ನಗರಗಳನ್ನೂ ಊರುಗಳನ್ನೂ ಸ್ಥಾಪಿಸಿ ವ್ಯಾಪಾರೋದ್ಯಮಗಳಿಗೆ ಉತ್ತೇಜನವಿತ್ತರು.

## ೪. ಆಂಗಲ್ಸ, ಸ್ಯಾಕ್ಸನ್ಸ ಮತ್ತು ಡೇನ್ಸ ಇವರ ಆಳ್ಕೆ

(೪೫೦ರಿಂದ ೧೦೬೬)

**ಪರಕೀಯರ ದಾಳಿಗಳು**—ಇ. ಸ. ೪೧೦ರಲ್ಲಿ ರೋಮನ್ ಸೈನ್ಯವು ಹೊರಟುಹೋದ ಬಳಿಕ ಬ್ರಿಟನಿನ ಜನರು ಅತ್ಯಂತ ನಿರಾಶ್ರಿತರಾದರು. ಅವರಿಗೆ ತಮ್ಮ ಸ್ವಂತದ ಅರಸರಾಗಲಿ, ಸೈನ್ಯವಾಗಲಿ, ಹಡಗುಪಡೆಯಾಗಲಿ ಇದ್ದಿಲ್ಲ. ಪರ ಸ್ಪರರಲ್ಲಿ ಕಲಹಗಳು ಉದ್ಭವಿಸಿದುವು. ಬ್ರಿಟನರು ಹೀಗೆ ಅಸಹಾಯ ಸ್ಥಿತಿಯಲ್ಲಿ ಇರುವಾಗ ಐರ್ಲಂಡ್ ಮತ್ತು ಸ್ಕಾಟಲಂಡ್ ಈ ದೇಶಗಳಲ್ಲಿಯ **ಪಿಕ್ಟ** ಮತ್ತು **ಸ್ಕಾಟ್** ಜನರು ಬ್ರಿಟನರ ಮೇಲೆ ದಾಳಿಮಾಡಿದರು. ಅದರಂತೆಯೆ ಯುರೋಪದ ಪಶ್ಚಿಮ ಸಮುದ್ರತೀರದಲ್ಲಿಯ ಡೆನ್ಮಾರ್ಕ, ಸ್ಯಾಕ್ಸನಿ, ಹಾಲಂಡ ಮೊದಲಾದ ದೇಶಗಳಲ್ಲಿಯ **ಆಂಗಲ್ಸ, ಸ್ಯಾಕ್ಸನ್ಸ** ಮತ್ತು **ಜ್ಯೂಟ್ಸ** ಮೊದಲಾದ ಜನರೂ ಬ್ರಿಟನಿನ ಮೇಲೆ ದಾಳಿಯಿಡಲು ಜಪ್ಪಿಸಿದ್ದರು. ಈ ಜನರ ಉದ್ಯೋಗವು ಕಡಲು-ಸುಲಿಗೆ ಎಂದರೆ ಸಮುದ್ರದಲ್ಲಿ ಅಡಗಿಕೊಂಡಿದ್ದು ಸಮುದ್ರ ಪ್ರವಾಸಿಗಳನ್ನು ಸುಲಿ ವುದು ಆಗಿತ್ತು. ರೋಮನರ ಆಳ್ಕೆಯಲ್ಲಿ ನಾಲ್ಕು ಶತಕಗಳು ಶಾಂತತೆಯಲ್ಲಿ ಹೋದುದರಿಂದ ಬ್ರಿಟನರಿಗೆ ಯುದ್ಧಮಾಡುವ ಪ್ರಸಂಗವು ಬಂದಿರಲಿಲ್ಲ. ಆದುದ ರಿಂದ ಅವರು ಯುದ್ಧಕಲೆಯನ್ನೂ ಮರೆತಿದ್ದರು. ಕ್ಯಾರೆಕ್ಟೇಟಸ ಮತ್ತು ಬೋಡೆಶಿಯಾ ಇವರ ಕಾಲದಲ್ಲಿದ್ದ ಶೌರ್ಯವೂ ಯುದ್ಧಚಾತುರ್ಯವೂ ಈ ಕಾಲದ ಬ್ರಿಟನರಲ್ಲಿ ಉಳಿದಿದ್ದಿಲ್ಲ. ಆದುದರಿಂದ ಪಿಕ್ಟ್ಸ ಮತ್ತು ಸ್ಕಾಟ್ಸ ಇವರ ಕಾಟವನ್ನು ತಪ್ಪಿಸಲು ಅವರು ಸ್ಯಾಕ್ಸನ್ ಜನರ ಅರಸರಾದ **ಹೆಂಜಿಸ್ಟ** ಮತ್ತು **ಹೊರ್ಸಾ** ಇವರ ಸಾಹಾಯ್ಯವನ್ನು ಕೋರಿದರು. ಅವರಾದರೂ ಆನಂದ

ದಿಂದ ಸಾಹಾಯ್ಯವಿತ್ತರು, ಮತ್ತು ಪಿಕ್ಟ ಜನರನ್ನೂ ಸ್ಕಾಟ್ ಜನರನ್ನೂ ಸೋಲಿಸಿ ಅವರನ್ನು ಹೊರಗೆ ತಳ್ಳಿದರು (೪೪೯). ಆದರೆ ಬ್ರಿಟನ್ ದೇಶವು ಸ್ಯಾಕ್ಸನ್ ಜನರಿಗೆ ಸುಖವಾಗಿ ತೋರಿದುದರಿಂದ ಅವರು ಅಲ್ಲಿಯೇ ಉಳಿದರು. ಮುಂದೆ ಅವರು ತಮ್ಮ ದೇಶದಿಂದ ಮತ್ತೆ ಬೇರೆ ಜನರನ್ನು ಬ್ರಿಟನಿಗೆ ಕರೆಯಿಸಿಕೊಂಡರು. ಹೀಗೆ ಸ್ಯಾಕ್ಸನರಷ್ಟೇ ಅಲ್ಲದೆ ಅವರ ನೆರೆಹೊರೆಯ ಆಂಗಲ್ಸ, ಜ್ಯೂಟ್ಸ ಮೊದಲಾದ ಜನರ ಗುಂಪುಗಳೂ ಒಂದರ ಹಿಂದೊಂದು ಬ್ರಿಟನಿಗೆ ಬಂದು ಅಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದುವು. ಹೊರಗಿನಿಂದ ಬಂದ ಈ ಜನರು ಶೂರರೂ ಯುದ್ಧಚತುರರೂ ಆಗಿದ್ದುದರಿಂದ ಇವರ ಮುಂದೆ ಬ್ರಿಟನರ ಆಟವು ಏನೂ ಸಾಗದಂತಾಯ್ತು. ಇವರ ಪ್ರತೀಕಾರವನ್ನು ಮಾಡಲು ಬ್ರಿಟನರು ಬಹಳವಾಗಿ ಹೆಣಗಿದರು. ಆದರೆ ಕೊನೆಗೆ ಬ್ರಿಟನರಿಗೆ ಸೋಲ್ಲು ತಪ್ಪಲಿಲ್ಲ. ಆದುದರಿಂದ ಅವರು ಪಶ್ಚಿಮ ಭಾಗದಲ್ಲಿಯ ವೇಲ್ಸ ಮತ್ತು ಕಾರ್ನವಾಲ ಎಂಬಲ್ಲಿ ಹೋಗಿ ನಿಂತರು. ಕೆಲವು ಬ್ರಿಟನರು ಮಾತ್ರ ಆಂಗಲ್ಸ ಮತ್ತು ಸ್ಯಾಕ್ಸನ್ಸ ಇವರೊಡನೆ ಉಳಿದರು, ಆದರೆ ಅವರು ಕಾಲಾಂತರದಿಂದ ಅವರಲ್ಲಿ ಬೆರೆತರು. ಕೆಲವರು ಫ್ರಾನ್ಸಿಗೆ ಓಡಿಹೋದರು. ಫ್ರಾನ್ಸಿನಲ್ಲಿ ಅವರು ನಿಂತ ಭಾಗಕ್ಕೆ ಬ್ರಿಟನಿ ಎಂದು ಹೆಸರು ಬಂದಿತು. ಬ್ರಿಟನರಲ್ಲಿ ಆಗಿನ ಕಾಲದಲ್ಲಿ ಯೋಗ್ಯತಾಸಂಪನ್ನರಾದ ರಾಜರು ಕೆಲವರಾದರು. ಅವರಲ್ಲಿ ಆರ್ಥರ ರಾಜನ ವಿಷಯದಲ್ಲಿ ಕೆಲವು ಸಂಗತಿಗಳು ಮುಂದೆ ಹೇಳಲಾಗುವುವು.

**ಆಂಗಲ್ಸ ಮತ್ತು ಸ್ಯಾಕ್ಸನ್ಸ ಇವರ ರಾಜ್ಯಗಳು**—ಬ್ರಿಟನಿನಲ್ಲಿ ಆಂಗಲ್ಸ, ಸ್ಯಾಕ್ಸನ್ಸ ಮತ್ತು ಜ್ಯೂಟ್ಸ ಇವರ ವಸಾಹತುಗಳನ್ನು ಸ್ಥಾಪಿಸುವ ಕೆಲಸವು ಎರಡು ನೂರು ವರ್ಷಗಳ ವರೆಗೆ (೪೫೦ರಿಂದ ೬೫೦) ಸಾಗಿತ್ತು. ಬ್ರಿಟನಿನಲ್ಲಿ ಬೇರೆ ಬೇರೆ ಕಾಲದಲ್ಲಿ ಬರುತ್ತಿದ್ದ ಈ ಜನರ ಗುಂಪುಗಳು ಬೇರೆ ಬೇರೆ ಸ್ಥಳಗಳಲ್ಲಿ ವಾಸಿಸಿದುವು. ಅದರಿಂದ ಬ್ರಿಟನಿನಲ್ಲಿ ಆಂಗಲ್ಸ ಮತ್ತು ಸ್ಯಾಕ್ಸನ್ಸ ಇವರ ಒಂದೇ ರಾಜ್ಯವಾಗದೆ ಬೇರೆ ಬೇರೆ ಸಣ್ಣ ದೊಡ್ಡ ರಾಜ್ಯಗಳು ಆದುವು. ಬ್ರಿಟನಿನಲ್ಲಿ ವಸಾಹತುಗಳನ್ನು ಸ್ಥಾಪಿಸಿದ ಜನರಲ್ಲಿ ಆಂಗಲ್ಸರು ಹೆಚ್ಚಾಗಿದ್ದುದರಿಂದ ಬ್ರಿಟನ್ ದೇಶಕ್ಕೆ ಮುಂದೆ ಆಂಗಲ್-ಲ್ಯಾಂಡ್ ಅಥವಾ ಇಂಗ್ಲಂಡ್ ಎಂದು ಹೆಸರು ಬಂದಿತು.

ಏಳನೆಯ ಶತಕದ ಕೊನೆಯಲ್ಲಿ ಇಂಗ್ಲಂಡಿನಲ್ಲಿ ಆಂಗಲ್ಸ್ ಮತ್ತು ಸ್ಯಾಕ್ಸನ್ಸ್ ಜನರ ಏಳು ರಾಜ್ಯಗಳಿದ್ದವು. ನಾರ್ದಂಬ್ರಿಯಾ, ಈಸ್ಟ ಆಂಗ್ಲಿಯಾ, ಕೆಂಟ, ಮರ್ಶಿಯಾ. ಇಸೆಕ್ಸ, ಸಸೆಕ್ಸ ಮತ್ತು ವೆಸೆಕ್ಸ ಎಂಬುವೇ ಆ ರಾಜ್ಯಗಳು. ಈ ರಾಜ್ಯಗಳಲ್ಲಿಯ ಅರಸರು ಸಾರ್ವಭೌಮತ್ವವನ್ನು ಪಡೆಯಲು ಈರ್ಷೆಯುಳ್ಳವರಾಗಿದ್ದರು.

ಕೊನೆಯಲ್ಲಿ ಇಂಗ್ಲಂಡಿನ ದಕ್ಷಿಣಭಾಗದಲ್ಲಿದ್ದ ವೆಸೆಕ್ಸ ರಾಜ್ಯದ ರಾಜನಾದ **ಎಗ ಬರ್ಟನು** ಇ. ಸ. ೮೩೦ರಲ್ಲಿ ಎಲ್ಲ ರಾಜ್ಯಗಳ ಮೇಲೆ ತನ್ನ ವರ್ಚಸ್ಸನ್ನು ಸ್ಥಾಪಿಸಿದನು. ಆಂಗ್ಲೊ ಸ್ಯಾಕ್ಸನ್ ಜನರ ರಾಜ್ಯದಲ್ಲಿ ರಾಜನಿಗೆ ರಾಜ್ಯಕಾರಭಾರದ ಕಾರ್ಯದಲ್ಲಿ ಆಲೋಚನೆಯನ್ನು ಹೇಳಲು ಶಿಷ್ಟಜನರ ಸಭೆಗಳಿರುತ್ತಿದ್ದುವು. ಮುಂದೆ ಎಲ್ಲ ರಾಜ್ಯಗಳು ಕೂಡಿ ಒಂದು ರಾಜ್ಯವಾದ ಬಳಿಕ ಒಂದು ಶಿಷ್ಟ ಮಂಡಳವು ಸ್ಥಾಪಿಸಲ್ಪಟ್ಟಿತು. ಈ ಸಭೆಗೆ **ವಿಟ್ಯಾನಗೆಮ್ಯಾಟ್** (**ವಿದ್ವಾಂಸರ ಮಂಡಳ**) ಎಂದು ಹೆಸರು. ಅರಸನನ್ನು ಆರಿಸುವುದು, ಸಂಧಿಯನ್ನು ಮಾಡುವುದು, ಯುದ್ಧವನ್ನು ಸಾರುವುದು, ಮೊದಲಾದ ಕೆಲಸಗಳೆಲ್ಲವು ಈ ಮಂಡಳದ ಆಲೋಚನೆಯಿಂದೆಯೆ ಆಗುತ್ತಿದ್ದುವು.

**ಇಂಗ್ಲಂಡಿನಲ್ಲಿ ಕ್ರೈಸ್ತಧರ್ಮ ಪುನಃಸ್ಥಾಪನೆ**—ಆಂಗಲ್ಸ ಮತ್ತು ಸ್ಯಾಕ್ಸನ್ಸ ಇವರು ಮೂರ್ತಿಪೂಜಕರಾಗಿದ್ದರು. ಥಾರ್ ಮತ್ತು ವೋಡಿನ್ ಅವರ ಮುಖ್ಯ ದೇವತೆಗಳು. ರೋಮನರ ಆಳ್ಕೆಯಲ್ಲಿ ಬ್ರಿಟನಿನಲ್ಲಿ ಕ್ರೈಸ್ತಧರ್ಮದ ಪ್ರಸಾರವಾಗಿತ್ತು. ಆದರೆ ಆಂಗಲ್ಸ ಮತ್ತು ಸ್ಯಾಕ್ಸನ್ಸ ಇವರು ಬಂದ ಬಳಿಕ ಬ್ರಿಟನಿನಲ್ಲಿ ಕ್ರೈಸ್ತಧರ್ಮವು ಲುಪ್ತವಾಯ್ತು.

ಆರನೆಯ ಶತಕದಲ್ಲಿ **ಕೆಂಟ** ಎಂಬಲ್ಲಿ **ಎಥಲ್‌ಬರ್ಟ** ಎಂಬ ರಾಜನು ರಾಜ್ಯವಾಳುತ್ತಿದ್ದನು. ಆತನ ಹೆಂಡತಿಯಾದ **ಬಥಾ೯** ಎಂಬವಳು ಫ್ರಾನ್ಸದೇಶದ ರಾಜಕನ್ಯೆಯಾಗಿದ್ದು ಕ್ರೈಸ್ತಧರ್ಮದವಳಾಗಿದ್ದಳು. ಅವಳ ಪ್ರೇರಣೆಯಿಂದ ಎಥಲ್‌ಬರ್ಟನ ಲಕ್ಷ್ಯವು ಈ ಧರ್ಮದ ಕಡೆಗೆ ಹೋಯ್ತು. ಆಗ ರೋಮ ನಗರವು ಕ್ರೈಸ್ತಧರ್ಮದ ಮುಖ್ಯ ಧರ್ಮಪೀಠವೆಂದು ಗಣಿಸಲಾಗಿತ್ತು. ಅಲ್ಲಿ **ಗ್ರೆಗರಿ** ಎಂಬವನು **ಪೋಪನಿದ್ದನು**. ಇಂಗ್ಲಂಡಿನಲ್ಲಿ ಕ್ರೈಸ್ತಧರ್ಮದ ಪ್ರಸಾರವನ್ನು ಮಾಡಲು ಒಬ್ಬ ಧರ್ಮಾಧಿಕಾರಿಯನ್ನು ಕಳಿಸಬೇಕೆಂದು ಎಥಲ್‌ಬರ್ಟನು ಅವನಿಗೆ ಸೂಚಿಸಿದನು. ಪೋಪನು ಇ. ಸ ೫೯೭ರಲ್ಲಿ **ಆಗಸ್ಟಾಯಿನ್** ಎಂಬವನೊಡನೆ ಕೆಲವು ಧರ್ಮೋಪದೇಶಕರನ್ನು ಇಂಗ್ಲಂಡಿಗೆ ಕಳುಹಿದನು. ಅವರು ಎಥಲ್‌ಬರ್ಟನಿಗೆ ಮತ್ತು ಆತನ ರಾಜ್ಯದಲ್ಲಿಯ ಬೇರೆ ಕೆಲವು ಜನರಿಗೆ ಕ್ರೈಸ್ತಧರ್ಮದ ದೀಕ್ಷೆಯನ್ನು ಕೊಟ್ಟರು. ಮುಂದೆ **ಕ್ಯಾಂಟರ್ಬರಿ** ಎಂಬಲ್ಲಿ ಒಂದು ಚರ್ಚ (ಪ್ರಾರ್ಥನಾಮಂದಿರವು) ಕಟ್ಟಿಸಲಾಯಿತು. ಮುಂದೆ ಮುಂದೆ ಇಂಗ್ಲಂಡಿನಲ್ಲಿಯ ಇತರ ರಾಜ್ಯಗಳಲ್ಲಿಯ ರಾಜರೂ ಪ್ರಜೆಗಳೂ ಈ ಧರ್ಮವನ್ನು ಸ್ವೀಕರಿಸಿದರು; ಮತ್ತು ಇಂಗ್ಲಂಡಿನಲ್ಲಿಯ ಎಲ್ಲ ಜನರು ಕ್ರೈಸ್ತಧರ್ಮಿಗಳಾದರು.

**ಡೇನ್ಸರ ದಾಳಿಗಳು**—ಯುರೋಪದ ಪಶ್ಚಿಮ ಭಾಗದಲ್ಲಿಯ ಸ್ವೀಡನ್,

ನಾರ್ವೆ ಮತ್ತು ಡೆನ್ಮಾರ್ಕ ಈ ದೇಶಗಳ ಸಮುದ್ರತೀರದ ಪ್ರದೇಶದಲ್ಲಿ ಡೇನ್ಸರು ವಾಸಿಸುತ್ತಿದ್ದರು. ಈ ಜನರಿಗೆ ನಾರ್ಥಮೆನ್ ಅಥವಾ 'ಉತ್ತರದ ಕಡೆಯ ಜನರು' ಎಂದು ಇನ್ನೊಂದು ಹೆಸರು. ಈ ಜನರು ಶೂರರೂ ಯುದ್ಧಚತುರರೂ ನೌಕಾಕುಶಲರೂ ಆಗಿದ್ದು ಪರಶು, ಭಲ್ಲೆ, ಕತ್ತಿ ಮೊದಲಾದ ಆಯುಧಗಳನ್ನು ಉಪಯೋಗಿಸುತ್ತಿದ್ದರು. ಸುಲಿಗೆಮಾಡುವುದೂ, ಕೊಳ್ಳೆಯಿಕ್ಕುವುದೂ ತಮ್ಮ ನಾವೆಗಳಲ್ಲಿ ಕುಳಿತು ಕಡಲುಸುಲಿಗೆ ಮಾಡುವುದೂ ಅವರ ಉದ್ಯೋಗವಾಗಿತ್ತು. ಇಂಗ್ಲಂಡಿನಲ್ಲಿ ಬಂದಿದ್ದ ಆಂಗಲ್ಸ ಮತ್ತು ಸ್ಯಾಕ್ಸನ್ಸ ಇವರೂ ಡೇನ್ಸರೂ ಆರ್ಯನ್ ಶಾಖೆಯಾದ ಟ್ಯೂಟಾನಿಕ್ ವಂಶದವರು. ಆದರೆ ಡೇನ್ಸರು ಸುಧಾರಿಸಿದ ರೋಮನ್ ಸಾಮ್ರಾಜ್ಯದಿಂದ ದೂರದಲ್ಲಿ ಇದ್ದುದರಿಂದ ಅವರ ಆಚಾರವಿಚಾರಗಳು ಇನ್ನೂ ವನ್ಯಜನರಂತಿದ್ದುವು. ಇವರು ಮೂರ್ತಿಪೂಜಕರಾಗಿದ್ದರು ಮತ್ತು ಕ್ರೈಸ್ತಧರ್ಮದ ರಾಷ್ಟ್ರಗಳಿಗೆ ದಾಳಿಯಿಕ್ಕಿ ಅಲ್ಲಿಯವರನ್ನು ಬಗೆಬಗೆಯಾಗಿ ಹಿಂಸಿಸುತ್ತಿದ್ದರು. ಇ. ಸ. ೮ನೆಯ ಶತಕದಿಂದ ಇಂಗ್ಲಂಡಿನಲ್ಲಿಯ ರಾಜ್ಯಗಳಿಗೆ ಡೇನ್ಸರಿಂದ ಉಪದ್ರವವಾಗತೊಡಗಿತು. ಆಗ ಸರಿಯಾದ ಹಡಗುಪಡೆ ಇರಲಿಲ್ಲವಾದುದರಿಂದ ಇಂಗ್ಲಂಡಿನ ಜನರು ಡೇನ್ಸರನ್ನು ಸೋಲಿಸಲು ಸಮರ್ಥರಾಗಲಿಲ್ಲ. ಇ. ಸ. ೮೩೯ರಲ್ಲಿ ವೆಸೆಕ್ಸದ ಪರಾಕ್ರಮಿಯಾದ ಎಗಬರ್ಟ ರಾಜನು ಮರಣಹೊಂದಿದ ಬಳಿಕ ಡೇನ್ಸರು ಇಂಗ್ಲಂಡಿನ ಮೇಲೆ ಬಲವಾಗಿ ದಾಳಿಮಾಡಿದರು. ಅವರ ಬಲದ ಮುಂದೆ ಇಂಗ್ಲಂಡಿನವರ ಆಟವು ಏನೂ ಸಾಗಲಿಲ್ಲ. ಡೇನ್ಸರು ನಾರ್ದಂಬ್ರಿಯಾ, ಮರ್ಶಿಯಾ, ಈಸ್ಟ ಆಂಗ್ಲಿಯಾ ಮೊದಲಾದುವನ್ನು ಒಂದೊಂದಾಗಿ ಗೆದ್ದುಕೊಂಡರು. ಇ. ಸ. ೮೭೦ರ ಕಾಲಕ್ಕಂತು ವೆಸೆಕ್ಸ ರಾಜ್ಯವೊಂದನ್ನೆ ಗೆಲ್ಲುವುದು ಉಳಿದಿತ್ತು. ಆಗ ಅಲ್ಲಿ ಎಗಬರ್ಟನ ಮೊಮ್ಮಗನಾದ ಆಲ್ಫ್ರೆಡನು ರಾಜನಾಗಿದ್ದನು. ಅವನು ಡೇನ್ಸರನ್ನು ಹಿಮ್ಮೆಟ್ಟಿಸಲು ಪರಾಕಾಷ್ಠೆಯ ಪ್ರಯತ್ನವನ್ನು ಮಾಡಿದನು.

**ಮಹಾನ್ ಆಲ್ಫ್ರೆಡನೂ ಅವನ ಸುಧಾರಣೆಗಳೂ**—ಆಲ್ಫ್ರೆಡನು ಶೂರನೂ ಪರಾಕ್ರಮಿಯೂ ಆಗಿದ್ದನು. ಡೇನ್ಸರ ಪ್ರಚಂಡವಾದ ದಾಳಿಗಳನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸುತ್ತಿರುವಾಗ ಆತನಿಗೆ ಎಷ್ಟೋ ಸಲ ಅಪಜಯವು ಬಂದಿತು, ಮತ್ತು ಕೆಲಕಾಲ ಅಜ್ಞಾತವಾಸದಲ್ಲಿಯೂ ಅವನು ಇರಬೇಕಾಯ್ತು. ಆದರೆ ಅವನು ಎದೆಗುಂದಲಿಲ್ಲ. ಡೇನ್ಸರು ವೆಸೆಕ್ಸನ್ನು ಉಳಿದು ಎಲ್ಲ ಆಂಗ್ಲೊಸ್ಯಾಕ್ಸನ್ ರಾಜ್ಯಗಳನ್ನು ಆಕ್ರಮಿಸಿದುದರಿಂದ ಆಲ್ಫ್ರೆಡನೇ ತಮ್ಮ ನಾಯಕನೆಂದು ಇಂಗ್ಲಿಶ್ ಜನತೆಯೆಲ್ಲವೂ ತಿಳಿಯಿತು. ಈ ಕಾರಣದಿಂದ ಅವನಿಗೆ ಇಂಗ್ಲಿಶ್

ಜನತೆಯ ಸಾಹಾಯ್ಯವು ದೊರೆತಿತು. ಕೊನೆಗೆ ಇ. ಸ. ೮೭೮ರಲ್ಲಿ ಆಲ್ಫ್ರೆಡನು ಡೇನ್ಸರನ್ನು ಸಂಪೂರ್ಣವಾಗಿ ಸೋಲಿಸಿದನು. ಅವರು ಒಪ್ಪಂದವನ್ನು ಮಾಡಿಕೊಳ್ಳಬೇಕಾಯ್ತು. ಈ ಒಪ್ಪಂದಕ್ಕೆ ವೆಡಮೋರದ ಒಪ್ಪಂದವೆಂದು ಹೆಸರು. ಡೇನ್ಸರು ಗೆದ್ದುಕೊಂಡಿದ್ದ ಎಲ್ಲ ಪ್ರದೇಶವು ಈಗಲೇ ತಿರುಗಿ ದೊರೆವುದು ಶಕ್ಯವಿಲ್ಲೆಂದು ಕಂಡು ಆಲ್ಫ್ರೆಡನು ಡೇನ್ಸರ ವಶದಲ್ಲಿ ಬ್ರಿಟನಿನ ಪೂರ್ವ ಮತ್ತು ಉತ್ತರ ಭಾಗಗಳನ್ನು ಅವರ ವಶಕ್ಕೆ ಬಿಟ್ಟು ಉಳಿದೆಲ್ಲ ಪ್ರದೇಶವನ್ನು ಪಡೆದನು.



ಆಲ್ಫ್ರೆಡ

ಪರಶತ್ರುಗಳೊಡನೆ ಹೋರಾಡಲು ತನ್ನಲ್ಲಿ ಸರಿಯಾದ ಹಡಗುಪಡೆ ಇಲ್ಲದುದನ್ನು ಕಂಡು ಆಲ್ಫ್ರೆಡನು ದೊಡ್ಡ ದೊಡ್ಡ ಹಡಗುಗಳನ್ನು ಕಟ್ಟಿಸಿ ಕಾರ್ಯಕ್ಷಮವಾದ ಹಡಗುಪಡೆಯನ್ನು ಸಿದ್ಧಗೊಳಿಸಿದನು. ಬಾಡಿಗೆಯ ಸೈನ್ಯಕ್ಕಿಂತ ರಾಷ್ಟ್ರೀಯ ಸೈನ್ಯವು (Militia) ಹೆಚ್ಚು ಉಪಯುಕ್ತವಾಗುವುದೆಂದು ಬಗೆದು ಅವನು ರಾಷ್ಟ್ರೀಯ ಸೈನ್ಯವನ್ನು ಸಿದ್ಧಗೊಳಿಸಿದನು, ಮತ್ತು ಅಲ್ಲಲ್ಲಿ ಕೋಟೆಗಳನ್ನು ಕಟ್ಟಿಸಿ ಅವುಗಳಲ್ಲಿ ಸೈನ್ಯಗಳನ್ನು ಇಟ್ಟನು. ವಿದ್ಯೆಯ ಮತ್ತು ಕಲೆಯ ಕಡೆಗಾದರೂ ಅವನ ಲಕ್ಷ್ಯವಿದ್ದಿತು. ಅವನು ವಿದ್ವಜ್ಜನರಿಗೂ ಗುಣಿಗಳಿಗೂ ಆಶ್ರಯವಿತ್ತನು ಮತ್ತು ವಿದ್ಯೆಯ ಪ್ರಸಾರವಾಗಬೇಕೆಂದು ಶಾಲೆಗಳನ್ನು ಸ್ಥಾಪಿಸಿದನು. ಆಂಗ್ಲೊ ಸ್ಯಾಕ್ಸನ್ ಜನರಲ್ಲಿ ಪ್ರಚಾರದಲ್ಲಿದ್ದ ಕಾಯ್ದೆಗಳನ್ನು ಸಂಗ್ರಹಿಸಿ ಆ ಕಾಯ್ದೆಗಳಿಗನುಸಾರವಾಗಿ ನ್ಯಾಯದಾನವಾಗಬೇಕೆಂದು ಆಜ್ಞಾಪತ್ರವನ್ನು ಪ್ರಕಟಿಸಿದನು. ಈ ಬಗೆಯಾಗಿ ತನ್ನ ರಾಷ್ಟ್ರದ ಸರ್ವಾಂಗೀಣ ಪ್ರಗತಿಯ ಕಡೆಗೆ ಆತನ ಲಕ್ಷ್ಯವಿದ್ದುದರಿಂದ ಆತನಿಗೆ ಮಹಾನ್ ಆಲ್ಫ್ರೆಡನೆಂದು (Alfred the Great) ಪ್ರಸಿದ್ಧಿ ಪ್ರಾಪ್ತವಾಗಿರುವುದು. ಇ. ಸ. ೯೦೧ರಲ್ಲಿ ಆಲ್ಫ್ರೆಡನು ಮರಣ ಹೊಂದಿದನು.

**ಆಲ್ಫ್ರೆಡನ ತರುವಾಯದ ಇಂಗ್ಲಿಶ್ ರಾಜರು**—ಆಲ್ಫ್ರೆಡನ ತರುವಾಯ ದಲ್ಲಿ ಬಂದ ಇಂಗ್ಲಿಶ್ ರಾಜರು ಮುಂದಿನ ನೂರು ವರ್ಷಗಳಲ್ಲಿ (೯೦೧—೧೦೦೨) ಇಂಗ್ಲಂಡಿನಲ್ಲಿಯ ಡೇನ್ಸರ ಸತ್ತೆಯನ್ನು ಸಂಪೂರ್ಣವಾಗಿ ಮುರಿದೊಗೆದರು. ಈ ಅವಧಿಯಲ್ಲಿ ಇಂಗ್ಲಿಶರ ಮತ್ತು ಅವರಲ್ಲಿ ಬಂದಿದ್ದ ಡೇನ್ಸರ ನಡುವೆ ಲಗ್ನ ಸಂಬಂಧವು ನಡೆದು ಅವರ ಏಕೀಕರಣವಾಗಿತ್ತು. ಈ ಸಮಯದಲ್ಲಿ (೯೫೯—೯೭೫) ಪ್ರಸಿದ್ಧನೂ ಪರಾಕ್ರಮಿಯೂ ಆದ **ಎಡಗರ**ನೆಂಬ ರಾಜನು ಆಗಿಹೋದನು. ಆದರೆ ಅವನ ತರುವಾಯದಲ್ಲಿ ಬಂದ **ಎಥಲರೇಡ** ರಾಜನು ಕರ್ತೃತ್ವ ಹೀನನಾದುದರಿಂದ ಅವನ ಆಳ್ಕೆಯಲ್ಲಿ ಡೇನ್ಸರು ಮತ್ತೆ ಇಂಗ್ಲಂಡಿನ ಮೇಲೆ ದಾಳಿ ಮಾಡಲು ಆರಂಭಿಸಿದರು. ಆಗ ಎಥಲರೇಡನು ಡೇನ್ಸರನ್ನು ಸೋಲಿಸಲು ಪ್ರಯತ್ನಿಸುವುದನ್ನು ಬಿಟ್ಟು ಅವರಿಗೆ **ಕಪ್ಪ**ವನ್ನು ಕೊಡತೊಡಗಿದನು. ಈ ಕಪ್ಪ ವನ್ನು ಕೊಡಲು ಬೇಕಾಗುವ ಹಣಕ್ಕೋಸುಗ ಅವನು ಇಂಗ್ಲಿಷ್ ಜನರ ಮೇಲೆ ಕರವನ್ನು ಕೂಡಿಸಿದನು. ಈ ಕರಕ್ಕೆ **ಡೇನಗೋಲ್ಡ** ಎಂದು ಹೆಸರು. ಈ ಕರವು ಪ್ರತಿಯೊಬ್ಬ ವ್ಯಕ್ತಿಯ ವಶದಲ್ಲಿದ್ದ ಭೂಮಿಯ ಮೇಲೆ ಹೇರಲ್ಪಟ್ಟಿತು. ಡೇನ್ಸರು ಕಪ್ಪದ ಲೋಭದಿಂದ ಹೆಚ್ಚು ದಾಳಿಗಳನ್ನು ಮಾಡಲಾರಂಭಿಸಿದರು. ಆಗ ಮಾತ್ರ ಡೇನ್ಸರು ಮತ್ತೆ ದಾಳಿಗಳನ್ನು ಮಾಡಬಾರದೆಂದು ಎಥಲರೇಡನು ೧೦೦೨ ರಲ್ಲಿ ವೆಸೆಕ್ಸದಲ್ಲಿಯ ಎಲ್ಲ ಡೇನ್ಸರ ಕೊಲೆಮಾಡಲು ಆಜ್ಞೆಯಿತ್ತನು. ಈ ಕೊಲೆ ಯಲ್ಲಿ ಡೆನ್ಮಾರ್ಕದ ಅರಸನಾದ **ಸ್ವೇನ** ಇವನ **ಗನಹಿಲ್ಡಾ** ಎಂಬ ತಂಗಿಯ ಕೊಲೆ ಯೂ ಆಯ್ತು! ಈ ಕೊಲೆಯ ಮುಯ್ಯನ್ನು ತೀರಿಸಲು ಸ್ವೇನರಾಜನು ಇಂಗ್ಲಂಡಿನ ಮೇಲೆ ದಾಳಿಯಿಟ್ಟನು. ಆಗ ಎಥಲರೇಡನು ಹೆದರಿ ಫ್ರಾನ್ಸಿಗೆ ಓಡಿಹೋದನು. ರಾಜನು ಓಡಿಹೋದುದರಿಂದ **"ವಿಟನ್‌ಗೆಮ್ಯಾಟ"** ಸಭೆ ನಿರುಪಾಯ ವಾಗಿ ಸ್ವೇನನನ್ನೆ ಇಂಗ್ಲಂಡಿನ ರಾಜನಾಗಿ ಆರಿಸಿತು. ಆದರೆ ಮುಂದೆ ಅಲ್ಪಾ ವಧಿಯಲ್ಲಿಯೆ ಸ್ವೇನನು ಮರಣಹೊಂದಿದರಿಂದ **ಎಥಲರೇಡನನ್ನು** ಫ್ರಾನ್ಸಿ ನಿಂದ ತಿರುಗಿ ಕರೆಯಿಸಲಾಯಿತು. ಎರಡು ವರ್ಷಗಳಾದ ಬಳಿಕ ಆತನೂ ಮರಣಹೊಂದಿದನು. ಅವನ ತರುವಾಯದಲ್ಲಿ ಶೂರನೂ ಪರಾಕ್ರಮಿಯೂ ಆದ ಎಡಮುಂಡನೆಂಬ ಆತನ ಮಗನು ರಾಜನಾದನು. ಅವನು ಆಳುತ್ತಿರುವಾಗ ಸ್ವೇನನ ಮಗನಾದ **ಕ್ಯಾನ್ಯೂಟನು** ಇಂಗ್ಲಂಡಿನ ಮೇಲೆ ಮತ್ತೆ ದಾಳಿಮಾಡಿ ದನು. ಆಗ ಡೇನ್ಸ ಮತ್ತು ಇಂಗ್ಲಿಶರ ನಡುವೆ ಅನೇಕ ಯುದ್ಧಗಳಾದುವು. ಕೊನೆಗೆ ಒಪ್ಪಂದವಾಯ್ತು. ಇಂಗ್ಲಂಡಿನ ದಕ್ಷಿಣ ಭಾಗವು ಎಡಮುಂಡನ ವಶ ದಲ್ಲಿ ಮತ್ತು ಉತ್ತರಭಾಗವು ಕ್ಯಾನ್ಯೂಟನ ವಶದಲ್ಲಿ ಇರಬೇಕೆಂದು ನಿರ್ಣಯ

ವಾಯ್ತು. ಆದರೆ ಈ ಒಪ್ಪಂದವಾದ ಕೆಲವು ದಿನಗಳಲ್ಲಿಯೆ ೧೦೧೬ರಲ್ಲಿ ಎಡ ಮಂಡನ ಕೊಲೆಯಾಯ್ತು. ಆಗ **ಕ್ಯಾನ್ಯೂಟನೇ** ಅಖಿಲ ಇಂಗ್ಲಂಡಿನ ರಾಜನಾದನು.

### ಡ್ಯಾನಿಶ್ ರಾಜರು (೧೦೧೭—೧೦೪೨)

**ಕ್ಯಾನ್ಯೂಟನು**—ಅಖಿಲ ಇಂಗ್ಲಂಡಿನ ಮೇಲೆ ರಾಜಸತ್ತೆಯನ್ನು ಸ್ಥಾಪಿಸಿ ಅದನ್ನು ಆಳಿದ ಮೊದಲನೆಯ ರಾಜನು ಕ್ಯಾನ್ಯೂಟನು. ಅವನಿಗೆ ಆಗ ೨೦ ವರ್ಷ ವಯಸ್ಸು. ಇಂಗ್ಲಂಡಿನಂತೆ ಸ್ವೀಡನ್, ನಾರ್ವೆ ಮತ್ತು ಡೆನ್ಮಾರ್ಕ ಈ ದೇಶಗಳಿಗೂ ಅವನು ರಾಜನಾಗಿದ್ದನು. ಸ್ಕಾಟಲಂಡಿನ ರಾಜನು ಅವನ ಮಾಂಡಲಿಕನಾಗಿದ್ದನು. ರಾಜ್ಯಕಾರಭಾರದ ಅನುಕೂಲತೆಗೋಸುಗ ಅವನು ಇಂಗ್ಲಂಡಿನಲ್ಲಿ ನಾಲ್ಕು ವಿಭಾಗಗಳನ್ನು ಮಾಡಿ ಅವನ್ನು ನಾಲ್ಕು ಸುಭೇದಾರರ (ಅರ್ಲ) ಅಧೀನತೆಗೊಳಪಡಿಸಿದನು. ದಕ್ಷಿಣದಲ್ಲಿಯ ವೆಸೆಕ್ಸದ ಭಾಗಕ್ಕೆ **ಗಾಡವಿನ್** ಎಂಬವನು ಸುಭೇದಾರನಿದ್ದನು. ಕ್ಯಾನ್ಯೂಟನು ಹತ್ತೊಂಬತ್ತು ವರ್ಷ ಚೆನ್ನಾಗಿ ರಾಜ್ಯಮಾಡಿ ಇಂಗ್ಲಿಶ್ ಮತ್ತು ಡೇನ್ಸ ಇವರಿಬ್ಬರ ಪ್ರೇಮವನ್ನೂ ಸಂಪಾದಿಸಿದನು. ಅವನು ಅನೇಕ ಉಪಯುಕ್ತ ಸುಧಾರಣೆಗಳನ್ನು ಮಾಡಿದನು, ಮತ್ತು ಚರ್ಚ, ಮಠ ಮೊದಲಾದ ಧಾರ್ಮಿಕ ಸಂಸ್ಥೆಗಳಿಗೋಸುಗ ಬಹಳವಾಗಿ ಹಣವನ್ನು ವೆಚ್ಚಮಾಡಿದನು. ಅವನ ಬಳಿಯಲ್ಲಿ ಸ್ಥಾಯಿ ಸೈನ್ಯವು (Standing army) ಇತ್ತು. ಈ ರಾಜನಿಗೆ ಅವಾಸ್ತವ ಸ್ತುತಿ ಸೇರುತ್ತಿರಲಿಲ್ಲ. ಇವನು ೧೦೩೫ರಲ್ಲಿ ಇಂಗ್ಲಂಡಿನ ಆಗಿನ ರಾಜಧಾನಿಯಾದ ವಿಂಚೆಸ್ಟರ ಎಂಬಲ್ಲಿ ಮರಣಹೊಂದಿದನು.

**ಕ್ಯಾನ್ಯೂಟನ ಮಕ್ಕಳು**—ಕ್ಯಾನ್ಯೂಟನ ತರುವಾಯದಲ್ಲಿ ೧೦೩೫—೪೨ ಈ ಏಳು ವರ್ಷಗಳಲ್ಲಿ ಅವನ ಇಬ್ಬರು ಮಕ್ಕಳು ಆಳಿದರು. ಆದರೆ ಅವರು ಕ್ಯಾನ್ಯೂಟನಂತೆ ಕರ್ತೃತ್ವವುಳ್ಳವರಾಗಿರಲಿಲ್ಲ. ಆ ಬಳಿಕ ವೆಸೆಕ್ಸದ ಅರ್ಲನಾದ **ಗಾಡವಿನನ** ಸೂಚನೆಯಂತೆ ಫ್ರಾನ್ಸಿನಲ್ಲಿಯ ನಾರ್ಮಂಡಿಯಲ್ಲಿ ಇರುತ್ತಿದ್ದ ಎಥಲರೇಡನ ಮಗನಾದ ಎಡವರ್ಡನನ್ನು ವಿಟನಗೆಮಾಟ್ ಸಭೆ ಇಂಗ್ಲಂಡಿನ ರಾಜನಾಗಿ ಆರಿಸಿತು (೧೦೪೨).

**ಧರ್ಮಾತ್ಮಾ ಎಡವರ್ಡನು** (೧೦೪೨—೧೦೬೬)—ಎಡವರ್ಡನು ೧೦೪೨ ರಲ್ಲಿ ಇಂಗ್ಲಂಡಿನ ಅರಸನಾದನು. ಅವನು ಪಾಪಭೀರುವಾಗಿದ್ದನು. ಧರ್ಮದ ವಿಷಯದಲ್ಲಿ ಅವನಿಗೆ ಬಹಳ ಆಸ್ಥೆಯಿದ್ದಿತಾದುದರಿಂದ ಜನರು ಅವನನ್ನು **ಧರ್ಮಾತ್ಮನೆಂದು** (Confessor) ಕರೆಯುತ್ತಿದ್ದರು. ಅವನು ತಂದೆಯ

ಪಕ್ಷದಿಂದ ಇಂಗ್ಲಿಶನು ಮತ್ತು ತಾಯಿಯ ಪಕ್ಷದಿಂದ ನಾರ್ಮನನು ಆಗಿದ್ದನು. ಚಿಕ್ಕಂದಿನಿಂದ ಅವನು ತನ್ನ ಎಲ್ಲ ಆಯುಷ್ಯವನ್ನು ತಾಯಿಯ ತವರಮನೆಯಾದ ನಾರ್ಮಂಡಿಯಲ್ಲಿ ಕಳೆದವನಾದುದರಿಂದ ನಾರ್ಮನರ ವಿಷಯದಲ್ಲಿ ಅವನಿಗೆ ಮಮತೆಯಿದ್ದಿತು. ಅವನು ಇಂಗ್ಲಂಡಿನ ಅರಸನಾಗಿ ಬರುವ ಮುಂದೆ ಅವನ ಆಪ್ತೇಷ್ಟರೂ ಪರಿಚಯದವರೂ ಆದ ಅನೇಕ ನಾರ್ಮನ ಸರದಾರರು ತಮಗೆ ಇಂಗ್ಲಂಡಿನಲ್ಲಿ ಸನ್ಮಾನದ ಸ್ಥಳಗಳು ದೊರೆಯಬಹುದೆಂದು ಅವನೊಡನೆ ಬಂದರು. ಎಡವರ್ಡನು ಅವರಲ್ಲಿ ಕೆಲವರಿಗೆ ಸರದಾರಿಯ ಸ್ಥಳಗಳನ್ನೂ ಕೆಲವರಿಗೆ ಧರ್ಮಾಧಿಕಾರಿಯ ಸ್ಥಳಗಳನ್ನೂ ಕೊಟ್ಟನು. ಒಬ್ಬನನ್ನಂತು ಅವನು **ಕ್ಯಾಂಟರಬರಿಯ ಆರ್ಚಬಿಶಪನಾಗಿ** (ಮುಖ್ಯ ಧರ್ಮಾಧಿಕಾರಿಯಾಗಿ) ನಿಯೋಜಿಸಿದನು. ಪ್ರಮುಖ ಇಂಗ್ಲಿಷ್ ಸರದಾರನಾದ **ಗಾಡವಿನನ** ಪ್ರಯತ್ನದಿಂದ ಅವನಿಗೆ ಇಂಗ್ಲಂಡಿನ ರಾಜ್ಯಪದವು ಪ್ರಾಪ್ತವಾಗಿತ್ತು. ಆದುದರಿಂದ ಅವನೊಡನೆ ತನ್ನ ಸಂಬಂಧವನ್ನು ದೃಢಗೊಳಿಸಲು ಎಡವರ್ಡನು ಅವನ ಮಗಳನ್ನು ಲಗ್ನವಾದನು. ಆದರೆ ಇಂಗ್ಲಂಡಿನೊಳಗಿನ ಅಧಿಕಾರದ ಮತ್ತು ಬಹುಮಾನದ ಸ್ಥಳಗಳನ್ನು ಈ ಅರಸನು ನಾರ್ಮನರಿಗೆ ಕೊಟ್ಟನಾದುದರಿಂದ ಅವನು ಇಂಗ್ಲಿಶ್ ಜನರಿಗೆ ಅಪ್ರಿಯನಾದನು. **ಗಾಡವಿನನೇ** ರಾಜನ ವಿರುದ್ಧವಾಗಿ ನಿಂತನು. ಆದುದರಿಂದ ರಾಜನು ಗಾಡವಿನನನ್ನೂ, ಅವನ ಮಗನಾದ **ಹೆರಾಲ್ಡನನ್ನೂ** ಹದ್ದುಪಾರಮಾಡಿದನು. ದರಬಾರದಲ್ಲಿಯೂ ಇತರತ್ರವೂ ನಾರ್ಮನರ ಪ್ರಾಬಲ್ಯವಿದ್ದುದರಿಂದ ಫ್ರೆಂಚ ಆಚಾರವಿಚಾರಗಳಿಗೆ ಮತ್ತು ಫ್ರೆಂಚ ಭಾಷೆಗೆ ಮಹತ್ವವು ದೊರೆಯತೊಡಗಿತು. ೧೦೫೧ರಲ್ಲಿ ರಾಜನ ಸೋದರಮಾವನ ಮಗನಾದ **ನಾರ್ಮಂಡಿಯ ವಿಲಿಯಮನು** ಇಂಗ್ಲಂಡಿಗೆ ಬಂದನು. ಎಡವರ್ಡನಿಗೆ ಗಂಡುಮಕ್ಕಳಿಲ್ಲದುದರಿಂದ ತನಗೆ ಇಂಗ್ಲಂಡಿನ ರಾಜಪದವಿ ಬರಬಹುದೆಂಬ ಆಶೆ ವಿಲಿಯಮನಿಗೆ ಇದ್ದಿತು. ಎಡವರ್ಡನೂ ಅವನನ್ನು ತನ್ನ ವಾರಸದಾರನಾಗಿ ಗೊತ್ತುಮಾಡಿದನು. ಇಂಗ್ಲಂಡಿನಲ್ಲಿ ನಾರ್ಮನರ ಪ್ರಸ್ಥವು ಬಹಳವಾಗಿ ಬೆಳೆಯುತ್ತಿರುವುದು ಇಂಗ್ಲಿಶ್ ಸರದಾರರ ಮನಸ್ಸಿಗೆ ಸರಿದೋರಲಿಲ್ಲ. ಆದುದರಿಂದ ಅವರು ಒಂದಾಗಿ ಹದ್ದುಪಾರಮಾಡಲ್ಪಟ್ಟ **ಗಾಡವಿನ್** ಮತ್ತು **ಹ್ಯಾರಾಲ್ಡ** ಇವರನ್ನು ಇಂಗ್ಲಂಡಿಗೆ ತಿರುಗಿ ಕರೆಯಿಸಬೇಕೆಂದು ರಾಜನನ್ನು ಕೇಳಿಕೊಂಡರು. ಈ ಮಾತನ್ನು ಒಪ್ಪಿದರೆ ಇಂಗ್ಲಿಶರ ಪ್ರೇಮಕ್ಕೆ ತಾನು ಪಾತ್ರನಾಗಬಹುದೆಂದು ಬಗೆದು ಎಡವರ್ಡನು ಅವರ ಪ್ರಾರ್ಥನೆಯನ್ನು ಮನ್ನಿಸಿದನು. ಗಾಡವಿನನೂ ಹ್ಯಾರಾಲ್ಡನೂ ಇಂಗ್ಲಂಡಿಗೆ ತಿರುಗಿ ಬಂದರು. ಆಗ ರಾಜನು ರಾಜ್ಯಕಾರಭಾರದ ಎಲ್ಲ ಸೂತ್ರಗಳನ್ನು ಅವರ

ಕೈಯಲ್ಲಿ ಒಪ್ಪಿಸಿ ಅವರ ತಂತ್ರದಂತೆ ರಾಜ್ಯಕಾರಭಾರವನ್ನು ಸಾಗಿಸಿದನು. ಇದೇ ಸಮಯದಲ್ಲಿ ಇಂಗ್ಲಿಶ್ ಸರದಾರರಿಗೆ ದೊಡ್ಡದೊಡ್ಡ ಅಧಿಕಾರಗಳು ದೊರೆತುವು. ೧೦೫೩ರಲ್ಲಿ ಗಾಡವಿನನು ಮರಣಹೊಂದಿದ ಬಳಿಕ ಹ್ಯಾರಾಲ್ಡನ ತಂತ್ರದಂತೆ ರಾಜ್ಯಕಾರಭಾರವನ್ನು ಮಾಡಲು ರಾಜನು ಒಪ್ಪಿದನು. ಮುಂದೆ ೧೦೬೬ರಲ್ಲಿ ಎಡವರ್ಡನು ಮರಣಹೊಂದಿದನು. ಅವನಿಗೆ ಗಂಡುಮಕ್ಕಳಿರಲಿಲ್ಲ. ಅವನ ಮಲತಮ್ಮನಾದ ಎಡಮಂಡನ ಮೊಮ್ಮಗನಾದ ಎಡಗರ ಎಥಲಿಂಗನು ಅವನ ವಾರಸದಾರನಿದ್ದನು. ಆದರೆ ಅವನು ಬಲು ಚಿಕ್ಕವನಿದ್ದುದರಿಂದ ವಿಟನಗೆಮೂಟ್ ಸಭೆ ಕರ್ತೃತ್ವಶಾಲಿಯೂ ಯೋಗ್ಯನೂ ಆದ ಹ್ಯಾರಾಲ್ಡನಿಗೆ ರಾಜ್ಯಪದವನ್ನು ಒಪ್ಪಿಸಿತು. ಎಡವರ್ಡನ ಮರಣದ ವಾರ್ತೆ ನಾರ್ಮಂಡಿಯ ಸರದಾರನಾದ ವಿಲಿಯಮನಿಗೆ ಗೊತ್ತಾದೊಡನೆ ತಾನು ಇಂಗ್ಲಂಡಿನ ಪ್ರಭುತ್ವಕ್ಕೆ ವಾರಸದಾರನಾಗಿ ನಿಯೋಜಿಸಲ್ಪಟ್ಟಿರುವೆನೆಂದು ಹೇಳಿ ಇಂಗ್ಲಂಡ ರಾಜ್ಯವನ್ನು ತೆಗೆದುಕೊಳ್ಳಲು ದೊಡ್ಡ ಸೈನ್ಯವನ್ನೂ ಹಡಗುಪಡೆಯನ್ನೂ ತೆಗೆದುಕೊಂಡು ಹೊರಟನು. ವಿಲಿಯಮನು ಹೀಗೆ ಬರುವನೆಂದು ಹ್ಯಾರಾಲ್ಡನಿಗೆ ಗೊತ್ತಿರಲಿಲ್ಲ. ನಾರ್ವೆಯ ಅರಸನು ಇಂಗ್ಲಂಡಿನ ಉತ್ತರಭಾಗಕ್ಕೆ ದಾಳಿತಂದುದನ್ನು ತಿಳಿದು ಹ್ಯಾರಾಲ್ಡನು ಲಗುಬಗೆಯಿಂದ ಅತ್ತಕಡೆಗೆ ಹೋದನು. ಅವನು ನಾರ್ವೆಯ ಅರಸನೊಡನೆ ಪರಾಕ್ರಮದಿಂದ ಕಾದಿ ಅವನನ್ನು ಸೋಲಿಸಿದನು. ಈ ವಿಜಯವನ್ನು ಸಂಪಾದಿಸಿ ಅವನು ತಿರುಗುವಷ್ಟರಲ್ಲಿ ವಿಲಿಯಮನು ದೊಡ್ಡ ಸೈನ್ಯದೊಡನೆ ಇಂಗ್ಲಂಡಿನ ದಕ್ಷಿಣ ಸಮುದ್ರತೀರದ ಮೇಲೆ ಇಳಿದಿರುವನೆಂಬ ವಾರ್ತೆಯನ್ನು ಕೇಳಿದನು. ಕೂಡಲೆ ಅವನನ್ನು ಇದಿರಿಸಲು ಅವನು ದಕ್ಷಿಣದ ಕಡೆಗೆ ಹೊರಟನು. ೧೦೬೬ರಲ್ಲಿ ಅಕ್ಟೋಬರ ತಿಂಗಳಲ್ಲಿ ಇಂಗ್ಲಂಡಿನ ದಕ್ಷಿಣ ಸಮುದ್ರತೀರದ ಬಳಿಯಲ್ಲಿಯ ಹೇಸ್ಟಿಂಗ್ಸ ಎಂಬಲ್ಲಿ ಘೋರವಾದ ಸಂಗ್ರಾಮವೆಸಗಿತು. ಈ ಸಂಗ್ರಾಮದಲ್ಲಿ ಇಂಗ್ಲಿಶ್ ಸೈನ್ಯವು ಸೋತುದಲ್ಲದೆ ಹ್ಯಾರಾಲ್ಡನು ಮರಣಹೊಂದಿದನು. ವಿಜಯಿಯಾದ ವಿಲಿಯಮನಿಗೆ ವಿಟನಗೆಮೂಟ ಸಭೆ ಇಂಗ್ಲಂಡಿನ ರಾಜ್ಯಪದವನ್ನು ಕೊಟ್ಟಿತು (೧೦೬೬).

## ೫. ನಾರ್ಮನ ವಂಶವು.

(೧೦೬೬—೧೧೫೪)

**ನಾರ್ಮನರು**—ನಾರ್ಮನರು ಮೂಲತಃ ಡೇನ್ಸ ಅಥವಾ ನಾರ್ಥಮೆನರಿದ್ದರು. ಈ ನಾರ್ಥಮೆನರು (ಉತ್ತರದ ಜನರು) ಇಂಗ್ಲಂಡಿನಂತೆ ಫ್ರಾನ್ಸಿನ

ತೀರಪ್ರದೇಶದ ಮೇಲೆ ದಾಳಿಮಾಡುತ್ತಿದ್ದರು. ಅವರ ಉಪದ್ರವಕ್ಕೆ ಬೇಸತ್ತು ಫ್ರಾನ್ಸಿನ ಅರಸನು ಅವರ ನಾಯಕನಾದ **ರೋಲೊ** ಎಂಬವನಿಗೆ ಫ್ರಾನ್ಸಿನ ತೀರ ಪ್ರದೇಶದಲ್ಲಿಯ ಒಂದು ಪ್ರಾಂತದಲ್ಲಿ ತನ್ನ ಮಾಂಡಲಿಕನಾಗಿರಲು ಅಪ್ಪಣೆ ಯನ್ನಿತ್ತನು (ಇ. ಸ. ೯೧೨). ನಾರ್ಮನರಿಂದ ಆ ಪ್ರಾಂತಕ್ಕೆ **ನಾರ್ಮಂಡಿ** ಎಂದು ಹೆಸರು ಬಂದಿತು.

## ೧ನೆಯ ವಿಲಿಯಮನು (೧೦೬೬—೧೦೮೭)

ವಿಲಿಯಮನು ನಾರ್ಮನ ವಂಶದ* ಮೊದಲನೆಯ ಅರಸನು. ಈತನು ಸಂಗ್ರಾಮದಲ್ಲಿ ವಿಜಯಿಯಾಗಿ ಮತ್ತು ವಿಟನಗೆಮೋಟ ಸಭೆಯ ಅನುಮತಿ ಯನ್ನು ಪಡೆದು ಇಂಗ್ಲಂಡಿನ ರಾಜ ಪದಕ್ಕೆ ತನ್ನ ಅಧಿಕಾರವನ್ನು ಸ್ಥಾಪಿ ಸಿದನು. ಆದರೆ ಮೊದಮೊದಲು ಅಖಿಲ ಇಂಗ್ಲಂಡಿನಲ್ಲಿ ಇವನ ಆಳ್ಕೆ ಸ್ಥಿರವಾಗಿ ನೆಲಸಿರಲಿಲ್ಲ. ಇಂಗ್ಲಂಡಿ ನ ಪಶ್ಚಿಮ ಮತ್ತು ಉತ್ತರ ಭಾಗ ಗಳಲ್ಲಿ ಬಂಡುಗಳು ನಡೆದಿದ್ದುವು. ವಿಲಿಯಮನು ಪಶ್ಚಿಮದಲ್ಲಿಯ ಎಕ್ಸೆಟರ ಮತ್ತು ಉತ್ತರದಲ್ಲಿ ಯ ಯಾರ್ಕ ಮತ್ತು ಚೆಸ್ಟರ ಮೊದಲಾದ ಸ್ಥಳಗಳಿಗೆ ದಂಡೆತ್ತಿ ಹೋಗಿ ಇಂಗ್ಲಿಶ್ ಸರದಾರರ ಬಂಡುಗಳನ್ನು ಮುರಿದನು. ಹಿಯರ ವರ್ಡ ದಿ ಸ್ಯಾಕ್ಸನ್ ಎಂಬವನು ಇಲಾಯ ಎಂಬ ಜವಳು ಪ್ರದೇಶ ದಲ್ಲಿ ನಿಂತು ವಿಲಿಯಮನಿಗೆ ಉಪ ದ್ರವವೀಯಲು ಪ್ರಯತ್ನಿಸಿದನು. ಆದರೆ ೧೦೭೧ರಲ್ಲಿ ವಿಲಿಯಮನು ಅವನ ಬಲವ ನ್ನೂ ಮುರಿದುದರಿಂದ ಎಲ್ಲೆಡೆಯಲ್ಲಿಯೂ ಶಾಂತತೆಯುಂಟಾಯ್ತು. ಆಗ ಅಲ್ಲಿಯ



೧ನೆಯ ವಿಲಿಯಮನು

* ಮುಂದಿನ ಪುಟದಲ್ಲಿ ನಾರ್ಮನ ವಂಶವೃಕ್ಷವು ಕೊಡಲ್ಪಟ್ಟಿದೆ.

ಬಹು ದೊಡ್ಡ ಪ್ರದೇಶವು ಉಧ್ವಸ್ತವಾಗಿತ್ತು. ಮತ್ತೆ ಬಂಡುಗಳು ಆಗಬಾರದೆಂದು ವಿಲಿಯಮನು ಬಂಡುಗಾರರಾದ ಇಂಗ್ಲಿಶ್ ಸರದಾರರ ಜಹಾಗೀರಿಗಳನ್ನು ಜಪ್ತುಮಾಡಿ ಅವನ್ನು ತನ್ನ ನಾರ್ಮನ ಸರದಾರರಿಗೆ ಕೊಟ್ಟನು. ಜನರಲ್ಲಿ ತನ್ನ ಹೆದರಿಕೆ ಉಳಿಯಬೇಕೆಂದು ಅವನು ಮುಖ್ಯ ಮುಖ್ಯ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಸಿ ಅಲ್ಲಿ ನಾರ್ಮನ್ ಸೈನ್ಯಗಳನ್ನಿಟ್ಟನು.

**ಸರಂಜಾಮಿ ಪದ್ಧತಿ** (Feudal System)—ತನ್ನ ಆಳ್ಕೆಯ ಮೊದಲನೆಯ ಐದು ವರ್ಷಗಳಲ್ಲಿ ವಿಲಿಯಮನು ದೇಶದಲ್ಲಿಯ ಬಂಡುಗಳನ್ನು ಮುರಿದು ಇಂಗ್ಲಂಡಿನಲ್ಲಿಯ ಎಲ್ಲ ಭೂಮಿಯ ಮತ್ತು ಜಹಾಗೀರಿಗಳ ಒಡೆಯನಾದನು. ಆ ಬಳಿಕ ಅವನು ಯುರೋಪದಲ್ಲಿಯ ಆಗಿನ ಪದ್ಧತಿಯಂತೆ ಇಂಗ್ಲಂಡಿನಲ್ಲಿ ಸರಂಜಾಮಿ ಪದ್ಧತಿಯನ್ನು ಬಳಕೆಯಲ್ಲಿ ತಂದನು. ಮೊದಲು ಅವನು ಇಂಗ್ಲಂಡಿನಲ್ಲಿಯ ಎಲ್ಲ ಭೂಮಿಗೆ ರಾಜನು ಒಡೆಯನಾಗಿರುವನೆಂದು ಸಾರಿ ಆ ಭೂಮಿಯ ಕೆಲವೊಂದು ಭಾಗವನ್ನು ತನ್ನ ವಶದಲ್ಲಿ ಇಟ್ಟುಕೊಂಡು ಉಳಿದುದನ್ನು ತನ್ನ ನಾರ್ಮನ ಸರದಾರರಲ್ಲಿಯೂ ತನಗೆ ಅನುಕೂಲರಾಗಿದ್ದ ಇಂಗ್ಲಿಶ್ ಸರದಾರರಲ್ಲಿಯೂ ಹಂಚಿದನು. ಇವರು ಸರಂಜಾಮಿ **ಜಹಾಗೀರದಾರರು** ಅಥವಾ **ಸರದಾರರು** ಎಂದು ಕರೆಯಲ್ಪಡುತ್ತಿದ್ದರು. ಇವರು ತಮಗೆ ದೊರೆತ ಜಹಾಗೀರಿಗಳಿಗೋಸುಗ ಕೆಲವು ಕರಾರುಗಳನ್ನು ಪಾಲಿಸಬೇಕಾಗುತ್ತಿತ್ತು. ಆ ಕರಾರುಗಳು ಇಂತು:—ರಾಜನಿಷ್ಠರಾಗಿದ್ದು ಯುದ್ಧಕಾಲದಲ್ಲಿ ಸೈನ್ಯದೊಡನೆ ಬಂದು ಅರಸನಿಗೆ ನೆರವಾಗುವುದು, ಅರ

---

**ನಾರ್ಮನ ವಂಶವು (೧೦೬೬—೧೧೫೪)**



ಸನಿಗೆ ನಿರ್ದಿಷ್ಟವಾದ ಕರವನ್ನು ಕೊಡುವುದು, ಅರಸರ ಹಿರಿಯ ಮಗನು ವಯಸ್ಕನಾಗಿ ಅವನ ಶಿಕ್ಷಣವು ಮುಗಿದ ಬಳಿಕ ಅವನಿಗೆ ಸರದಾರಿಕೆಯನ್ನು (Knighthood) ಕೊಡುವ ಸಮಾರಂಭದ ಸಮಯದಲ್ಲಿಯೂ ಅರಸನ ಹಿರಿಯ ಮಗಳ ಲಗ್ನಸಮಾರಂಭದ ಕಾಲದಲ್ಲಿಯೂ ಕಾಣಿಕೆಗಳನ್ನು ಕೊಡುವುದು; ಇವಲ್ಲದೆ ಮತ್ತೆ ಬೇರೆ ಕರಗಳನ್ನು (Aids) ಕೊಡಬೇಕಾಗುತ್ತಿತ್ತು. ಜಹಾಗೀರದಾರರಿಗೆ ತಮ್ಮ ಜಹಾಗೀರಿಗಳನ್ನು ಮಾರಲಾಗಲಿ ಯಾರಿಗಾದರೂ ಕೊಡಲಾಗಲಿ ಪ್ರತಿಬಂಧವಿದ್ದಿತು. ಯಾವನಾದರೂ ಜಹಾಗೀರದಾರನು ಸತ್ತರೆ ಅವನ ಜಹಾಗೀರು ಅವನ ಹಿರಿಯ ಮಗನಿಗೆ ಹೋಗುತ್ತಿತ್ತು. ಆದರೆ ಆ ಸಮಯದಲ್ಲಿ ಅವನು ಅರಸನಿಗೆ ಬಹಳವಾಗಿ ಕಾಣಿಕೆಯನ್ನು ಕೊಡಬೇಕಾಗುತ್ತಿತ್ತು. ಜಹಾಗೀರದಾರನಿಗೆ ವಾರಿಸದಾರನು ಇಲ್ಲದಂತಾದರೆ ಅವನ ಜಹಾಗೀರವು ಅರಸನಿಗೆ ತಿರುಗಿ ಹೋಗುತ್ತಿತ್ತು. ವಾರಸದಾರನು ಅಲ್ಪ ವಯಸ್ಕನಾಗಿದ್ದರೆ ಅವನು ಸಜ್ಞಾನನಾಗುವವರೆಗೆ ಜಹಾಗೀರಿಯ ವ್ಯವಸ್ಥೆಯನ್ನು ಅರಸನು ತನ್ನ ಅಧಿಕಾರಿಗಳಿಂದ ಮಾಡಿಸುತ್ತಿದ್ದನು. ಅರಸನ ಸಮ್ಮತಿಯ ಹೊರ್ತು ಜಹಾಗೀರದಾರರಿಗೆ ತಮ್ಮದಾಗಲಿ ತಮ್ಮ ಹಿರಿಯ ಮಗನದಾಗಲಿ ಲಗ್ನ ಸಮಾರಂಭವನ್ನು ನೆರವೇರಿಸಲು ಪ್ರತಿಬಂಧವಿದ್ದಿತು. ಯಾವನಾದರೂ ಸರದಾರನು ಮೇಲಿನ ಕರಾರುಗಳನ್ನು ಪಾಲಿಸದಿದ್ದರೆ ಅವನ ಜಹಾಗೀರಿಯನ್ನು ಅರಸನು ತನ್ನ ವಶದಲ್ಲಿ ತೆಗೆದುಕೊಳ್ಳುತ್ತಿದ್ದನು.

ಸಾಕ್ಷಾತ್ತಾಗಿ ರಾಜನಿಂದ ಜಹಾಗೀರುಗಳನ್ನು ಪಡೆದವರಿಗೆ ಪ್ರಮುಖ ಜಹಾಗೀರದಾರರೆಂದು (Tenants-in-chief) ಹೆಸರು. ಈ ಪ್ರಮುಖ ಜಹಾಗೀರದಾರರು ತಮ್ಮ ಜಹಾಗೀರಿಯಲ್ಲಿಯ ಕೆಲವು ಭಾಗವನ್ನು ತಮ್ಮ ವಶಕ್ಕೆ ಇಟ್ಟುಕೊಂಡು ಉಳಿದುದನ್ನು ಮೇಲಿನ ಕರಾರುಗಳಿಂದ ಎರಡನೆಯ ಜಹಾಗೀರದಾರರಿಗೆ ಕೊಡುತ್ತಿದ್ದರು. ಈ ಜಹಾಗೀರದಾರರೂ ತಮ್ಮ ಜಹಾಗೀರಿಗಳನ್ನು ಮೇಲಿನ ಕರಾರುಗಳಿಂದ ಇನ್ನಿತರರಿಗೆ ವಿಭಾಗಿಸಿಕೊಡುತ್ತಿದ್ದರು. ಕೊನೆಯಲ್ಲಿ ಭೂಮಿಯಲ್ಲಿ ದುಡಿದು ಭೂಮಿಗಳನ್ನು ಸಾಗುಮಾಡುವ ಕರಾರಿನಿಂದ ಒಕ್ಕಲಿಗರಿಗೆ ಭೂಮಿಗಳು ದೊರೆಯುತ್ತಿದ್ದುವು. ಇಂತಹ ಒಕ್ಕಲಿಗರಿಗೆ ಸರ್ಫ (Serf) ಅಥವಾ ವಿಲೆನ (Villein) ಎಂದು ಹೆಸರು ಇದ್ದಿತು.

ಈ ಸರಂಜಾಮಿಯ ಪದ್ಧತಿಯಲ್ಲಿ ಕೆಳಗಿನ ಜಹಾಗೀರದಾರರು ತಮ್ಮ ಮೇಲಿನ ಜಹಾಗೀರದಾರರ ಆಜ್ಞೆಯನ್ನು ಮೊದಲು ಪಾಲಿಸುತ್ತಿದ್ದರು, ಆ ಬಳಿಕ ಅರಸನ ಆಜ್ಞೆಯನ್ನು ಪಾಲಿಸುತ್ತಿದ್ದರು. ಈ ದೋಷವನ್ನು ತೆಗೆಯಲು ವಿಲಿಯ

ಮನು ೧೦೮೬ರಲ್ಲಿ ಸಾಲ್ಸಬೆರಿ ಎಂಬಲ್ಲಿ ಸಣ್ಣ ದೊಡ್ಡ ಎಲ್ಲ ಜಹಾಗೀರದಾರರ ದರಬಾರವನ್ನು ನೆರೆಯಿಸಿ ಮಹತ್ವದ ನಿರ್ಣಯವೊಂದನ್ನು ಮಾಡಿಸಿದನು. ಎಲ್ಲರೂ ಮೊದಲು ರಾಜನಿಗೆ ರಾಜನಿಷ್ಠರಾಗಿರಬೇಕು, ಆ ಬಳಿಕ ತಮ್ಮ ಮೇಲಿನ ಜಹಾಗೀರದಾರರಿಗೆ ಸ್ವಾಮಿನಿಷ್ಠರಾಗಬೇಕೆಂಬುದೇ ಆ ನಿರ್ಣಯವು. ಈ ನಿರ್ಣಯದಂತೆ ವಿಲಿಯಮನು ಎಲ್ಲರಿಂದಲೂ ಶಪಥವನ್ನು ಮಾಡಿಸಿದನು.

**ಡೂಮ್ಸ ಡೇ ಬುಕ್** (ಸ್ಥಾವರ ಜಂಗಮ ಆಸ್ತಿಯ ಪತ್ರಿಕೆ)—ವಿಲಿಯಮನು ತನ್ನ ರಾಜ್ಯದಲ್ಲಿಯ ಎಲ್ಲ ಜಹಾಗೀರದಾರರು, ಅವರ ವಶದಲ್ಲಿದ್ದ ಭೂಮಿಯ ಕ್ಷೇತ್ರಫಲವು, ಅವರ ಉತ್ಪನ್ನವು, ಮನೆಗಳು, ಅವುಗಳಲ್ಲಿ ವಾಸಿಸುವ ಜನರು ಇವೇ ಮೊದಲಾದ ವಿಷಯಗಳನ್ನು ಕುರಿತು ಮಾಹಿತಿಯನ್ನು ಕೊಡುವ ಒಂದು ಪತ್ರಿಕೆಯನ್ನು ಮಾಡಿಸಿದನು. ಇದಕ್ಕೆ **ಡೂಮ್ಸ ಡೇ ಬುಕ್** ಎಂದು ಹೆಸರು. ಈ ಪತ್ರಿಕೆ ಲ್ಯಾಟಿನ್ ಭಾಷೆಯಲ್ಲಿ ಬರೆಯಲ್ಪಟ್ಟಿತ್ತು. ಜನರಿಂದ ಕರವನ್ನು ವಸೂಲುಮಾಡಲು ಈ ಪತ್ರಿಕೆಯ ಉಪಯೋಗವು ಬಹಳವಾಗುತ್ತಿತ್ತು.

**ಕರ್ಫ್ಯೂ ಗಂಟೆ**—ನಾರ್ಮನರಿಗೂ ಇಂಗ್ಲಿಶರಿಗೂ ಆಗ ವೈಮನಸ್ಯವು ಬಹಳವಾಗಿದ್ದಿತು. ಆದರಿಂದ ಆಗಾಗ ಬಂಡುಗಳಾಗುತ್ತಿದ್ದುವು ಮತ್ತು ರಾತ್ರಿ ಕಾಲದಲ್ಲಿ ಮನೆಗಳಿಗೆ ಬೆಂಕಿ ಬೀಳುತ್ತಿತ್ತು. ಆಗಿನ ಕಾಲದ ಮನೆಗಳೆಲ್ಲವೂ ಕಟ್ಟಿಗೆಯ ಮನೆಗಳೇ ಆಗಿದ್ದುವು. ಯಾವುದಾದರೊಂದು ಮನೆಗೆ ಬೆಂಕಿ ಇದ್ದರೆ ಅದು ಬಹಳವಾಗಿ ಹಬ್ಬುತ್ತಿತ್ತು. ಆದುದರಿಂದ ಈ ಅನಾಹುತವನ್ನು ತಪ್ಪಿಸಲು ಬೇಸಗೆಯಲ್ಲಿ ಸೂರ್ಯಾಸ್ತದ ಸಮಯದಲ್ಲಿ ಮತ್ತು ಚಳಿಗಾಲದಲ್ಲಿ ರಾತ್ರಿ ಎಂಟು ಗಂಟೆಗೆ ಬೆಂಕಿ ಆರಿಸಲ್ಪಡಬೇಕೆಂದು ನಿರ್ಣಯಿಸಲ್ಪಟ್ಟಿತು. ಬೆಂಕಿಯನ್ನು ಆರಿಸುವ ವೇಳೆಯನ್ನು ಸೂಚಿಸಲು ಗಂಟೆಯೊಂದು ಬಾರಿಸಲ್ಪಡುತ್ತಿತ್ತು. ಅದಕ್ಕೆ 'ಕರ್ಫ್ಯೂ ಬೆಲ್' ಎಂದು ಹೆಸರು. ಕರ್ಫ್ಯೂ ಎಂಬುದು ಫ್ರೆಂಚ ಶಬ್ದವು, "ಬೆಂಕಿಯನ್ನು ಆರಿಸಿರಿ" ಎಂದು ಅದರ ಅರ್ಥವು.

**ವಿಲಿಯಮನ ಧಾರ್ಮಿಕ ನೀತಿ**—ರೋಮದ ಪೋಪನು ಕ್ರೈಸ್ತ ಧರ್ಮದ ಜಗದ್ಗುರುವೆಂದು ಭಾವಿಸಲ್ಪಡುತ್ತಿದ್ದನು. ಆದರೆ ಇಂಗ್ಲಂಡಿನಲ್ಲಿ ಅವನ ಅಧಿಕಾರವು ಅಷ್ಟು ನೆಲೆಗೊಂಡಿರಲಿಲ್ಲ. ಆದುದರಿಂದ ವಿಲಿಯಮನ ಆಳ್ಕೆಯಲ್ಲಿ ಅವನು ಇಂಗ್ಲಂಡಿನಲ್ಲಿ ತನ್ನ ಅಧಿಕಾರವನ್ನು ನೆಲೆಗೊಳಿಸಲು ಪ್ರಯತ್ನಿಸಿದನು. ಆದರೆ ವಿಲಿಯಮನು ಧಾರ್ಮಿಕ ವಿಷಯದಲ್ಲಿ ಪೋಪನನ್ನು ಜಗದ್ಗುರುವೆಂದು ಮನ್ನಿಸಿದರೂ, ತನ್ನ ಅಪ್ಪಣೆಯಿಲ್ಲದೆ ಪೋಪನು ಇಂಗ್ಲಂಡಿನಲ್ಲಿ ಯಾವ ಬಗೆಯ ಆಜ್ಞಾಪತ್ರವನ್ನೂ ಪ್ರಕಟಗೊಳಿಸಲಾಗದೆಂದೂ, ತನ್ನ ಸರದಾರರಲ್ಲಿ ಯಾರನ್ನೂ

ಧರ್ಮಬಹಿಷ್ಕೃತರಾಗಿ ಮಾಡಕೂಡದೆಂದೂ, ಇಂಗ್ಲಂಡಿನಲ್ಲಿ ಧರ್ಮಪರಿಷತ್ತುಗಳನ್ನು ಕೂಡಿಸಕೂಡದೆಂದೂ ಪೋಪನಿಗೆ ತಿಳಿಸಿದನು. ಆ ಬಳಿಕ ವಿಲಿಯಮನು ಅನೇಕ ಸ್ಥಳಗಳಲ್ಲಿಯ ಮೊದಲಿನ ಇಂಗ್ಲಿಶ್ ಧರ್ಮಾಧಿಕಾರಿಗಳನ್ನು ತೆಗೆದು ಅವರ ಸ್ಥಳದಲ್ಲಿ ನಾರ್ಮನ್ ಧರ್ಮಾಧಿಕಾರಿಗಳನ್ನು ನಿಯೋಜಿಸಿದನು. ನಾರ್ಮಂಡಿಯಲ್ಲಿ ಲ್ಯಾನಫ್ರ್ಯಾಂಕನೆಂಬ ಇಟಲಿ ದೇಶದ ವಿದ್ವಾಂಸನಿದ್ದನು. ಅವನನ್ನು ವಿಲಿಯಮನು ಕ್ಯಾಂಟರಬರಿಯ ಆರ್ಚಬಿಶಪನಾಗಿ ನಿಯೋಜಿಸಿದನು. ಆದರೆ ಧರ್ಮಾಧಿಕಾರಿಗಳೂ ಜಹಾಗೀರದಾರರಂತೆ ರಾಜನಿಷ್ಠೆಯ ಶಪಥವನ್ನು ಮಾಡಬೇಕಾಗುತ್ತಿತ್ತು. ಧರ್ಮಾಧಿಕಾರಿಗಳ ಮತ್ತು ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಜನರ ಅಪರಾಧಗಳ ವಿಚಾರಣೆಯನ್ನು ಮಾಡುವ ಅಧಿಕಾರವನ್ನು ಮಾತ್ರ ವಿಲಿಯಮನು ಧರ್ಮಾಧಿಕಾರಿಗಳ ನ್ಯಾಯಕೋರ್ಟಿಗೆ ಕೊಟ್ಟನು.

**ಮನ್ನೆಯರ ಮಂಡಲವು** (The Great Council)—ಆಂಗ್ಲೋ ಸ್ಯಾಕ್ಸನ್ ರಾಜರ ಕಾಲದಲ್ಲಿ ರಾಜನಿಗೆ ಆಲೋಚನೆಯನ್ನು ಹೇಳಲು ವಿಟನಗೆಮಾಟ ಎಂಬ ಮಂಡಳವಿದ್ದಿತು. ವಿಲಿಯಮನು ಮೊದಲಿನ ಪ್ರಘಾತವನ್ನು ಶಾಶ್ವತವಾಗಿ ಇಡುವ ಉದ್ದೇಶದಿಂದ ಈ ಮಂಡಳವನ್ನು ಮುರಿಯಲಿಲ್ಲ; ಆದರೆ ಅದರಲ್ಲಿ ರಾಜನ ಪ್ರಮುಖ ಸರದಾರರನ್ನೂ ಧರ್ಮಾಧಿಕಾರಿಗಳನ್ನೂ ಸೇರಿಸಿದನು. ಈ ಮಂಡಳಕ್ಕೆ **ಮನ್ನೆಯರ ಮಂಡಳ** (The Great Council) ವೆಂದು ಹೆಸರು ಬಂದಿತು.

**ನೂತನ ಅರಣ್ಯವು**—ವಿಲಿಯಮನಿಗೆ ಬೇಟೆಯಲ್ಲಿ ಬಹು ಆಸಕ್ತಿಯಿದ್ದಿತು. ಅದಕ್ಕೋಸುಗ ಅವನು ಬಹು ವಿಸ್ತಾರವಾದ ಪ್ರದೇಶವನ್ನು ಅರಣ್ಯಕ್ಕೆಂದು ಕಾದಿಟ್ಟನು. ಆ ಪ್ರದೇಶದಲ್ಲಿಯ ಹಳ್ಳಿಗಳನ್ನು ಹಾಳುಗೆಡಹಿ ಅಲ್ಲಿಯ ಜನರನ್ನು ಅಲ್ಲಿಂದ ಹೊರದೂಡಿದನು. ಈ ಅರಣ್ಯದ ವಿಷಯದಲ್ಲಿ ನಿಯಮಗಳಾದರೂ ಬಹು ಉಗ್ರವಾಗಿದ್ದವು. ರಾಜನ ಅಪ್ಪಣೆಯಿಲ್ಲದೆ ಯಾವನಿಗೂ ಅಲ್ಲಿ ಬೇಟೆಯಾಡಲು ಶಕ್ಯವಿರಲಿಲ್ಲ.

ವಿಲಿಯಮನಿಗೆ **ರಾಬರ್ಟ, ವಿಲಿಯಮ** ಮತ್ತು **ಹೆನ್ರಿ** ಎಂಬ ಮೂವರು ಗಂಡುಮಕ್ಕಳೂ **ಅಡೆಲಾ** ಎಂಬ ಒಬ್ಬ ಮಗಳೂ ಇದ್ದರು. ವಿಲಿಯಮನು ನಾರ್ಮಂಡಿಗೆ ಹೋದಾಗ ಅಲ್ಲಿಯೆ ೧೦೮೭ರಲ್ಲಿ ಮರಣಹೊಂದಿದನು.

**೨ನೆಯ ವಿಲಿಯಮನು** (೧೦೮೭—೧೧೦೦)—ಮೊದಲನೆಯ ವಿಲಿಯಮನು ಮರಣಹೊಂದಿದ ಬಳಿಕ ರಾಜಪದದ ವಿಷಯದಲ್ಲಿ ಅವನ ಮಕ್ಕಳಲ್ಲಿ ಕದನವು ಹುಟ್ಟಿತು. ರಾಬರ್ಟನು ಹಿರಿಯ ಮಗನಾಗಿದ್ದರೂ ಚಿಕ್ಕವನಾದ ವಿಲಿಯ

ಮನು ಸರದಾರರ ಸಾಹಾಯ್ಯದಿಂದ ಇಂಗ್ಲಂಡಿನ ರಾಜಪದವನ್ನು ದೊರಕಿಸಿದನು. ಆದರೆ ರಾಬರ್ಟನಿಗೆ ನಾರ್ಮಂಡಿ ಜಹಾಗೀರು ದೊರೆತಿತು. ವಿಲಿಯಮನಿಗೆ ಕೆಂಗೂದಲಿದ್ದುದರಿಂದ ಅವನಿಗೆ ಕೆಂಪು ವಿಲಿಯಮನೆಂದು ಹೆಸರು ಬಂದಿತು. ವಿಲಿಯಮನು ಉಗ್ರನೂ ನಿಷ್ಠುರನೂ ಆದ ರಾಜನಾಗಿದ್ದನು. ಅವನು ಧರ್ಮಾಧಿಕಾರಿಗಳ, ಸರದಾರರ ಮತ್ತು ಜನರ ಮೇಲೆ ಭಾರವಾದ ಕರಗಳನ್ನು ಕೂಡಿಸಿದನು. ಅಲ್ಲಲ್ಲಿಯ ಧರ್ಮಾಧಿಕಾರಿಗಳ ಸ್ಥಳಗಳು ಬರಿಯವಾದರೆ ಆ ಸ್ಥಳಗಳಲ್ಲಿ ಅವನು ಬೇರೆ ಜನರನ್ನು ತರುತ್ತಿರಲಿಲ್ಲ. ಇದರಿಂದ ಉಳಿಯುತ್ತಿರುವ ಹಣವನ್ನು ತಾನೇ ತೆಗೆದುಕೊಳ್ಳುತ್ತಿದ್ದನು.

ವಿಲಿಯಮನಿಗೆ ಬೇಟೆಯ ವ್ಯಸನವು ಬಹಳವಾಗಿತ್ತು. ನೂತನ ಅರಣ್ಯದಲ್ಲಿ ಬೇಟೆಯಾಡುತ್ತಿರುವಾಗ ತಪ್ಪಿ ಬಾಣವು ತಾಗಿ ವಿಲಿಯಮನು ಮರಣ ಹೊಂದಿದನು (೧೧೦೦).

೧ನೆಯ ಹೆನ್ರಿ (೧೧೦೦–೧೧೩೫)—೨ನೆಯ ವಿಲಿಯಮನ ಮರಣದ ತರುವಾಯದಲ್ಲಿ ಅವನ ಅಣ್ಣನಾದ ರಾಬರ್ಟ ಮತ್ತು ತಮ್ಮನಾದ ಹೆನ್ರಿ ಇವರಲ್ಲಿ ರಾಜಪದದ ವಿಷಯದಲ್ಲಿ ಕದನವು ಉದ್ಭವಿಸಿತು. ಹೆನ್ರಿ ತೀಕ್ಷ್ಣ ಬುದ್ಧಿಯವನೂ ಧೂರ್ತನೂ ಆಗಿದ್ದನು. ಅವನು ಸರದಾರರ ಸಾಹಾಯ್ಯದಿಂದ ಇಂಗ್ಲಂಡಿನ ಪಟ್ಟವನ್ನು ಆಕ್ರಮಿಸಿದನು. ಇಂಗ್ಲಿಶರ ಸಹಾನುಭೂತಿಯನ್ನು ಪಡೆಯಲು ಅವನು ಇಂಗ್ಲಂಡಿನ ಕಾಯ್ದೆಗಳನ್ನೂ ರೂಢಿಗಳನ್ನೂ ಅನುಸರಿಸುವೆನೆಂದು ಸಾರಿದನು. ಇದಲ್ಲದೆ ಅವನು ಇಂಗ್ಲಂಡಿನ ಪ್ರಸಿದ್ಧ ರಾಜನಾದ ಅಲ್ಫ್ರೆಡನ ವಂಶದಲ್ಲಿಯ ಒಬ್ಬ ರಾಜಕನ್ಯೆಯನ್ನು ಮದುವೆಯಾದನು.

ಅವನ ಅಣ್ಣನಾದ ರಾಬರ್ಟನ ವಶದಲ್ಲಿ ನಾರ್ಮಂಡಿಯ ಜಹಾಗೀರ ಇದ್ದಿತು, ಮತ್ತು ಅವನು ಇಂಗ್ಲಂಡಿನ ರಾಜಪದವನ್ನು ದೊರಕಿಸಲು ಪ್ರಯತ್ನಿಸುತ್ತಿದ್ದನು. ಆದುದರಿಂದ ಹೆನ್ರಿ ೧೧೦೬ರಲ್ಲಿ ಅವನ ಮೇಲೆ ದಾಳಿಮಾಡಿ ಅವನನ್ನು ಸೆರೆಹಿಡಿದನು, ಮತ್ತು ನಾರ್ಮಂಡಿಯ ಜಹಾಗೀರನ್ನು ತನ್ನ ವಶದಲ್ಲಿ ತೆಗೆದುಕೊಂಡನು. ರಾಬರ್ಟನು ಸಾಯುವವರೆಗೆ ೨೮ ವರುಷ ಹೆನ್ರಿಯ ಸೆರೆಯಾಳಾಗಿದ್ದನು.

ಹೆನ್ರಿಯ ಒಬ್ಬನೇ ಮಗನಾದ ವಿಲಿಯಮನು ೧೧೨೦ರಲ್ಲಿ ನಾರ್ಮಂಡಿಯಿಂದ ಇಂಗ್ಲಂಡಿಗೆ ಬರುತ್ತಿರುವಾಗ ಹಡಗಿಗೆ ಅಪಘಾತವಾಗಿ ಮರಣಹೊಂದಿದನು. ಆದರೂ ಹೆನ್ರಿಗೆ ಅವನ ಮಗಳಾದ ಮ್ಯಾಟಿಲ್ಡಾ ಮತ್ತು ಸೋದರಳಿಯನಾದ ಸ್ಟೀಫನ್ ಇವರು ವಾರಸದಾರರಿದ್ದರು. ಮ್ಯಾಟಿಲ್ಡಾ ಇವಳ ವಿವಾಹವು

ಫ್ರಾನ್ಸಿನಲ್ಲಿಯ ಆಂಜೊ ಜಹಾಗೀರಿಯ ಸರದಾರನಾದ ಜಾಫ್ರೆ ಎಂಬವನೊಡನೆ ಆಗಿತ್ತು. ಜಾಫ್ರೆ ತನ್ನ ಶಿರಸ್ತ್ರಾಣದ ಮೇಲೆ ಒಂದು ತುರಾಯಿಯನ್ನು ಹಚ್ಚುತ್ತಿದ್ದನು. ಈ ತುರಾಯಿಗೆ ಫ್ಲ್ಯಾಂಟಾ ಜಿನಿಸ್ಟಾ ಎಂದು ಲ್ಯಾಟಿನ್ ಭಾಷೆಯ ಹೆಸರು. ಆದುದರಿಂದ ಇವನ ವಂಶಕ್ಕೆ ಫ್ಲ್ಯಾಂಟಾಜಿನೆಟ ಎಂದು ಹೆಸರು ಬಂದಿತು.

ತನ್ನ ತರುವಾಯದಲ್ಲಿ ಮ್ಯಾಟಿಲ್ಡಾ ಇವಳಿಗೆ ಇಂಗ್ಲಂಡಿನ ಪಟ್ಟವು ದೊರೆಯಬೇಕೆಂದು ಹೆನ್ರಿಯ ಇಚ್ಛೆಯಿತ್ತು. ಆದರೆ ೧೧೩೫ರಲ್ಲಿ ಹೆನ್ರಿ ಮರಣಹೊಂದಿದ ಮೇಲೆ ಅವನ ಸೋದರಳಿಯನಾದ ಸ್ಟೀಫನನು ಸರದಾರರ ಸಾಹಾಯ್ಯದಿಂದ ಇಂಗ್ಲಂಡಿನ ರಾಜನಾದನು.

**ಸ್ಟೀಫನನು** (೧೧೩೫—೧೧೫೪)—ಸ್ಟೀಫನನು ಬಹು ದುರ್ಬಲನಾದ ರಾಜನಿದ್ದನು. ಯಾವ ಸರದಾರರ ಸಾಹಾಯ್ಯದಿಂದ ಇವನಿಗೆ ಪಟ್ಟವು ದೊರೆತಿತು ಅವರೇ ಪ್ರಬಲರಾದರು. ಹೆನ್ರಿಯ ಮಗಳಾದ ಮ್ಯಾಟಿಲ್ಡಾ ಇವಳಿಗೆ ಪಟ್ಟವು ದೊರೆಯಬೇಕೆಂದು ಕೆಲವು ಸರದಾರರು ಪ್ರಯತ್ನವನ್ನು ನಡೆಯಿಸಿದರು. ಸ್ಕಾಟಲಂಡಿನ ರಾಜನಾದ ಡೇವಿಡನೂ ಅವಳಿಗೆ ಸಾಹಾಯ್ಯವಿತ್ತನು. ಆದರೆ ಅವಳಿಗೆ ಯಶಸ್ಸು ದೊರೆಯಲಿಲ್ಲ. ಆದುದರಿಂದ ಅವಳು ನಿರಾಶೆಯಾಗಿ ಫ್ರಾನ್ಸಿಗೆ ತಿರುಗಿ ಹೋದಳು. ಆದರೆ ಮುಂದೆ ಅವಳ ಮಗನಾದ ಹೆನ್ರಿ ಆಂಜೊ ಇಂಗ್ಲಂಡಿನ ಪಟ್ಟಕ್ಕೋಸುಗ ಯುದ್ಧವನ್ನು ಸಾಗಿಸಿದನು. ಕೊನೆಗೆ ೧೧೫೩ರಲ್ಲಿ ಸ್ಟೀಫನ್ ಮತ್ತು ಹೆನ್ರಿ ಇವರ ನಡುವೆ ಒಪ್ಪಂದವಾಯ್ತು. ಈ ಒಪ್ಪಂದದಂತೆ ಸ್ಟೀಫನನು ಬದುಕಿರುವವರೆಗೆ ರಾಜ್ಯಮಾಡಬೇಕೆಂದೂ ಅವನ ತರುವಾಯದಲ್ಲಿ ರಾಜಪದವು ಹೆನ್ರಿಗೆ ದೊರೆಯಬೇಕೆಂದೂ ನಿರ್ಣಯವಾಯ್ತು.

ಸ್ಟೀಫನನ ಆಳ್ಕೆಯಲ್ಲಿ ರಾಜ್ಯದಲ್ಲಿ ಬಹು ಅವ್ಯವಸ್ಥೆಯಾಗಿತ್ತು. ಬೇರೆ ಬೇರೆ ಸ್ಥಳಗಳ ಸರದಾರರಲ್ಲಿ ಪರಸ್ಪರ ಕಲಹಗಳು ಹುಟ್ಟಿದ್ದುವು. ಕೆಲವರು ತಮ್ಮ ಕೋಟೆಗಳನ್ನು ಸರಿಪಡಿಸಿ ಸೈನ್ಯಗಳನ್ನಿಟ್ಟುಕೊಂಡರು, ಮತ್ತು ಕೆಲವರಂತು ರಾಜನ ಅಪ್ಪಣೆಯಿಲ್ಲದೆ ಹೊಸ ಕೋಟೆಗಳನ್ನು ಕಟ್ಟಿಸಿದರು. ಸರದಾರರೆಲ್ಲರು ತಮ್ಮ ರೈತರನ್ನು ಪರಿಪರಿಯಾಗಿ ಪೀಡಿಸುತ್ತಿದ್ದರು. ೧೧೫೪ರಲ್ಲಿ ಸ್ಟೀಫನನು ಮರಣ ಹೊಂದಿದನು. ಆಗ ೧ನೆಯ ಹೆನ್ರಿಯ ಮೊಮ್ಮಗನಾದ ಫ್ರಾನ್ಸಿನಲ್ಲಿಯ ಆಂಜೊ ವಂಶದ ಹೆನ್ರಿ ೨ನೆಯ ಹೆನ್ರಿ ಎಂಬ ಹೆಸರನ್ನು ಧರಿಸಿ ಇಂಗ್ಲಂಡಿನ ರಾಜನಾದನು.

## ೬. ಆಂಜೊ, ಲ್ಯಾಂಕೆಸ್ಟರ ಮತ್ತು ಯೊರ್ಕ ವಂಶಗಳು
(೧೧೫೪—೧೪೮೫)

*ಆಂಜೊ ವಂಶವು —ಸ್ಟೀಫನನು ಮರಣಹೊಂದಿದ ಬಳಿಕ ಫ್ರಾನ್ಸಿನಲ್ಲಿಯ ಆಂಜೊ ವಂಶವು ಇಂಗ್ಲಂಡಿನಲ್ಲಿ ರಾಜ್ಯಮಾಡಲು ಪ್ರಾರಂಭಿಸಿತು. ಈ ವಂಶದವರು ಸುಮಾರು ೨೫೦ ವರ್ಷ ರಾಜ್ಯವಾಳಿದರು (೧೧೫೪—೧೩೯೯). ಇವರ ಸಮಯ ದಲ್ಲಿಯೆ ಪರಸ್ಪರ ಕಲಹಗಳು ಇಲ್ಲದಂತಾಗಿ ಇಂಗ್ಲಂಡು ಒಂದು ರಾಷ್ಟ್ರವಾಯ್ತು. ವೇಲ್ಸ ಪ್ರಾಂತವೂ ಇಂಗ್ಲಂಡಿನ ಒಂದು ಭಾಗವಾಯ್ತು. ಐರ್ಲಂಡ ದೇಶವೂ ಇಂಗ್ಲಂಡಿನ ರಾಜರ ವಶದಲ್ಲಿ ಬಂದಿತು ಮತ್ತು ಅಲ್ಲಿ ಇಂಗ್ಲಂಡಿನ ರಾಜನ ಪ್ರತಿನಿಧಿ (ಲಾರ್ಡ ಡೆಪ್ಯುಟಿ) ರಾಜ್ಯಕಾರಭಾರವನ್ನು ಮಾಡತೊಡಗಿದನು. ಸ್ಕಾಟಲಂಡಿ ನಲ್ಲಿಯ ರಾಜರು ಪ್ರಸಂಗವೊದಗಿದಂತೆ ಇಂಗ್ಲಂಡಿನ ರಾಜನ ಮಾಂಡಲಿಕರಾಗು ತ್ತಿದ್ದರು. ಆದರೆ ಸಂಧಿ ದೊರೆತೊಡನೆ ಅವರು ಮತ್ತೆ ಸ್ವತಂತ್ರರಾಗುತ್ತಿದ್ದರು. ಇಂಗ್ಲಂಡಿನ ರಾಜನಿಗೆ ಫ್ರಾನ್ಸಿನಲ್ಲಿಯ ಅನೇಕ ಜಹಾಗೀರಿಗಳು ಬಂದಿದ್ದುವು. ಕೊನೆಕೊನೆಗೆ ಫ್ರಾನ್ಸಿನ ಅರಸುಮನೆತನದೊಡನೆ ಆಪ್ತತ್ವದ ಸಂಬಂಧವು ಉಂಟಾ ದುದರಿಂದ ಫ್ರಾನ್ಸಿನ ರಾಜಪದಕ್ಕೂ ಇಂಗ್ಲಂಡಿನ ರಾಜರು ತಮ್ಮ ಅಧಿಕಾರವನ್ನು ಹೇಳತೊಡಗಿದರು. ಈ ಕಾರಣದಿಂದ ಫ್ರಾನ್ಸ್ ಮತ್ತು ಇಂಗ್ಲಂಡ್ ಇವುಗಳ ನಡುವೆ ಮಹಾ ಯುದ್ಧವು ಉದ್ಭವಿಸಿತು. ಈ ಯುದ್ಧವು ನೂರು ವರ್ಷಗಳಿಗಿಂತ ಸ್ವಲ್ಪ ಹೆಚ್ಚುಕಾಲದ ವರೆಗೆ ನಡೆಯಿತು. ಇದರಲ್ಲಿ ಫ್ರಾನ್ಸಿನಲ್ಲಿಯ ಕ್ಯಾಲೆ ಎಂಬ ಪಟ್ಟಣದ ಹೊರ್ತಾಗಿ ಉಳಿದೆಲ್ಲ ಪ್ರದೇಶವನ್ನು ಫ್ರಾನ್ಸು ಗೆದ್ದುಕೊಂಡಿತು. ಇಂಗ್ಲಂಡಿನ ರಾಜನಿಗೆ ರಾಜ್ಯಕಾರಭಾರದ ಕಾರ್ಯದಲ್ಲಿ ಆಲೋಚನೆಯನ್ನು ಹೇಳಲು ಮನ್ನೆಯರ ಮಂಡಳವಿತ್ತು. ಇದಲ್ಲದೆ ಇದರ ಜೊತೆಗೆ ಜನರ ಪ್ರತಿನಿಧಿ ಗಳನ್ನು ಕರೆವ ಪ್ರಘಾತವೂ ಈಗ ಪ್ರಾರಂಭವಾಯ್ತು. ಇದುವೆ ಪಾರ್ಲಿಮೆಂಟಿ ನಲ್ಲಿಯ ಕಾಮನ್ಸ ಸಭೆಯ (ಲೋಕ ಸಭೆಯ) ಸ್ಥಾಪನೆಯೆಂದು ಎನ್ನಬಹುದು. ರೋಮದ ಪೋಪನು ಇಂಗ್ಲಂಡಿನ ಧರ್ಮವ್ಯವಸ್ಥೆ ಅಥವಾ ಧರ್ಮಾಧಿಕಾರಿ ಗಳ ನಿಯೋಜನೆ ಈ ವಿಷಯಗಳಲ್ಲಿ ಕೈಹಾಕಬಾರದೆಂದು ಮತ್ತು ಇಂಗ್ಲಂಡಿನಲ್ಲಿಯ ಧಾರ್ಮಿಕ ಮಠಗಳ ಉತ್ಪನ್ನದ ಕೆಲವೊಂದು ಭಾಗವು ಅವನಿಗೆ ಕಳಿಸಲ್ಪಡಬಾರ ದೆಂದು ಇದೇ ಸಮಯದಲ್ಲಿ ಪಾರ್ಲಿಮೆಂಟಿನಲ್ಲಿ ಕಾಯ್ದೆಗಳು ಮಾಡಲ್ಪಟ್ಟುವು.

---

*ಮುಂದಿನ ಪುಟದಲ್ಲಿ ಆಂಜೊ, ಯೊರ್ಕ ಮತ್ತು ಲ್ಯಾಂಕೆಸ್ಟರ ವಂಶಗಳ ವಂಶ ವೃಕ್ಷವು ಕೊಡಲ್ಪಟ್ಟಿದೆ.

೨ನೆಯ ಹೆನ್ರಿ (೧೧೫೪—೧೧೮೯)

ಹೆನ್ರಿ

೧ನೆಯ ರಿಚರ್ಡ (೧೧೮೯—೧೧೯೯)

ಜಾಫ್ರೆ

ಜಾನ್ (೧೧೯೯—೧೨೧೬)

ಆರ್ಥರ (ಬ್ರಿಟನಿನವನು)

೩ನೆಯ ಹೆನ್ರಿ (೧೨೧೬—೧೨೭೨)

ಎಲೆನಾರ (ಸಾಯಮನ್ ಡಿ ಮಾಂಟಫರ್ಡನೊಡನೆ ಲಗ್ನ)

೧ನೆಯ ಎಡವರ್ಡ (೧೨೭೨—೧೩೦೭)

೨ನೆಯ ಎಡವರ್ಡ (೧೩೦೭—೧೩೨೭)

೩ನೆಯ ಎಡವರ್ಡ (೧೩೨೭—೧೩೭೭).

೧ ಎಡವರ್ಡ (ಕೃಷ್ಣಕುಮಾರ)

೨ ಲಾಯೊನೆಲ್

೪ ಥಾಮಸ (ಗ್ಲೂಸ್ಟರದ ಡ್ಯೂಕನು)

೫ ಎಡಮಂಡ (ಡ್ಯೂಕ್ ಆಫ್ ಯಾರ್ಕ)

೩ ಜಾನ್ ಆಫ್ ಗಾಂಟ (ಡ್ಯೂಕ್ ಆಫ್ ಲ್ಯಾಂಕಸ್ಟರ)

೨ನೆಯ ರಿಚರ್ಡ (೧೩೭೭—೧೩೯೯)

ಫಿಲಿಪ್ಪಾ (ಅರ್ಲ ಆಫ್ ಮಾರ್ಚ ಇವನೊಡನೆ ಲಗ್ನವು)

ಯಾರ್ಕ ವಂಶವು

ಲ್ಯಾಂಕಸ್ಟರ ವಂಶವು

ರಾಜರ, ಅರ್ಲ ಆಫ್ ಮಾರ್ಚ

೪ನೆಯ ಹೆನ್ರಿ ೧೩೯೯—೧೪೧೩

ಜಾನ್ ಬ್ಯೂಫರ್ಟ ಅರ್ಲ ಆಫ್ ಸಮರಸೆಟ

ಎಡಮಂಡ

ಆನ್ ಮಾರ್ಟಿಮರ—ಲಗ್ನ—ರಿಚರ್ಡ

೫ನೆಯ ಹೆನ್ರಿ ೧೪೧೩—೧೪೨೨

ರಿಚರ್ಡ (ಡ್ಯೂಕ್ ಆಫ್ ಯಾರ್ಕ)

೬ನೆಯ ಹೆನ್ರಿ ೧೪೨೨—೧೪೬೧

೪ನೆಯ ಎಡವರ್ಡ ೧೪೬೧—೧೪೮೩

ಜಾರ್ಜ, ಡ್ಯೂಕ ಆಫ್ ಕ್ಲ್ಯಾರೆನ್ಸ

೩ನೆಯ ರಿಚರ್ಡ ೧೪೮೩—೧೪೮೫

ಮಾರ್ಗರೆಟ ಬ್ಯೂಫರ್ಟ (ಎಡಮಂಡ ಟ್ಯೂಡರನೊಡನೆ ಲಗ್ನವು)

ಎಡವರ್ಡ, ಅರ್ಲ ಆಫ್ ವಾರವಿಕ್

ಲಗ್ನ

೫ನೆಯ ಎಡವರ್ಡ ೧೪೮೩

ರಿಚರ್ಡ, ಡ್ಯೂಕ್ ಆಫ್ ಯಾರ್ಕ

ಎಲಿಝಬೆಥ = = ೭ನೆಯ ಹೆನ್ರಿ ಟ್ಯೂಡರ ೧೪೮೫—೧೫೦೯

೮ನೆಯ ಹೆನ್ರಿ ೧೫೦೯—೧೫೪೭

**೨ನೆಯ ಹೆನ್ರಿ (೧೧೫೪–೧೧೮೯)**—ಸ್ಟೀಫನನ ತರುವಾಯದಲ್ಲಿ ಆಂಜೊ ವಂಶದ ೨ನೆಯ ಹೆನ್ರಿ (೧ನೆಯ ಹೆನ್ರಿಯ ಮೊಮ್ಮಗನು) ಇಂಗ್ಲಂಡಿನ ಅರಸನಾದನು. ಅವನು ಫ್ರಾನ್ಸಿನಲ್ಲಿಯ ಒಂದು ಸರದಾರ ಮನೆತನದವಳಾದ **ಎಲೆನಾರ** ಎಂಬವಳನ್ನು ಲಗ್ನವಾದನು. ಅವನಿಗೆ ತನ್ನ ಅಜ್ಜನಿಂದ ಇಂಗ್ಲಂಡಿನ ರಾಜ್ಯವು ಮತ್ತು ಫ್ರಾನ್ಸಿನಲ್ಲಿಯ ನಾರ್ಮಂಡಿಯ ಜಹಾಗೀರು, ತಂದೆಯಿಂದ ಮತ್ತು ಅತ್ತೆಯ ಮನೆಯಿಂದ ಫ್ರಾನ್ಸಿನಲ್ಲಿಯ ಆಂಜೊ, ಮೇನ, ಟೂರೇನ, ಆಕ್ವಿಟೇನ ಮತ್ತು ಪಾಯಟೂ ಈ ಜಹಾಗೀರುಗಳು ದೊರೆತುವು. ಆದುದರಿಂದ ಯುರೋಪದಲ್ಲಿ ಅವನ ರಾಜ್ಯವೆ ದೊಡ್ಡದಾಗಿತ್ತು. ಹೆನ್ರಿ ರಾಜಪದವನ್ನು ಸ್ವೀಕರಿಸಿದ ಬಳಿಕ ಸ್ಟೀಫನನ ಆಳ್ಕೆಯಲ್ಲಿ ಉಂಟಾಗಿದ್ದ ಅವ್ಯವಸ್ಥೆಯನ್ನು ಹೋಗಿಸಿದನು. ಸರದಾರರು ಅರಸನ ಅಪ್ಪಣೆಯಿಲ್ಲದೆ ಕಟ್ಟಿಸಿದ ಕೋಟೆಗಳನ್ನು ಅವನು ಕೆಡಹಿಸಿದನು. ಎಷ್ಟೋ ಸರದಾರರರು ಸ್ವತಂತ್ರವಾಗಿ ಪರಕೀಯ ಸೈನ್ಯಗಳನ್ನು ಇಟ್ಟುಕೊಂಡಿದ್ದರು. ಅವನ್ನು ಅವನು ತೆಗೆಯಿಸಿದನು.

**ಹೆನ್ರಿಯ ಸುಧಾರಣೆಗಳು**—ಹೆನ್ರಿ ತನ್ನ ರಾಜ್ಯದಲ್ಲಿ ಅನೇಕ ಉಪಯುಕ್ತವಾದ ಸುಧಾರಣೆಗಳನ್ನು ಮಾಡಿದನು. ಈ ಕೆಲಸದಲ್ಲಿ ಅವನಿಗೆ ವಿದ್ವಾಂಸನೂ ಕುಶಾಗ್ರಬುದ್ಧಿಯೂ ಆದ **ಥಾಮಸ ಬೆಕೆಟ್** ಎಂಬವನ ಸಾಹಾಯ್ಯವು ಬಹಳವಾಯ್ತು. ನ್ಯಾಯದಾನವು ಯೋಗ್ಯವಾಗಬೇಕೆಂದು ಅವನು ನ್ಯಾಯಾಧೀಶರನ್ನು ನಿಯೋಜಿಸಿದನು. ಈ ನ್ಯಾಯಾಧೀಶರು ಬೇರೆ ಬೇರೆ ಶಾಯರಗಳಿಗೆ (ಜಿಲ್ಲೆಗಳಿಗೆ) ಹೋಗಿ ನ್ಯಾಯವನ್ನು ಕೊಡುವ ಕೆಲಸವನ್ನು ಮಾಡುತ್ತಿದ್ದರು. ಆದುದರಿಂದ ಅವರು **ತಿರುಗುವ ನ್ಯಾಯಾಧೀಶರೆಂದು** ಕರೆಯಲ್ಪಡುತ್ತಿದ್ದರು. ಈ ಯೋಜನೆಯಿಂದ ಜನರ ವೇಳೆಯೂ ವೆಚ್ಚವೂ ಉಳಿಯುತ್ತಿತ್ತು. ಜ್ಯೂರಿಯ (ಪಂಚರ) ಮತವನ್ನು ತೆಗೆದುಕೊಂಡು ಈ ನ್ಯಾಯಾಧೀಶರು ಫೌಜದಾರಿ ಮತ್ತು ದಿವಾಣಿ ನ್ಯಾಯಗಳನ್ನು ನಿರ್ಣಯಿಸಬೇಕೆಂದು ರಾಜನ ನಿಯಮವಾಯ್ತು. ವಸೂಲಿಯ ಮತ್ತು ಕರದ ಹಣದ ಲೆಕ್ಕವು ಸರಿಯಾಗಿರಬೇಕೆಂದು **ಎಕ್ಸ್ಚೆಕರ ಕೋರ್ಟಿನ** ಸ್ಥಾಪನೆಯಾಯ್ತು. ರಾಷ್ಟ್ರದ ಮೇಲೆ ಪರಚಕ್ರವು ಬಂದರೆ ರಾಜನಿಗೆ ಸಾಹಾಯ್ಯವೀವುದು ಅವಶ್ಯವೆಂದು ಪ್ರತಿಯೊಬ್ಬ ನಾಗರಿಕನು ತನ್ನಲ್ಲಿ ಶಸ್ತ್ರಗಳನ್ನಿಡಬೇಕೆಂದು ನಿಯಮವು ಮಾಡಲ್ಪಟ್ಟಿತು. ಇದರಿಂದ ಸಾಮಾನ್ಯ ಜನರ ಮಹತ್ವವು ಹೆಚ್ಚಿತು. ಸರಂಜಾಮಿ ಪದ್ಧತಿಯಂತೆ ರಾಜನ ಲಷ್ಕರಿ ನೌಕರಿಯನ್ನು ಮಾಡುವುದರ ಬದಲು ನಿರ್ದಿಷ್ಟವಾದ ಕರವನ್ನು ಕೊಟ್ಟರೆ ಸಾಗಬಹುದೆಂದು ರಾಜನು ಸರದಾರರಿಗೆ ಸೂಚಿಸಿದನು. ಈ ಕರಕ್ಕೆ

**ಸ್ಕ್ಯೂಟೇಜ** (Scutage) ಎಂದು ಹೆಸರು. ಈ ಸೂಚನೆಯಂತೆ ಕೆಲವು ಸರದಾರರು ಕರವನ್ನು ಕೊಡಲಾರಂಭಿಸಿದುದರಿಂದ ರಾಜನಿಗೆ ಹಣವು ದೊರೆಯತೊಡಗಿತು. ಇದರಿಂದ ಅವನಿಗೆ ತನ್ನ ಆಜ್ಞೆಗೆ ಅಂಕಿತವಾದ ಸೈನ್ಯವನ್ನು ಇಡಲು ಶಕ್ಯವಾಯ್ತು. ಮೇಲಿನ ಸುಧಾರಣೆಗಳಂತೆ ಧಾರ್ಮಿಕ ವಿಷಯದಲ್ಲಿಯೂ ಸುಧಾರಣೆಗಳಾಗುವುದು ಅವಶ್ಯವಿದ್ದಿತು; ಈ ಕಾರ್ಯದಲ್ಲಿ ತನಗೆ ತನ್ನ ವಿಶ್ವಾಸದ ಮಂತ್ರಿಯಾದ **ಥಾಮಸ ಬೆಕೆಟನ** ಸಾಹಾಯ್ಯವು ದೊರೆಯಬಹುದೆಂದು ಹೆನ್ರಿ ಅವನನ್ನು **ಕ್ಯಾಂಟರ್ಬರಿಯ** ಆರ್ಚಬಿಶಪನಾಗಿ ನಿಯೋಜಿಸಿದನು. ಆದರೆ **ಥಾಮಸ ಬೆಕೆಟನು** ಆರ್ಚಬಿಶಪನಾದ ಬಳಿಕ ಯಾವುದರಿಂದ ಧರ್ಮಾಧಿಕಾರಿಗಳ ಅಧಿಕಾರವೂ ಮಹತ್ವವೂ ಕಡಿಮೆಯಾಗಬಹುದು ಅಂತಹ ಮಾತನ್ನು ಮಾಡಲು ಒಪ್ಪಲಿಲ್ಲ. ಆದರಿಂದ ಅವರಿಬ್ಬರಲ್ಲಿ ಮನಸ್ತಾಪವು ಹುಟ್ಟಿತು. ಈ ಕಾಲದಲ್ಲಿ ಧಾರ್ಮಿಕ ವಿಷಯದಲ್ಲಿ ತೊಡಗಿದ ಜನರಿಂದ ಅಪರಾಧವೇನಾದರೂ ಆದರೆ ಅದರ ವಿಚಾರಣೆಯನ್ನು ಧರ್ಮಾಧಿಕಾರಿಗಳೇ ಮಾಡುತ್ತಿದ್ದರು. ಈ ಆರೋಪಿಗಳ ಮೇಲೆ ಕೊಲೆಯ ಆರೋಪವು ಸಿದ್ಧವಾದರೂ ಅವರಿಗೆ ಮರಣಶಿಕ್ಷೆಯಾಗುತ್ತಿರಲಿಲ್ಲ. ಆದುದರಿಂದ ಧರ್ಮಾಧಿಕಾರಿಗಳ ಈ ಕೋರ್ಟುಗಳನ್ನು ಇಲ್ಲದಂತೆ ಮಾಡಬೇಕೆಂದು ಹೆನ್ರಿ ಬೆಕೆಟನಿಗೆ ಸೂಚಿಸಿದನು. ಆದರೆ ಬೆಕೆಟನಿಗೆ ಈ ಮಾತು ಸರಿದೋರಲಿಲ್ಲವಾದುದರಿಂದ ಹಾಗೆ ಮಾಡಲು ಅವನು ಒಪ್ಪಲಿಲ್ಲ. ಇದರಿಂದ ಅವರಿಬ್ಬರಲ್ಲಿ ಈ ಮಾತಿನ ವಿಷಯದಲ್ಲಿ ಬಹು ದಿವಸಗಳ ವರೆಗೆ ಕಲಹವು ನಡೆಯಿತು. ಒಂದು ದಿನ ಹೆನ್ರಿ ಕೋಪದ ಆವೇಶದಲ್ಲಿ, "ಈ ಧರ್ಮಾಧಿಕಾರಿಯ ಕಾಟದಿಂದ ನನ್ನನ್ನು ಮುಕ್ತಗೊಳಿಸುವರಾರೂ ಇಲ್ಲವೆ?" ಎಂದು ನುಡಿದನು. ಹೆನ್ರಿಯ ಈ ಉದ್ಗಾರವನ್ನು ಕೇಳಿ ಆತನ ನಾಲ್ವರು ಸರದಾರರು ಕ್ರೂರ ರೀತಿಯಿಂದ ಬೆಕೆಟನ ಕೊಲೆಯನ್ನು ಮಾಡಿದರು. ಇದರಿಂದ ಹೆನ್ರಿಯ ವಿಷಯದಲ್ಲಿ ಜನರು ಅಸಂತುಷ್ಟರಾದರು. ಆಗ ಹೆನ್ರಿ ಆದ ಮಾತಿಗೋಸುಗ ಪಶ್ಚಾತ್ತಾಪಪೂರ್ವಕವಾಗಿ ಧರ್ಮಾಧಿಕಾರಿಗಳ ಕ್ಷಮೆಯನ್ನು ಬೇಡಿದುದಲ್ಲದೆ ಬೆಕೆಟನ ಗೋರಿಯ ಇದಿರಲ್ಲಿ ಧರ್ಮಾಧಿಕಾರಿಗಳಿಂದ ಬಾರಿನಿಂದ ಹೊಡೆಯಿಸಿಕೊಂಡನು.

ಇವನ ಆಳ್ಕೆಯಲ್ಲಿ ೧೧೭೨ರಲ್ಲಿ ಐರ್ಲಂಡ್ ದೇಶವು ಇಂಗ್ಲಿಶ ರಾಜನ ವಶದಲ್ಲಿ ಬಂದಿತು. ಆಗ ಎಷ್ಟೊ ಇಂಗ್ಲಿಶ್ ಸರದಾರರು ಅಲ್ಲಿ ಹೋಗಿ ವಸಾಹತನ್ನು ಮಾಡಿದರು.

ಹೆನ್ರಿಯ ಹೆಂಡತಿಯಾದ ಎಲೆನಾರ ಮತ್ತು ಅವನ ಕೆಲವು ಮಕ್ಕಳು ಅವನ

ವಿರುದ್ಧವಾಗಿ ಬಂಡುಮಾಡಿದರು. ಆದುದರಿಂದ ಅವನ ಕೊನೆಯ ದಿವಸಗಳು ಕಷ್ಟದಲ್ಲಿ ಹೋದುವು. ಸ್ಕಾಟಲಂಡಿನ ಅರಸನಾದ ವಿಲಿಯಮನು ಅವನ ಮಕ್ಕಳಿಗೆ ನೆರವಾದನಾದುದರಿಂದ ಅವನು ಆತನನ್ನು ಸೆರೆಹಿಡಿದನು. ಆಗ ಆತನೂ ಇಂಗ್ಲಂಡಿನ ರಾಜನ ಮಾಂಡಲಿಕನಾದನು. ೨ನೆಯ ಹೆನ್ರಿಗೆ ಹೆನ್ರಿ, ರಿಚರ್ಡ, ಜಾಫ್ರೆ ಮತ್ತು ಜಾನ್ ಎಂಬ ನಾಲ್ವರು ಮಕ್ಕಳಿದ್ದರು. ಅವರಲ್ಲಿ ಹೆನ್ರಿ ಮತ್ತು ಜಾಫ್ರೆ ಇವರು ತಂದೆಯ ಮೊದಲೇ ತೀರಿದ್ದರು. ೨ನೆಯ ಹೆನ್ರಿ ೧೧೮೯ರಲ್ಲಿ ಮರಣಹೊಂದಿದನು.

## ೧ನೆಯ ರಿಚರ್ಡನು (೧೧೮೯—೧೧೯೯)

ಹೆನ್ರಿಯ ತರುವಾಯದಲ್ಲಿ ಅವನ ಮಗನಾದ ರಿಚರ್ಡನು ಇಂಗ್ಲಂಡಿನ ರಾಜನಾದನು. ಅವನು ಬಲಾಢ್ಯನೂ ಯುದ್ಧನಿಪುಣನೂ ಆಗಿದ್ದನು. ಅವನು ತನ್ನ ಆಳ್ಕೆಯ ಅನೇಕ ವರ್ಷಗಳನ್ನು ಏಶಿಯಾಖಂಡದ ಪಾಲೆಸ್ಟಾಯಿನ ಎಂಬಲ್ಲಿ ಕ್ರೈಸ್ತರಿಗೂ ಮುಸಲ್ಮಾನರಿಗೂ ನಡೆದ ಧರ್ಮಯುದ್ಧಗಳಲ್ಲಿ (ಕ್ರೂಸೇಡ) ಕಳೆದನು. ಈ ಯುದ್ಧಗಳಿಗೆ ಬೇಕಾದ ಹಣಕ್ಕೋಸುಗ ಅವನು ಜನರ ಮೇಲೆ ಅಸಹ್ಯವಾದ ಕರಗಳನ್ನು ಕೂಡಿಸಿದನು, ಮತ್ತು ತನ್ನ ವಶದಲ್ಲಿಯ ಜಹಾಗೀರುಗಳನ್ನೂ ಭೂಮಿಗಳನ್ನೂ ಮಾರಿದನು. ರಿಚರ್ಡನು ೧೧೯೯ರಲ್ಲಿ ಮರಣಹೊಂದಿದನು.

ಧರ್ಮಯುದ್ಧಗಳು (ಕ್ರೂಸೇಡ)—ಪಾಲೆಸ್ಟಾಯಿನ ಪ್ರಾಂತದಲ್ಲಿಯ ಜೆರೂಸಲೇಮು ಎಂಬ ಪಟ್ಟಣವು ಕ್ರೈಸ್ತಧರ್ಮದವರ ಪವಿತ್ರಸ್ಥಳವಾಗಿರುವುದು. ಈ ಸ್ಥಳದಲ್ಲಿ ಯೇಸು ಕ್ರಿಸ್ತನು ತನ್ನ ಧರ್ಮವನ್ನು ಉಪದೇಶಿಸಿದನು. ಮತ್ತು ಇಲ್ಲಿಯೆ ಅವನ ಗೋರಿಯಿರುವುದು. ಅದರಿಂದ ಅನೇಕ ಭಾವಿಕ ಕ್ರೈಸ್ತರು ಅಲ್ಲಿಗೆ ಯಾತ್ರೆಗೆಂದು ಹೋಗುತ್ತಿದ್ದರು. ಇ. ಸ. ೧೦೭೬ರಲ್ಲಿ ಇಸ್ಲಾಮ ಧರ್ಮದ ತುರ್ಕ ಜನರು ಈ ಪ್ರಾಂತವನ್ನು ಗೆದ್ದು ತೆಗೆದುಕೊಂಡರು. ಆ ಬಳಿಕ ಅಲ್ಲಿಗೆ ಯಾತ್ರೆಗೋಸುಗ ಹೋಗುವ ಕ್ರೈಸ್ತರಿಗೆ ತುರ್ಕರಿಂದ ತೊಂದರೆಯಾಗತೊಡಗಿತು. ಆದುದರಿಂದ ಪೀಟರನೆಂಬ ಕ್ರೈಸ್ತ ಸಾಧು ಈ ಪವಿತ್ರ ಭೂಮಿಯನ್ನು ಕ್ರೈಸ್ತರು ತಮ್ಮ ವಶದಲ್ಲಿ ತೆಗೆದುಕೊಂಡು ಕ್ರೈಸ್ತರಿಗಾಗುವ ಪೀಡೆಯನ್ನು ತಪ್ಪಿಸಬೇಕೆಂದು ಯುರೋಪದಲ್ಲಿಯ ಕ್ರೈಸ್ತಧರ್ಮದ ದೇಶಗಳಿಗೆ ಹೋಗಿ ಬೋಧಿಸಿದನು. ಅದರಿಂದ ಯುರೋಪದಲ್ಲಿಯ ಬೇರೆ ಬೇರೆ ರಾಷ್ಟ್ರಗಳ ರಾಜರೂ, ಸರದಾರರೂ, ಸೈನಿಕರೂ ಇತರ ಜನರೂ ಯುದ್ಧಕ್ಕೋಸುಗ ಸಿದ್ಧರಾದರು. ಯೇಸು ಕ್ರಿಸ್ತನ ಚಿಹ್ನವೆಂದು

ಕ್ರಾಸಿನ ಧ್ವಜವನ್ನು ಕ್ರೈಸ್ತರು ತಮ್ಮ ಧ್ವಜವಾಗಿ ಮಾಡಿದುದರಿಂದ ಈ ಧರ್ಮ ಯುದ್ಧಕ್ಕೆ **ಕ್ರೂಸೇಡ** ಎಂದು ಹೆಸರು ಬಂದಿತು. ಈ ಧರ್ಮಯುದ್ಧವು ೨ನೆಯ ವಿಲಿಯಮನ ಆಳ್ಕೆಯಲ್ಲಿ ೧೦೯೬ರಲ್ಲಿ ಪ್ರಾರಂಭವಾಯ್ತು. ಆ ಬಳಿಕ ಮುಂದೆ ಎರಡು ನೂರು ವರ್ಷಗಳ ಅವಧಿಯಲ್ಲಿ ಒಟ್ಟು **ಏಳು ಧರ್ಮಯುದ್ಧ ಗಳಾದುವು.** ಆದರೆ ಪಾಲೆಸ್ಟಾಯಿನ ಪ್ರಾಂತವನ್ನು ಗೆದ್ದುಕೊಳ್ಳಲು ಕ್ರೈಸ್ತರಿಗೆ ಶಕ್ಯವಾಗಲಿಲ್ಲ. ಇಂಗ್ಲಂಡಿನ ರಾಜವಂಶದವರಲ್ಲಿ ೧ನೆಯ ವಿಲಿಯಮನ ಮಗ ನಾದ ರಾಬರ್ಟನು, ೧ನೆಯ ರಿಚರ್ಡನು ಮತ್ತು ೧ನೆಯ ಎಡವರ್ಡನು ಈ ಧರ್ಮಯುದ್ಧದಲ್ಲಿ ಭಾಗವನ್ನು ವಹಿಸಿದರು. ಈ ಧರ್ಮಯುದ್ಧದಿಂದ ಯುರೋ ಪದಲ್ಲಿಯ ಜನರಿಗೆ ಅರಬ ಜನರೊಡನೆ ಸಂಬಂಧವು ಒದಗಿತು. ಅರಬ ಜನರು ವಿದ್ಯೆಯಲ್ಲಿಯೂ ಕಲೆಯಲ್ಲಿಯೂ ಮುಂದುವರಿದವರಾಗಿದ್ದರು. ಅವರ ಸಂಬಂಧ ದಿಂದ ಯುರೋಪಿಯನರಲ್ಲಿ ಜ್ಞಾನವು ಬೆಳೆಯಲು ಆಸ್ಪದವಾಯ್ತು. ಯುರೋಪ್ ಮತ್ತು ಪೌರ್ವಾತ್ಯ ದೇಶಗಳ ನಡುವಿನ ವ್ಯಾಪಾರಕ್ಕೂ ಬಹುಮಟ್ಟಿಗೆ ಉತ್ತೇ ಜನವು ದೊರಕಿತು.

**ಯುನಿಯನ್ ಜ್ಯಾಕ್** — ಈ ಧರ್ಮಯುದ್ಧಕ್ಕೋಸುಗ ಇಂಗ್ಲಿಶ್ ಸೈನಿಕರು ಪಾಲೆಸ್ಟಾಯಿನಿಗೆ ಹೋದಾಗ ಅಲ್ಲಿ ಅವರು ನಾಲ್ಕನೆಯ ಶತಕದಲ್ಲಿ ಇದ್ದ **ಸೇಂಟ ಜಾರ್ಜ** ಎಂಬ ಸಾಧುವಿನ ವೃತ್ತಾಂತವನ್ನು ಕೇಳಿದ್ದರು. ಈ ಸಾಧು ಕ್ರೈಸ್ತ ಧರ್ಮದ ಪ್ರಸಾರಕ್ಕೋಸುಗ ಮಹತ್ವದ ಕೆಲಸವನ್ನು ಮಾಡಿದ್ದನು. ಅವನ ಸ್ಮೃತಿ ಚಿರಕಾಲವುಳಿಯಬೇಕೆಂದು **೧ನೆಯ ರಿಚರ್ಡ** ರಾಜನು **ಬಿಳಿಯ** ಭೂಮಿ ಕೆಯ ಮೇಲೆ **ಕೆಂಪು ಕ್ರಾಸು** ಇದ್ದ ಧ್ವಜವನ್ನು ತನ್ನ ಧ್ವಜವಾಗಿ ಮಾಡಿ ಕೊಂಡನು. ಸ್ಕಾಟಲಂಡಿನ ಅರಸನಾದ ಜೇಮ್ಸನು ೧೬೦೩ರಲ್ಲಿ ಇಂಗ್ಲಂಡಿನ ಅರಸನಾದ ಬಳಿಕ ಸ್ಕಾಟಲಂಡಿನ 'ಸೇಂಟ ಆಂಡ್ರ್ಯೂಜ' ಧ್ವಜದ ಮೇಲಿನ ಚಿಹ್ನ ಗಳು ಅದರ ಮೇಲೆ ಇಡಲ್ಪಟ್ಟುವು. ಇದರಿಂದ ಅದಕ್ಕೆ **ಯುನಿಯನ್ ಜ್ಯಾಕ್** ಎಂದು ಹೆಸರು ಬಂದಿತು. ಇದುವೆ ರಾಷ್ಟ್ರಧ್ವಜವೆಂದು ಮನ್ನಿಸಲ್ಪಡಬೇಕೆಂದು ೧ನೆಯ ಜೇಮ್ಸನು ೧೬೦೬ರಲ್ಲಿ ಪ್ರಕಟನೆಗೊಳಿಸಿದನು. ಐರ್ಲಂಡಿನ ಏಕೀ ಕರಣವಾದ ಬಳಿಕ ೧೮೦೧ರಲ್ಲಿ ಐರ್ಲಂಡಿನ 'ಸೇಂಟ ಪ್ಯಾಟ್ರಿಕ್' ಧ್ವಜದ ಮೇಲಿನ ಚಿಹ್ನಗಳು ಈ ಧ್ವಜದ ಮೇಲೆ ಇಡಲ್ಪಟ್ಟುವು.

## ೧ನೆಯ ಜಾನ (೧೧೯೯—೧೨೧೬)

ರಿಚರ್ಡನ ತರುವಾಯದಲ್ಲಿ ಅವನ ಅಣ್ಣನ ಮಗನಾದ ಆರ್ಥರನು (ಜಾಫ್ರೆ ಈತನ ಮಗನು) ಪಟ್ಟಕ್ಕೆ ವಾರಸದಾರನಿದ್ದನು. ಅವನು ೧೨ ವರ್ಷದವನಿದ್ದನು. ರಿಚರ್ಡನ ತಮ್ಮನಾದ ಜಾನನು ಕೆಲವು ಸರದಾರರ ಸಾಹಾಯ್ಯದಿಂದ ಇಂಗ್ಲಂಡಿನ ರಾಜಪದವನ್ನು ದೊರಕಿಸಿ ನಾರ್ಮಂಡಿಗೆ ಹೋಗಿ ಆರ್ಥರನನ್ನು ಸೆರೆಹಿಡಿದನು. ಮುಂದೆ ಸೆರೆಯಲ್ಲಿಯೇ ಆರ್ಥರನ ಕೊಲೆಯಾಯಿತು. ಇದರಲ್ಲಿ ಜಾನನ ಅಂಗವಿರಬಹುದೆಂದು ಊಹಿಸಿ ಫ್ರಾನ್ಸಿನ ರಾಜನು ಜಾನನ ವಶದಲ್ಲಿದ್ದ ನಾರ್ಮಂಡಿಯ ಜಹಾಗೀರನ್ನು ಜಪ್ತಮಾಡಿದನು (೧೨೦೪). ಅದಕ್ಕೋಸುಗ ಜಾನನಿಗೆ ಯುದ್ಧಮಾಡಬೇಕಾಯಿತು. ಯುದ್ಧಕ್ಕೆ ಬೇಕಾಗುವ ಹಣವನ್ನು ಜಾನನು ಇಂಗ್ಲಂಡಿನಲ್ಲಿಯ ಮನ್ನೆಯರು (Lords), ಧರ್ಮಾಧಿಕಾರಿಗಳು, ವ್ಯಾಪಾರಿಗಳು ಇವರ ಮೇಲೆ ಭಾರವಾದ ಕರಗಳನ್ನು ಹೇರಿ ಕೂಡಿಸಿದನು. ಧರ್ಮಾಧಿಕಾರಿಗಳ ಸ್ಥಳಗಳು ಬರಿಯವಾದರೆ ಅವುಗಳಿಗೆ ಹೊಸಬರನ್ನು ಬೇಗನೆ ನಿಯೋಜಿಸದೆ ಅವುಗಳ ಉತ್ಪನ್ನವನ್ನು ತಾನೇ ತೆಗೆದುಕೊಳ್ಳುತ್ತಿದ್ದನು. ಇವನು ಕೇವಲ ಸಂಶಯದಿಂದ ಜನರನ್ನು ಸೆರೆಯಲ್ಲಿಡುತ್ತಿದ್ದನು. ಆದುದರಿಂದ ಎಲ್ಲರಿಗೂ ಅವನ ಆಳ್ಕೆಯಿಂದ ಉಪದ್ರವವಾಗತೊಡಗಿತು. ಈ ಸಮಯದಲ್ಲಿ ಕ್ಯಾಂಟರ್ಬರಿಯ ಆರ್ಚಬಿಶಪನ ಸ್ಥಳವು ಬರಿದಾಯಿತು. ಆಗ ಆ ಸ್ಥಳಕ್ಕೆ ಯಾರನ್ನು ನಿಯೋಜಿಸಬೇಕೆಂಬುದನ್ನು ಕುರಿರು ಧರ್ಮಾಧಿಕಾರಿಗಳು ಸಭೆಯನ್ನು ನೆರೆಯಿಸಿದರು. ಆದರೆ ಈ ಸಭೆಯ ಮತವು ಜಾನನಿಗೆ ಸಮ್ಮತವಾಗಲಿಲ್ಲ. ಆದುದರಿಂದ ಈ ಪ್ರಶ್ನೆಯನ್ನು ಕುರಿತು ಪೋಪನ ಆಲೋಚನೆಯನ್ನು ಕೇಳಬೇಕೆಂದು ಗೊತ್ತಾಯಿತು. ೩ನೆಯ ಇನೋಸೆಂಟ ಎಂಬ ಮಹತ್ವಾಕಾಂಕ್ಷಿಯಾದ ಬಿಶಪನು ಈ ಕಾಲದಲ್ಲಿ ಪೋಪನಾಗಿದ್ದನು. ಅವನು ತನಗೆ ಸೂಚಿಸಲ್ಪಟ್ಟ ಜನರಲ್ಲಿ ಯಾರನ್ನೂ ನಿಯೋಜಿಸದೆ ಇಟಲಿಯಲ್ಲಿ ವಾಸಿಸುತ್ತಿದ್ದ ಸ್ಟೀಫನ ಲ್ಯಾಂಗ್ಟನ್ ಎಂಬ ವಿದ್ವಾಂಸನೂ, ಕುಶಾಗ್ರಬುದ್ಧಿಯವನೂ ಆದ ಇಂಗ್ಲಿಶ್ ಮನುಷ್ಯನನ್ನು ಈ ಸ್ಥಳಕ್ಕೆ ನಿಯೋಜಿಸಿದನು. ಆದರೆ ಜಾನನ ಮನಸ್ಸಿಗೆ ಇದು ಬರಲಿಲ್ಲ. ಅವನು ಸ್ಟೀಫನ ಲ್ಯಾಂಗ್ಟನನನ್ನು ಆರ್ಚಬಿಶಪನ ಸ್ಥಳಕ್ಕೆ ನಿಯೋಜಿಸಲು ಇಷ್ಟಪಡಲಿಲ್ಲ. ಆದುದರಿಂದ ಪೋಪ ಮತ್ತು ಜಾನ್ ಇವರಲ್ಲಿ ಕಲಹವು ಹುಟ್ಟಿತು. ಜಾನನನ್ನು ಒತ್ತಾಯಪಡಿಸಲು ಪೋಪನು ಇಂಗ್ಲಂಡಿನಲ್ಲಿ ಧಾರ್ಮಿಕ ವಿಧಿಗಳನ್ನು ಮಾಡಿಸಲಾಗದೆಂದು ಧರ್ಮಾಧಿಕಾರಿಗಳಿಗೆ ಆಜ್ಞೆಯಿತ್ತನು. ಅದರಿಂದ ಕ್ರೈಸ್ತಧರ್ಮದ



ಜಾನನು ಮ್ಯಾಗ್ನಾ ಚಾರ್ಟನ ಮೇಲೆ ಸಹಿ ಮಾಡುತ್ತಿರುವನು

ದೀಕ್ಷೆಯನ್ನು ಕೊಡುವ ವಿಧಿ, ಪುರಾಣ, ಪ್ರಾರ್ಥನೆ, ಲಗ್ನಸಂಸ್ಕಾರ, ಪ್ರೇತ ಸಂಸ್ಕಾರ ಮೊದಲಾದ ಧರ್ಮಕಾರ್ಯಗಳು ನಡೆಯದಂತಾದುವು. ಇದಲ್ಲದೆ ಪೋಪನು ಜಾನನನ್ನು ಧರ್ಮಬಹಿಷ್ಕೃತನಾಗಿ ಮಾಡಿದನು. ಆದರೂ ಜಾನನು ಪೋಪನ ಮಾತನ್ನು ನಡೆಯಿಸಲು ಸಮ್ಮತಿಸಲಿಲ್ಲ. ಇದರಿಂದ ಪೋಪನು ಕೋಪಿಸಿಕೊಂಡು ಧರ್ಮಭ್ರಷ್ಟನಾದ ಜಾನನು ಪದಚ್ಯುತನಾಗಿ ಮಾಡಲ್ಪಟ್ಟಿರುವನೆಂದು ಪ್ರಕಟಿಸಿ ಜಾನನಿಂದ ಇಂಗ್ಲಂಡಿನ ರಾಜ್ಯವನ್ನು ತೆಗೆದುಕೊಳ್ಳಲು ಫ್ರಾನ್ಸಿನ ರಾಜನಿಗೆ ಸೂಚಿಸಿದನು. ಈ ಸೂಚನೆಯಂತೆ ಫ್ರಾನ್ಸಿನ ರಾಜನು ಇಂಗ್ಲಂಡಿಗೆ ದಾಳಿಯಿಡಲು ಸಿದ್ಧತೆಯನ್ನು ಮಾಡಲಾರಂಭಿಸಿದನು. ಇದನ್ನು ಕೇಳಿದೊಡನೆ ಜಾನನು ಹೆದರಿ ಪೋಪನಿಗೆ ಶರಣು ಹೋದನು.

ಜಾನನು ಆಗ ಇಂಗ್ಲಂಡಿನಲ್ಲಿಯ ಪೋಪನ ಪ್ರತಿನಿಧಿಗಳ ಮುಂದೆ ತಾನು ಪೋಪನ ದಾಸನಿರುವೆನೆಂದು ಸಾರ್ವಜನಿಕವಾಗಿ ಒಪ್ಪಿಕೊಂಡನು (೧೨೦೮). ಕೊನೆಗೆ ಸ್ಟೀಫನ್ ಲ್ಯಾಂಗ್ಟನನು ಕ್ಯಾಂಟರ್ಬರಿಯ ಆರ್ಚಬಿಶಪನಾದನು. ಇದಾದ ಬಳಿಕ ಜಾನನು ಫ್ರಾನ್ಸಿನಲ್ಲಿಯ ತನ್ನ ಹೋದ ಪ್ರದೇಶವನ್ನು ತಿರುಗಿ ಪಡೆಯಬೇಕೆಂದು ಫ್ರಾನ್ಸಿಗೆ ಹೋದನು. ಅಲ್ಲಿಯ ಯುದ್ಧಕ್ಕೋಸುಗ ಅವನು ಅನ್ಯಾಯದಿಂದಲೂ ಜುಲುಮೆಯಿಂದಲೂ ಹಣವನ್ನು ಕೂಡಿಸತೊಡಗಿದನು. ಜಾನನ ಅನ್ಯಾಯದ ಮತ್ತು ಒತ್ತಾಯದ ನೀತಿಗೆ ಬೇಸತ್ತು ಇಂಗ್ಲಂಡಿನಲ್ಲಿಯ ಮನ್ನೆಯರು, ಧರ್ಮಾಧಿಕಾರಿಗಳು ಮತ್ತು ಸಾಮಾನ್ಯ ಜನರು ಒಂದಾದರು. ಅವರು ಸ್ಟೀಫನ್ ಲ್ಯಾಂಗ್ಟನನ ನೇತೃತ್ವದಲ್ಲಿ ಮೊದಲಿನಿಂದ ತಮಗಿದ್ದ ಹಕ್ಕುಗಳ ಒಂದು ಸನದನ್ನು ಸಿದ್ಧಗೊಳಿಸಿ ಜಾನನು ತಿರುಗಿ ಇಂಗ್ಲಂಡಿಗೆ ಬಂದ ಬಳಿಕ ಅವನಿಂದ ಅದರ ಮೇಲೆ ಸಹಿಯನ್ನು ಮಾಡಿಸಿದರು (೧೨೧೫).

**ಮ್ಯಾಗ್ನಾ ಚಾರ್ಟರ್** (ದೊಡ್ಡ ಸನದು ೧೨೧೫)– ಈ ಸನದಿಗೆ **ಮ್ಯಾಗ್ನಾ ಚಾರ್ಟರ್** (ದೊಡ್ಡ ಸನದು) ಎಂದು ಹೆಸರು. ಈ ಸನದಿನಲ್ಲಿಯ ಇಂಗ್ಲಿಶ್ ಜನರ ಹಕ್ಕುಗಳಿಗೆ ಇಂಗ್ಲಂಡಿನ ರಾಜನು ಸಾರ್ವಜನಿಕವಾಗಿ ತನ್ನ ಮಾನ್ಯತೆಯನ್ನು ಇತ್ತುದುದರಿಂದ ಇದಕ್ಕೆ ಬಹು ಮಹತ್ವವು ಉಂಟಾಗಿರುವುದು. ೬೩ ಕಲಮುಗಳುಳ್ಳ ಈ ಸನದು ಫ್ರೆಂಚ ಭಾಷೆಯಲ್ಲಿ ಬರೆಯಲ್ಪಟ್ಟಿರುವುದು. ಈ ಕಲಮುಗಳಲ್ಲಿ ಮುಂದಿನವು ವಿಶೇಷ ಮಹತ್ವವುಳ್ಳ ಕಲಮುಗಳಾಗಿರುವುವು.

(೧) ರಾಜನು ಮನ್ನೆಯರ ಮಂಡಲದ (Great Council) ಸಮ್ಮತಿ ಇಲ್ಲದೆ ಈ ಮೊದಲೆ ನಿಶ್ಚಿತವಾದ ಸರಂಜಾಮಿ ಕರಕ್ಕಿಂತ ಹೆಚ್ಚಿನ ಕರವನ್ನು ತೆಗೆದುಕೊಳ್ಳಬಾರದು.

(೨) ನ್ಯಾಯಕೋರ್ಟಿನಲ್ಲಿ ಯೋಗ್ಯ ವಿಚಾರಣೆಯಾಗಿ ಆರೋಪವು ನಿಶ್ಚಿತವಾದ ಹೊರತು ಕೇವಲ ಸಂಶಯದಿಂದ ಯಾರನ್ನೂ ಸೆರೆಯಲ್ಲಿ ಇಡಕೂಡದು.

(೩) ಮೊದಲಿನಿಂದ ಪ್ರಚಾರದಲ್ಲಿದ್ದ ಕಾಯದೆಗಳಂತೆ ನ್ಯಾಯದಾನದ ಕಾರ್ಯವು ಆಗಬೇಕು. ನ್ಯಾಯದಾನದ ಕಾರ್ಯದಲ್ಲಿ ಬಡವರು ಸಿರಿವಂತರು ಎಂಬ ಭೇದವು ಇರಬಾರದು.

(೪) ಚರ್ಚಿನಲ್ಲಿ ನಡೆದು ಬಂದ ವ್ಯವಸ್ಥೆಯಲ್ಲಿ ರಾಜನು ಕೈಹಾಕಬಾರದು.

ಜಾನನು ಮ್ಯಾಗ್ನಾ ಚಾರ್ಟದ ಮೇಲೆ ಸಹಿಯನ್ನು ಮಾಡಿದರೂ ಅದರಂತೆ ನಡೆಯಲು ಅವನಿಗೆ ಸ್ವಲ್ಪವೂ ಇಚ್ಛೆಯಿರಲಿಲ್ಲ. ಕೆಲವು ದಿನಗಳಲ್ಲಿಯೇ ಅವನು ಮೊದಲಿನಂತೆ ಅನ್ಯಾಯದಿಂದ ನಡೆಯಲಾರಂಭಿಸಿದನು. ಆಗ ಇಂಗ್ಲಿಶ್ ಜನರು ಅವನನ್ನು ಪದಚ್ಯುತನಾಗಿ ಮಾಡಲು ಫ್ರಾನ್ಸಿನ ಅರಸನಾದ ಲುಯಿಯ ಸಾಹಾಯ್ಯವನ್ನು ಕೇಳಿದರು. ಆದರೆ ಜಾನನು ಮುಂದೆ ಸ್ವಲ್ಪ ದಿನಗಳಲ್ಲಿಯೆ ಸತ್ತುದರಿಂದ ಆ ಮಾತು ಅಷ್ಟಕ್ಕೆ ಉಳಿಯಿತು.

## ೩ನೆಯ ಹೆನ್ರಿ (೧೨೧೬—೧೨೭೨)

ಜಾನನ ತರುವಾಯದಲ್ಲಿ ಅವನ ಮಗನಾದ ೩ನೆಯ ಹೆನ್ರಿ ಇಂಗ್ಲಂಡಿನ ರಾಜನಾದನು. ಆಗ ಇವನು ೯ ವರ್ಷದವನಿದ್ದುದರಿಂದ ಮೊದಲಿನ ೧೬ ವರ್ಷಗಳವರೆಗೆ ಪೆಂಬ್ರೋಕದ ಸರದಾರನು ಮತ್ತು ಹ್ಯೂಬರ್ಟ ಡಿ ಬರ್ಗ ಎಂಬ ಪ್ರಧಾನರೇ ರಾಜ್ಯಕಾರಭಾರವನ್ನು ಸಾಗಿಸಿದರು. ಈ ಪ್ರಧಾನರು ಕರ್ತೃತ್ವಶಾಲಿಗಳಿದ್ದುದರಿಂದ ಎಲ್ಲವೂ ಸುಸೂತ್ರವಾಗಿ ನಡೆಯಿತು. ಆದರೆ ಹೆನ್ರಿ ವಯಸ್ಕನಾದ ಬಳಿಕ ಅವನ ತಾಯಿಯೂ ಹೆಂಡತಿಯೂ (ಎಲೆನಾರ್) ಫ್ರಾನ್ಸಿನಲ್ಲಿಯ ತಮ್ಮ ಆಪ್ತೇಷ್ಟರಿಗೆ ಇಂಗ್ಲಂಡಿನಲ್ಲಿಯ ಭೂಮಿಗಳನ್ನು ಮತ್ತು ಸರದಾರಿಕೆಯ ವತನಗಳನ್ನು ಕೊಡಲಾರಂಭಿಸಿದರು. ಈ ಮಾತಿನ ಕಡೆಗೆ ಹೆನ್ರಿ ಲಕ್ಷ್ಯವನ್ನು ಕೊಡುತ್ತಿರಲಿಲ್ಲ. ಹೆನ್ರಿಯ ಈ ದೌರ್ಬಲ್ಯವನ್ನು ಕಂಡು ಪೋಪನು ಇಂಗ್ಲಂಡಿನಲ್ಲಿಯ ಧರ್ಮಾಧಿಕಾರಿಗಳ ಸ್ಥಳಗಳಿಗೆ ಪರಕೀಯ ಜನರನ್ನು ನಿಯೋಜಿಸತೊಡಗಿದನು. ಇದಲ್ಲದೆ ಚರ್ಚಿನಲ್ಲಿಯ ಮೊದಲನೆಯ ವರ್ಷದ ಉತ್ಪನ್ನವೆಂದು ಮತ್ತು ಕೆಲವು ಧಾರ್ಮಿಕ ಕರಗಳೆಂದು ಬಹಳ ಹಣವು ರೋಮನಗರಕ್ಕೆ ಪೋಪನ ಕಡೆಗೆ ಹೋಗಲಾರಂಭಿಸಿತು. ಇದೇ ಸಮಯದಲ್ಲಿ ಹೆನ್ರಿ ಫ್ರಾನ್ಸಿನಲ್ಲಿಯ ತನ್ನ ಹೋದ ಪ್ರದೇಶವನ್ನು ತಿರುಗಿ ಪಡೆಯಲು ಮತ್ತು ಸ್ಕಾಟಲಂಡ್ ಮತ್ತು ವೇಲ್ಸ್ ಈ ದೇಶಗಳನ್ನು ಗೆಲ್ಲಲು ಬಹಳವಾಗಿ ಪ್ರಯತ್ನಿಸಿದನು. ಆದರೆ ಅವನಿಗೆ ಯಶವು ಬರಲಿಲ್ಲ. ವೆಚ್ಚವು ಮಾತ್ರ

ಬಹಳವಾಗಿ ಸಾಲವಾಯಿತು. ಆಗ ಅವನು ತನ್ನ ಸ್ವಂತದ ಅಧಿಕಾರದಿಂದ ಜನರ ಮೇಲೆ ಭಾರವಾದ ಕರವನ್ನು ಹೇರಿದನು. ಪರಕೀಯರ ವಿಷಯದಲ್ಲಿ ಅವನಿಗಿದ್ದ ಪಕ್ಷಪಾತವೂ ಮ್ಯಾಗ್ನಾ ಚಾರ್ಟಾ ಸನದಿನ ವಿರುದ್ಧವಾದ ಅವನ ವರ್ತನವೂ ಜನರಿಗೆ ಸೇರಲಿಲ್ಲ. ಮನ್ನೆಯರ ಮಂಡಳದ ಸಮ್ಮತಿಯಿಲ್ಲದೆ ರಾಜನಿಗೆ ಜನರ ಮೇಲೆ ಕರವನ್ನು ಕೂಡಿಸಲು ಅಧಿಕಾರವಿಲ್ಲೆಂಬ ಮಾತನ್ನು ಜನರು ಹೆನ್ರಿಯ ಲಕ್ಷ್ಯಕ್ಕೆ ತಂದರು. ಈ ಕೆಲಸದಲ್ಲಿ **ಸಾಯಮನ್ ಡಿ ಮಾಂಟಫೋರ್ಡ** ಎಂಬ ಸರದಾರನು ನೇತೃತ್ವವನ್ನು ವಹಿಸಿದ್ದನು. ಇವನು ರಾಣಿಯಾದ ಎಲೆನಾರ್ ಇವಳ ಆಪ್ತನು. ಫ್ರಾನ್ಸಿನಿಂದ ಬಂದ ಈ ಸರದಾರನು ಹೆನ್ರಿಯ ತಂಗಿಯನ್ನು ಮದುವೆಯಾಗಿದ್ದನು. ಆದರೆ ಹೆನ್ರಿಯ ಮ್ಯಾಗ್ನಾ ಚಾರ್ಟಾ ಸನದಿನ ವಿರುದ್ಧವಾದ ವರ್ತನವು ಅವನಿಗೆ ಸೇರಲಿಲ್ಲ. ಕೊನೆಗೆ ಮನ್ನೆಯರ ಮಂಡಳವು ಹೆನ್ರಿಯ ರಾಜ್ಯಕಾರಭಾರದ ಮೇಲೆ ಲಕ್ಷ್ಯವನ್ನಿಡಲು ಹದಿನೈದು ಸರದಾರರ ಒಂದು ಮಂಡಳವನ್ನು ನಿರ್ಮಿಸಿತು. ಆದರೆ ಹೆನ್ರಿಯ ವರ್ತನದಲ್ಲಿ ಸುಧಾರಣೆಯಾಗಲಿಲ್ಲ. ಆದುದರಿಂದ ಸಾಯಮನ್ ಡಿ ಮಾಂಟಫೋರ್ಡನು ಲ್ಯುಯಿಸ್ ಎಂಬಲ್ಲಿ ಹೆನ್ರಿಯನ್ನು ಸೋಲಿಸಿ ಅವನನ್ನೂ ರಾಜಪುತ್ರನಾದ ಎಡವರ್ಡನನ್ನೂ ಸೆರೆಯಲ್ಲಿಟ್ಟನು. ಆ ಬಳಿಕ ರಾಜ್ಯಕಾರಭಾರದ ಮತ್ತು ಜನರ ಮೇಲೆ ಕರವನ್ನು ಕೂಡಿಸುವ ವಿಷಯದಲ್ಲಿ ಆಲೋಚನೆ ಮಾಡಲು ಅವನು ಮನ್ನೆಯರ ಮಂಡಳವನ್ನು (The Great Council) ಕರೆದನು, ಮತ್ತು ಇಂಗ್ಲಂಡಿನಲ್ಲಿಯ ಪರಗಣೆಗಳ ಮತ್ತು ಪಟ್ಟಣಗಳ ಪ್ರತಿನಿಧಿಗಳನ್ನೂ ಈ ಸಭೆಗೆ ಕರೆದನು. ಈ ಸಭೆಗೆ **ಪಾರ್ಲಿಮೆಂಟ** ಎಂದರೆ (ವಿಚಾರ ವಿನಿಮಯವನ್ನು ಮಾಡುವ ಸಭೆ) ಎಂಬ ಹೆಸರು ಪ್ರಚಾರದಲ್ಲಿ ಬಂದಿತು. ಈ ಸಮಯದಿಂದ ಮುಂದೆ ಮನ್ನೆಯರೊಡನೆ (Lords) ಪರಗಣೆಗಳ ಮತ್ತು ಪಟ್ಟಣಗಳ ಪ್ರತಿನಿಧಿಗಳು ಸಮಾನತೆಯಿಂದ ಕೂಡತೊಡಗಿದರು, ಮತ್ತು ರಾಷ್ಟ್ರದ ನೀತಿಯ (Policy) ವಿಷಯದಲ್ಲಿ ಕೂಡಿ ಚರ್ಚಿಸತೊಡಗಿದರು. ಆದುದರಿಂದ ಈ ಪಾರ್ಲಿಮೆಂಟ ಸಭೆಗೆ ವಿಶೇಷ ಮಹತ್ವವು ಪ್ರಾಪ್ತವಾಯಿತು. ಸಾಯಮನ್ ಡಿ ಮಾಂಟಫೋರ್ಡನು ಈ ಪ್ರಘಾತವನ್ನು ಪ್ರಾರಂಭಿಸಿದನಾದುದರಿಂದ ಅವನನ್ನು ಪಾರ್ಲಿಮೆಂಟಿನಲ್ಲಿಯ **ಕಾಮನ್ಸ ಸಭೆಯ ಜನಕನೆಂದು** ಕರೆವುದುಂಟು. ಮುಂದೆ ಸರದಾರರಲ್ಲಿ ಒಡಕು ಹುಟ್ಟಿತು. ರಾಜಪುತ್ರ ಎಡ್ವರ್ಡನು ಸರದಾರರ ಒಂದು ಪಕ್ಷವನ್ನು ಕೂಡಿಕೊಂಡು ತನ್ನ ಮತ್ತು ಹೆನ್ರಿಯ ಬಿಡುಗಡೆಯನ್ನು ಮಾಡಿಕೊಂಡನು. ಆ ಬಳಿಕ ಮಾಂಟಫೋರ್ಡನ ಪಕ್ಷದ ಸರದಾರರಿಗೂ ಎಡ್ವರ್ಡನಿಗೂ ಯುದ್ಧವಾಯಿತು. ಅದರಲ್ಲಿ ಮಾಂಟಫೋರ್ಡನು ಕೊಲ್ಲಲ್ಪಟ್ಟನು.

ಆಗ ಇಂಗ್ಲಂಡಿನ ರಾಜ್ಯವು ತಿರುಗಿ ಹೆನ್ರಿಗೆ ಬಂದಿತು. ಅವನು ರಾಜ್ಯವಾಳು ತ್ತಿರುವಾಗ ರಾಜಪುತ್ರ ಎಡ್ವರ್ಡನು ಧರ್ಮಯುದ್ಧಕೋಸುಗ (ಕ್ರೂಸೇಡ) ಪಾಲೆಸ್ಟಾಯಿನಿಗೆ ಹೋದನು. ಅಲ್ಲಿ ಅವನು ಇರುವಾಗಲೇ ಹೆನ್ರಿ ಇಂಗ್ಲಂಡಿ ನಲ್ಲಿ ಮರಣಹೊಂದಿದನು (೧೨೭೨).

೧ನೆಯ ಎಡ್ವರ್ಡನು (೧೨೭೨—೧೩೦೭)

**ವೇಲ್ಸವನ್ನು ಗೆದ್ದುದು**—ಎಡ್ವರ್ಡನು ಪರಾಕ್ರಮಿಯೂ, ಶೂರನೂ, ಮಹ ತ್ವಾಕಾಂಕ್ಷಿಯೂ ಆಗಿದ್ದನು. ವೇಲ್ಸ ಮತ್ತು ಸ್ಕಾಟಲಂಡ ಈ ಎರಡೂ ದೇಶ ಗಳನ್ನು ಗೆಲ್ಲಬೇಕೆಂದು ಅವನಿಗೆ ಇಚ್ಛೆಯಿದ್ದಿತು. ವೇಲ್ಸದ ರಾಜನಾದ **ಲೆವಿಲೀ ನನು** ಎಡ್ವರ್ಡನ ಮಾಂಡಲಿಕನಾಗಲು ಒಪ್ಪಲಿಲ್ಲವೆಂದು ಎಡ್ವರ್ಡನು ಅವನೊ ಡನೆ ಯುದ್ಧವನ್ನು ಆರಂಭಿಸಿದನು. ಈ ಯುದ್ಧದಲ್ಲಿ ಲೆವಿಲೀನನು ಮರಣ ಹೊಂದಿದನು. ಆದರಿಂದ ವೇಲ್ಸ ಪ್ರಾಂತವು ಎಡ್ವರ್ಡನ ವಶದಲ್ಲಿ ಬಂದಿತು. ಈ ಯುದ್ಧದ ಕಾಲದಲ್ಲಿ ಎಡ್ವರ್ಡನೊಡನೆ ಅವನ ಹೆಂಡತಿಯೂ ಇದ್ದಳು. ಅವಳು ವೇಲ್ಸದಲ್ಲಿಯ ಕಾರನಾರವ್ಹಾನ್ ಕೋಟೆಯಲ್ಲಿ ಎಡ್ವರ್ಡನೆಂಬ ಗಂಡುಮಗು ವನ್ನು ಹೆತ್ತಳು (೧೨೮೪). ರಾಜನು ವೇಲ್ಸದಲ್ಲಿಯ ಜನರ ಪ್ರೇಮವನ್ನು ಸಂಪಾ ದಿಸಲು ಅಲ್ಲಿಯ ಜನರಿಗೆ, "ಇಗೋ ನಿಮ್ಮ ರಾಜಪುತ್ರನು. ಇವನು ವೇಲ್ಸದಲ್ಲಿ ಹುಟ್ಟಿದನು. ಇವನಿಗೆ ಇಂಗ್ಲಿಶ್ ಭಾಷೆಯ ಒಂದು ಶಬ್ದವೂ ಬಾರದು" ಎಂದು ನುಡಿದನು. ಅಂದಿನಿಂದ ಇಂಗ್ಲಂಡಿನ ರಾಜನ ಹಿರಿಯ ಮಗನಿಗೆ ವೇಲ್ಸದ ರಾಜಪುತ್ರ (Prince of Wales) ಎಂದು ಹೆಸರು ಬಂದಿರುವುದು.

**ಸ್ಕಾಟಲಂಡಿನೊಡನೆ ಯುದ್ಧವು** (೧೨೯೭—೧೩೩೦)—೧೨೮೬ರಲ್ಲಿ ಸ್ಕಾಟಲಂಡಿನ ಅರಸನಾದ **ಅಲೆಕ್‌ಝಾಂಡರನು** ನಿಪುತ್ರಿಕನಾಗಿ ಮರಣಹೊಂದಿ ದನು. ಆದುದರಿಂದ ರಾಜಪದದ ವಿಷಯದಲ್ಲಿ ಕದನಗಳು ಉದ್ಭವಿಸಿದುವು. ಮುಂದೆ ಬಂದ ವಾರಸದಾರರಲ್ಲಿ **ಜಾನ್ ಬೇಲಿಯಲ್** ಮತ್ತು **ರಾಬರ್ಟ ಬ್ರೂಸ** ಇವರು ಹೆಚ್ಚು ಪ್ರಬಲರಾಗಿದ್ದರು. ಇವರಿಬ್ಬರಲ್ಲಿ ರಾಜಪದದ ಅಧಿ ಕಾರವು ಯಾರಿಗೆ ಹೆಚ್ಚಿರುವುದೆಂಬುದನ್ನು ನಿರ್ಣಯಿಸುವ ಕೆಲಸವು ಸ್ಕಾಟಿಶ್ ಪಾರ್ಲಿಮೆಂಟಿನಿಂದ ಇಂಗ್ಲಂಡಿನ ರಾಜನಾದ ಮೊದಲನೆಯ ಎಡ್ವರ್ಡನಿಗೆ ಒಪ್ಪಿ ಸಲ್ಪಟ್ಟಿತು. ಸ್ಕಾಟಲಂಡಿನ ಮೇಲೆ ತನ್ನ ವರ್ಚಸ್ಸನ್ನು ಕೂಡಿಸಲು ಇದು ಉತ್ತ ಮವಾದ ಸಂಧಿಯೆಂದು ಬಗೆದು ಎಡ್ವರ್ಡನು ತನ್ನ ಮಾಂಡಲಿಕನಾಗಿರಲು ಒಪ್ಪಿದ ಜಾನ್ ಬೇಲಿಯಲನ ಸ್ಕಾಟಲಂಡಿನ ರಾಜಪದಕ್ಕೆ ಯೋಗ್ಯ ವಾರಸದಾರ

ನೆಂದು ನಿರ್ಣಯವಿತ್ತನು (೧೨೯೨). ಆದರೆ ತನಗೆ ರಾಜ್ಯವು ದೊರೆತ ಬಳಿಕ ಬೇಲಿಯಲನು ಸ್ವತಂತ್ರ ರೀತಿಯಿಂದ ನಡೆಯಲಾರಂಭಿಸಿದನು. ಅವನು ಇಂಗ್ಲಂಡಿನ ವಿರುದ್ಧವಾಗಿ ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿಕೊಂಡನು. ಆಗ ಎಡ್ವರ್ಡನು ಸೈನ್ಯವನ್ನು ಕಳುಹಿ ಬೇಲಿಯಲನನ್ನು ಹಿಡಿದು ತರಿಸಿ ಅವನನ್ನು ಮರಣಕ್ಕೆ ಗುರಿಮಾಡಿದನು ಮತ್ತು ಸ್ಕಾಟಲಂಡಿನಲ್ಲಿ ರಾಜ್ಯಾಭಿಷೇಕಕ್ಕೆ ಉಪಯೋಗಿಸಲ್ಪಡುತ್ತಿದ್ದ ಶುಭಸೂಚಕವಾದ ಕಲ್ಲನ್ನು ಇಂಗ್ಲಂಡಿಗೆ ತರಿಸಿ ಅದನ್ನು ಇಂಗ್ಲಂಡಿನ ಸಿಂಹಾಸನದಲ್ಲಿ ಕೂಡಿಸಿದನು. ಆ ಬಳಿಕ ಎಡ್ವರ್ಡನು ಸ್ಕಾಟಲಂಡಿನ ರಾಜ್ಯವ್ಯವಸ್ಥೆಯನ್ನು ನೋಡಲು ಒಬ್ಬ ಅಧಿಕಾರಿಯನ್ನು ನಿಯೋಜಿಸಿದನು. ಆದರೆ ಸ್ಕಾಟಿಶ್ ಜನರು ವಿಲಿಯಮ್ ವಾಲೇಸನ ನೇತೃತ್ವದಲ್ಲಿ ಮತ್ತೆ ಬಂಡನ್ನು ಪ್ರಾರಂಭಿಸಿದರು. ಆದುದರಿಂದ ಎಡ್ವರ್ಡನು ಮತ್ತೆ ಸೈನ್ಯವನ್ನು ಕಳುಹಿ ೧೨೯೮ರಲ್ಲಿ ಆ ಬಂಡನ್ನು ಮುರಿದನು. ಮತ್ತು ವಾಲೇಸನನ್ನು ಮರಣಕ್ಕೆ ಗುರಿಮಾಡಿದನು. ಆದರೂ ಸ್ಕಾಟ್ಲಂಡಿನಲ್ಲಿಯ ಬಂಡಿನ ಪ್ರವೃತ್ತಿ ತಡೆಯಲಿಲ್ಲ. ಸ್ಕಾಟಿಶ್ ಜನರು ೧೨೮೬ರಲ್ಲಿ ಸ್ಕಾಟ್ಲಂಡಿನ ಪಟ್ಟಕ್ಕೆ ತನ್ನ ಹಕ್ಕನ್ನು ಹೇಳುತ್ತಿದ್ದ ಶೂರನೂ ಪರಾಕ್ರಮಿಯೂ ಆದ ರಾಬರ್ಟ ಬ್ರೂಸನನ್ನು ತಮ್ಮ ರಾಜನಾಗಿ ಮಾಡಿದರು (೧೩೦೬). ರಾಬರ್ಟನು ಸ್ಕಾಟಲಂಡಿನಲ್ಲಿಯ ಇಂಗ್ಲಿಶ್ ಅಧಿಕಾರಿಗಳನ್ನು ಹೊರಗೆ ಅಟ್ಟಿದನು. ಆಗ ೧ನೆಯ ಎಡ್ವರ್ಡನು ಸ್ಕಾಟಿಶ್ ಜನರೊಡನೆ ಯುದ್ಧಮಾಡಲು ತಾನೇ ಸೈನ್ಯದೊಡನೆ ಹೊರಟನು. ಆದರೆ ಅವನಿಗೆ ಮಾರ್ಗದಲ್ಲಿ ಮರಣವು ಸಂಭವಿಸಿತು (೧೩೦೭). ಇತ್ತ ರಾಬರ್ಟ ಬ್ರೂಸನು ಸ್ಕಾಟಲಂಡಿನಲ್ಲಿ ಎಲ್ಲವನ್ನೂ ಸರಿಗೊಳಿಸಿ ತನ್ನ ವರ್ಚಸ್ಸನ್ನು ಪ್ರಸ್ಥಾಪಿಸಿದನು. ಅವನ ಬಲವನ್ನು ಮುರಿಯಬೇಕೆಂದು ೨ನೆಯ ಎಡ್ವರ್ಡನು (೧೩೦೭—೧೩೨೭) ಸ್ಕಾಟ್ಲಂಡಿನೊಡನೆ ಮತ್ತೆ ಯುದ್ಧವನ್ನು ಪ್ರಾರಂಭಿಸಿದನು. ಇ. ಸ. ೧೩೧೪ರಲ್ಲಿ ಬ್ಯಾನಾಕ್ ಬರ್ನ ಎಂಬಲ್ಲಿ ಇಂಗ್ಲಿಶ್ ಸೈನ್ಯಕ್ಕೂ ಸ್ಕಾಟಿಶ್ ಸೈನ್ಯಕ್ಕೂ ಯುದ್ಧವಾಯಿತು. ಅದರಲ್ಲಿ ಇಂಗ್ಲಂಡು ಸಂಪೂರ್ಣವಾಗಿ ಸೋತಿತು, ಮತ್ತು ಸ್ಕಾಟಲಂಡು ಸ್ವತಂತ್ರವಾಯಿತು. ರಾಬರ್ಟನು ೨೩ ವರ್ಷ ರಾಜ್ಯವಾಳಿ ಸ್ಕಾಟಲಂಡಿಗೆ ಸಂಪೂರ್ಣ ಸ್ವಾತಂತ್ರ್ಯವು ದೊರೆತ ಬಳಿಕ ೧೩೨೯ರಲ್ಲಿ ಮೃತ್ಯುವಶನಾದನು. ಅವನ ತರುವಾಯದಲ್ಲಿ ಅವನ ಅಲ್ಪವಯಸ್ಕ ಮಗನಾದ ಡೇವಿಡ್ ಮತ್ತು ಬೇಲಿಯಲನ ಮೊಮ್ಮಗನಾದ ಎಡ್ವರ್ಡ ಇವರಿಬ್ಬರಲ್ಲಿ ಸ್ಕಾಟಲಂಡಿನ ಪಟ್ಟದ ವಿಷಯದಲ್ಲಿ ಕಲಹವು ಹುಟ್ಟಿತು. ಇಂಗ್ಲಂಡಿನ ರಾಜನಾದ ೩ನೆಯ ಎಡ್ವರ್ಡನು (೧೩೨೭—೧೩೭೭) ಎಡ್ವರ್ಡ ಬೇಲಿಯಲನಿಗೆ ಸಾಹಾಯ್ಯಮಾಡಿ

ಸ್ಕಾಟಲಂಡಿನಲ್ಲಿ ಕೈಯಿಕ್ಕಲು ಪ್ರಯತ್ನಿಸಿದನು. ಆದರೆ ಫ್ರಾನ್ಸಿಸ ಅರಸನಾದ ೬ನೆಯ ಫಿಲಿಪನು ವಿರುದ್ಧ ಪಕ್ಷಕ್ಕೆ ಸಾಹಾಯ್ಯವಿತ್ತುದರಿಂದ ೩ನೆಯ ಎಡ್ವರ್ಡನ ಇಚ್ಛೆ ಸಫಲವಾಗಲಿಲ್ಲ.

**ಮಾದರಿಯ ಪಾರ್ಲಿಮೆಂಟು** (Model Parliament) (೧೨೯೫)–೧ನೆಯ ಎಡ್ವರ್ಡನಿಗೆ ವೇಲ್ಸ ಮತ್ತು ಸ್ಕಾಟಲಂಡ ದೇಶಗಳೊಡನೆ ಯುದ್ಧವನ್ನು ಮಾಡಬೇಕಾಯಿತು, ಆದುದರಿಂದ ಸೈನ್ಯದ ವೆಚ್ಚವು ಬೆಳೆಯಿತು. ಅದರಿಂದ ಹೊಸ ಕರವನ್ನು ಕೂಡಿಸುವುದೂ, ರಾಜ್ಯಕಾರಭಾರದ ಕೆಲಸದಲ್ಲಿ ಮನ್ನೆಯರ ಮಂಡಳದಂತೆ ಸಾಮಾನ್ಯ ಜನರ ಸಮ್ಮತಿಯನ್ನು ತೆಗೆದುಕೊಳ್ಳುವುದೂ ಅವಶ್ಯವಾಯಿತು. ಆದುದರಿಂದ ಅವನು ಸಾಯಮನ್ ಡಿ ಮಾಂಟಫೋರ್ಡನು ನೆರೆಯಿಸಿದ ಪಾರ್ಲಿಮೆಂಟಿನಂತೆ ಒಂದು ಪಾರ್ಲಿಮೆಂಟನ್ನು ೧೨೯೫ರಲ್ಲಿ ನೆರೆಯಿಸಿದನು. ಈ ಪಾರ್ಲಿಮೆಂಟಿಗೆ ಮನ್ನೆಯರೂ, ದೊಡ್ಡ ದೊಡ್ಡ ಬಿಶಪ್ಪರೂ, ಪ್ರತಿಯೊಂದು ಪರಗಣೆಯಲ್ಲಿಯ ಮತ್ತು ಪ್ರಮುಖ ನಗರಗಳಲ್ಲಿಯ ಇಬ್ಬಿಬ್ಬರು ಪ್ರತಿನಿಧಿಗಳೂ ಬಂದಿದ್ದರು. ಈ ಪಾರ್ಲಿಮೆಂಟ ಸಭೆಗೆ ರಾಷ್ಟ್ರದಲ್ಲಿಯ ವಿವಿಧ ವರ್ಗಗಳ ಜನರು ಬಂದಿದ್ದರಾದುದರಿಂದ ಇದಕ್ಕೆ **ಮಾದರಿಯ ಪಾರ್ಲಿಮೆಂಟು** (Model Parliament) ಎಂದು ಹೆಸರು ಬಂದಿತು. ಆ ಕಾಲದಲ್ಲಿ ಪಾರ್ಲಿಮೆಂಟಿನಲ್ಲಿ ಎರಡು ಭಾಗಗಳಿರಲಿಲ್ಲ. ಎಲ್ಲ ಸಭಾಸದರು ಒಂದೇ ದಿವಾಣಖಾನೆಯಲ್ಲಿ ಕುಳಿತು ಚರ್ಚೆಮಾಡುತ್ತಿದ್ದರು. ಮುಂದೆ ೧೩೩೦ರಲ್ಲಿ ಪಾರ್ಲಿಮೆಂಟ ಸಭೆಯಲ್ಲಿ ಮನ್ನೆಯರ ಸಭೆ (**ಲಾರ್ಡರ ಸಭೆ**) ಮತ್ತು ಸಾಮಾನ್ಯರ ಸಭೆ (**ಕಾಮನ್ಸ ಸಭೆ**) ಎಂದು ಎರಡು ಭಾಗಗಳಾದುವು. ದೊಡ್ಡ ದೊಡ್ಡ ಧರ್ಮಾಧಿಕಾರಿಗಳೂ, ಮನ್ನೆಯರೂ ಈ ಲಾರ್ಡರ ಸಭೆಯ ಸಭಾಸದರಾದರು. ಮತ್ತು ಪರಗಣೆಗಳು ಮತ್ತು ನಗರಗಳ ಪ್ರತಿನಿಧಿಗಳು ಕಾಮನ್ಸ ಸಭೆಯ ಸಭಾಸದರಾದರು.

## ೩ನೆಯ ಎಡ್ವರ್ಡನು (೧೩೨೭–೧೩೭೭)

ಮೊದಲನೆಯ ಎಡ್ವರ್ಡನ ತರುವಾಯದಲ್ಲಿ ಅವನ ಮಗನಾದ ೨ನೆಯ ಎಡ್ವರ್ಡನು ೧೩೦೭–೧೩೨೭ರ ವರೆಗೆ ರಾಜ್ಯವಾಳಿದನು. ೨ನೆಯ ಎಡ್ವರ್ಡನ ತರುವಾಯದಲ್ಲಿ ಅವನ ಮಗನಾದ ೩ನೆಯ ಎಡ್ವರ್ಡನು ಪಟ್ಟಕ್ಕೆ ಬಂದನು. ಇವನು ೧೫ ವರ್ಷದ ಬಾಲಕನಾಗಿದ್ದುದರಿಂದ ಅವನ ತಾಯಿಯಾದ ಇಝಾಬೇಲಾ ಮತ್ತು ಸರದಾರ ಮಾರ್ಟಿಮರ ಇವರು ರಾಜ್ಯಕಾರಭಾರವನ್ನು ಮಾಡುತ್ತಿದ್ದರು. ಆದರೆ ಇವರಿಂದ ರಾಜ್ಯಕಾರಭಾರವು ಸರಿಯಾಗಿ ಸಾಗಲಿಲ್ಲ. ಪ್ರಜೆ

ಗಳಿಗೆ ಇವರಿಂದ ಬಹು ತೊಂದರೆಯಾಯಿತು. ಆದುದರಿಂದ ಎಡ್ವರ್ಡನು ವಯಸ್ಕ ನಾದೊಡನೆ ರಾಜ್ಯಕಾರಭಾರವನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಅವನು ಮಾರ್ಟಿಮರನನ್ನು ಅಪರಾಧಿಯೆಂದು ನಿರ್ಣಯಿಸಿ ಮರಣಕ್ಕೆ ಗುರಿಮಾಡಿದನು, ಮತ್ತು ತಾಯಿಯಾದ ಇಝಾಬೇಲಾ ಇವಳನ್ನು ಸೆರೆಯಲ್ಲಿಟ್ಟನು. ಇವನ ಆಳ್ಕೆ ಯಲ್ಲಿ (೧) ಸ್ಕಾಟಲಂಡಿನ ಮೇಲೆ ವರ್ಚಸ್ಸನ್ನು ಸ್ಥಾಪಿಸಲು ಇಂಗ್ಲಂಡು ಪ್ರಯತ್ನಿ ಸಿತು. (೨) ಫ್ರಾನ್ಸಿನೊಡನೆ ನೂರು ವರ್ಷಗಳ ಯುದ್ಧವು ಆರಂಭವಾಯಿತು. (೩) ಇಂಗ್ಲಂಡಿನ ಧಾರ್ಮಿಕ ವ್ಯವಸ್ಥೆಯಲ್ಲಿ ಪೋಪನು ಕೈಹಾಕಲು ಯತ್ನಿಸಿ ದೊಡನೆ ಅವನಿಗೆ ಪ್ರತಿರೋಧವು ಮಾಡಲ್ಪಟ್ಟಿತು. ಮತ್ತು (೪) ರಾಜನ ಮಂತ್ರಿ ಗಳ ಮೇಲೆ ನಿಯಂತ್ರಣವನ್ನಿಡಲು ಪಾರ್ಲಿಮೆಂಟು ಪ್ರಯತ್ನಿಸಿತು.

**ನೂರು ವರ್ಷಗಳ ಯುದ್ಧವು** (೧೩೩೭—೧೪೫೩)—೩ನೆಯ ಎಡ್ವ ರ್ಡನು ಆಳುತ್ತಿರುವಾಗ ಇಂಗ್ಲಂಡ್ ಮತ್ತು ಫ್ರಾನ್ಸ ಇವುಗಳ ನಡುವೆ ಯುದ್ಧ ವಾರಂಭವಾಯಿತು. ಮುಂದೆ ಒಪ್ಪಂದವಾಗಿ ಆ ಯುದ್ಧವು ಕೆಲವು ವರ್ಷಗಳ ವರೆಗೆ ನಿಂತಿತು, ಆದರೂ ಮನಸ್ತಾಪವು ನಷ್ಟವಾಗಲಿಲ್ಲ. ಮತ್ತೆ ಸಣ್ಣ ಪುಟ್ಟ ಯುದ್ಧಗಳು ನಡೆದುವು. ಹೀಗೆ ೧೦೦ ವರ್ಷಗಳಿಗಿಂತ ಹೆಚ್ಚು ಕಾಲ ಈ ಯುದ್ಧವು ಸಾಗಿತು.

**ಕಾರಣಗಳು**—(೧) ಸ್ಕಾಟಿಶ್ ಜನರಿಗೆ ಇಂಗ್ಲಂಡಿನ ವಿರುದ್ಧವಾಗಿ ಫ್ರಾನ್ಸಿ ಸಿಂದ ಸಾಹಾಯ್ಯವು ದೊರೆಯುತ್ತಿತ್ತು. (೨) ಫ್ಲ್ಯಾಂಡರ್ಸದಲ್ಲಿಯ (ಈಗಿನ ಬೆಲ್ಜಮ್) ಘೇಂಟ, ಮತ್ತು ಬ್ರುಸೆಲ್ಸ ಈ ಪಟ್ಟಣಗಳು ವ್ಯಾಪಾರೋದ್ಯಮಗಳಲ್ಲಿ ಮುಂದುವರಿದಿದ್ದುವು, ಮತ್ತು ಅಲ್ಲಿಯ ಜನರಿಂದ ಇಂಗ್ಲಂಡಿನಲ್ಲಿಯ ಉಣ್ಣೆಗೆ ಬೇಡಿಕೆ ಇದ್ದಿತು. ಈ ಪ್ರಾಂತವನ್ನು ತನ್ನ ವಶದಲ್ಲಿ ತೆಗೆದುಕೊಳ್ಳಲು ಫ್ರಾನ್ಸಿನ ರಾಜನು ಪ್ರಯತ್ನಿಸುತ್ತಿದ್ದನು. (೩) ಫ್ರಾನ್ಸಿನಲ್ಲಿಯ ಗ್ಯಾಸ್ಕನಿ ಮತ್ತು ಗಿನಿ ಈ ಪ್ರಾಂತಗಳು ಇಂಗ್ಲಂಡಿನ ವಶದಲ್ಲಿದ್ದುವು. ನಾರ್ಮಂಡಿಯಂತೆ ಅವನ್ನು ಗೆಲ್ಲ ಬೇಕೆಂದು ಫ್ರಾನ್ಸಿನ ರಾಜನ ಮನೀಷೆಯಿದ್ದಿತು. (೪) ಫ್ರಾನ್ಸಿನ ರಾಜನಾದ ಚಾರ್ಲಸನು ೧೩೨೮ರಲ್ಲಿ ನಿಪುತ್ರಕನಾಗಿ ಮರಣಹೊಂದಿದನು. ೩ನೆಯ ಎಡ್ವ ರ್ಡನು ಅವನ ಸೋದರಳಿಯನಾದುದರಿಂದ ಫ್ರಾನ್ಸಿನ ಪಟ್ಟವು ತನಗೆ ದೊರೆಯ ಬೇಕೆಂದು ಹೇಳತೊಡಗಿದನು. ಫ್ರಾನ್ಸಿನಲ್ಲಿಯ ಕಾಯದೆಯಂತೆ ಹೆಣ್ಣುಮಕ್ಕಳ ವಂಶದವರಿಗೆ ಪಟ್ಟವು ದೊರೆಯಕೂಡದೆಂದು ಇದ್ದುದರಿಂದ ಫ್ರೆಂಚ ಸರದಾರರು ಎಡ್ವರ್ಡನಿಗೆ ಪಟ್ಟವನ್ನು ಕೊಡದೆ ಚಾರ್ಲಸನ ಕಕ್ಕನ ಮಗನಾದ ಫಿಲಿಪನಿಗೆ ಕೊಟ್ಟರು. ಆಗ ಎಡ್ವರ್ಡನು ಫ್ರಾನ್ಸಿನೊಡನೆ ಯುದ್ಧವನ್ನು ಆರಂಭಿಸಿದನು.

**ಯುದ್ಧವು**— ೩ನೆಯ ಎಡ್ವರ್ಡನ ಹಿರಿಯ ಮಗನಾದ ಎಡ್ವರ್ಡನು ಶೂರನೂ, ಯುದ್ಧಕುಶಲನೂ ಇದ್ದನು. ಯುದ್ಧಮಾಡಲು ಅವನು ಫ್ರಾನ್ಸಿಗೆ ಹೋದನು. ಅವನು ಕರಿಯ ಬಣ್ಣದ ಚಿಲಕತ್ತ್ರನ್ನು ಧರಿಸುತ್ತಿದ್ದನಾದುದರಿಂದ ಅವನನ್ನು ಜನರು "ಕೃಷ್ಣಕುಮಾರ"ನೆಂದು (Black Prince) ಕರೆಯುತ್ತಿದ್ದರು. ಈ ಯುದ್ಧದಲ್ಲಿ ೧೩೪೬ರಲ್ಲಿ **ಕ್ರೆಸಿ**, ೧೩೪೭ರಲ್ಲಿ **ಕ್ಯಾಲೆ**, ೧೩೫೬ರಲ್ಲಿ **ಪಾಯಟೂ** ಈ ಕಾಳೆಗಗಳಲ್ಲಿ ಇಂಗ್ಲಿಷರಿಗೆ ಜಯವಾಯಿತು, ಮತ್ತು ಫ್ರಾನ್ಸಿನ ಆಗಿನ ರಾಜನಾದ **ಜಾನನು** ಇಂಗ್ಲಂಡಿನ ಸೆರೆಯಾಳಾದನು. ೧೩೬೦ರಲ್ಲಿ **ಬ್ರೆಟಿಗ್ನಿ** ಎಂಬಲ್ಲಿ ಒಪ್ಪಂದವಾಗಿ ಈ ಯುದ್ಧವು ನಿಂತಿತು. ಈ ಒಪ್ಪಂದದಿಂದ ಫ್ರಾನ್ಸಿನಲ್ಲಿಯ ಅಕ್ವಿಟೇನ್, ಕ್ಯಾಲೇ ಈ ಭಾಗಗಳು ಎಡ್ವರ್ಡನಿಗೆ ದೊರೆತುವು. ಆದರೆ ಅವನು ಫ್ರಾನ್ಸಿನ ಪಟ್ಟಕ್ಕೆ ತನ್ನ ಅಧಿಕಾರವನ್ನು ಬಿಡಬೇಕಾಯಿತು. ಮುಂದೆ ಐದನೆಯ ಹೆನ್ರಿಯ ಆಳ್ಕೆಯ ಕಾಲದಲ್ಲಿ (೧೪೧೩–೧೪೨೨) ಫ್ರಾನ್ಸಿನೊಡನೆ ಮತ್ತೆ ಯುದ್ಧವು ಪ್ರಾರಂಭವಾಯಿತು. ಆಗಲೂ ೧೪೧೫ರಲ್ಲಿ **ಅಜಿನ್‌ಕೋರ್ಟು** ಎಂಬಲ್ಲಿ ಇಂಗ್ಲಿಶರೇ ಜಯವನ್ನು ಸಂಪಾದಿಸಿದರು. ೧೪೨೦ರಲ್ಲಿ **ಟ್ರಾಯಿಸ್** ಎಂಬಲ್ಲಿ ಒಪ್ಪಂದವಾಯಿತು. ಈ ಒಪ್ಪಂದದಂತೆ ಫ್ರಾನ್ಸಿನ ಅರಸನಾದ ಚಾರ್ಲಸನ ಮರಣದ ತರುವಾಯದಲ್ಲಿ ಫ್ರಾನ್ಸಿನ ಪಟ್ಟವು ಇಂಗ್ಲಂಡಿನ ರಾಜನಾದ ಐದನೆಯ ಹೆನ್ರಿಗೆ ದೊರೆಯಬೇಕೆಂದು ಗೊತ್ತಾಯಿತು. ಆದರೆ ಐದನೆಯ ಹೆನ್ರಿ ಒಪ್ಪಂದವಾದ ಬಳಿಕ ಎರಡು ವರ್ಷಗಳಲ್ಲಿಯೇ ತೀರಿದನು. ಆದರೂ ಅವನ ಒಂಭತ್ತು ತಿಂಗಳ ಮಗನಾದ ೬ನೆಯ ಹೆನ್ರಿ ಫ್ರಾನ್ಸಿನ ರಾಜನಾಗುವವನಿದ್ದನು. ಆದರೆ ಆಗ ಫ್ರೆಂಚ ಸರದಾರರು ಫ್ರಾನ್ಸಿನಲ್ಲಿಯ ಅರಸುಮನೆತನದೊಡನೆ ಸಂಬಂಧವಿದ್ದ **ಆರ್ಲಿನ್ಸ್** ಎಂಬ ಸರದಾರನ ಮಗನಿಗೆ ೭ನೆಯ ಚಾರ್ಲಸ ಎಂಬ ಬಿರುದನ್ನಿತ್ತು ಅವನನ್ನು ಫ್ರಾನ್ಸಿನ ರಾಜನಾಗಿ ಮಾಡಿದರು. ಆದುದರಿಂದ ಇಂಗ್ಲಂಡ ಮತ್ತು ಫ್ರಾನ್ಸ ಇವುಗಳ ನಡುವೆ ಮತ್ತೆ ಯುದ್ಧವು ಪ್ರಾರಂಭವಾಯಿತು. ಈಗಲೂ ಫ್ರೆಂಚ ಜನರಿಗೆ ಸೋಲು ಬರುತ್ತಿತ್ತು; ಆದರೆ **ಜೋನ್ ಆಫ್ ಆರ್ಕ** ಎಂಬವಳು (ಒಬ್ಬ ಫ್ರೆಂಚ ಒಕ್ಕಲಿಗನ ಮಗಳು) ತನಗೆ ಈಶ್ವರನ ಸಾಕ್ಷಾತ್ಕಾರವಾಗಿದೆ ಎಂದು ಹೇಳಿ ಫ್ರೆಂಚ ಸೈನಿಕರಲ್ಲಿ ಉತ್ಸಾಹವನ್ನು ಹುಟ್ಟಿಸಿದುದರಿಂದ ಇಂಗ್ಲಿಶರು ಸೋತರು, ಆದರೆ ಅವಳು ಮಾತ್ರ ಇಂಗ್ಲಿಶರ ಕೈಯೊಳಗೆ ಸಿಕ್ಕಿದಳು. ಇಂಗ್ಲಿಶರು ಅವಳು ಮಂತ್ರಗಾರತಿ ಇರುವಳೆಂದು ಹೇಳಿ ಅವಳನ್ನು ಸುಟ್ಟರು. ಈ ಯುದ್ಧದಲ್ಲಿ ಇಂಗ್ಲಿಶ್ ಸೈನ್ಯವು ಸಂಪೂರ್ಣವಾಗಿ ಸೋತಿತ್ತು. ಕ್ಯಾಲೆಯೊಂದನ್ನು ಬಿಟ್ಟು ಉಳಿದೆಲ್ಲ ಪ್ರದೇಶವನ್ನು ಫ್ರೆಂಚರು ವಶಮಾಡಿಕೊಂಡರು. ಈ ಬಗೆಯಾಗಿ

ನೂರು ವರ್ಷಗಳಿಗಿಂತ ಹೆಚ್ಚು ಕಾಲ ಸಾಗಿದ ಈ ಯುದ್ಧದಲ್ಲಿ ಇಂಗ್ಲಂಡಿನ ಅರ್ಥಹಾನಿಯೂ, ಮನುಷ್ಯಹಾನಿಯೂ ಬಹಳವಾಯಿತು, ಆದರೆ ಲಾಭವು ಮಾತ್ರ ಏನೂ ಆಗಲಿಲ್ಲ.

**ಪ್ಲೇಗು** – ೩ನೆಯ ಎಡ್ವರ್ಡನು ಆಳುತ್ತಿರುವಾಗ ೧೩೪೯ರಲ್ಲಿ ಇಂಗ್ಲಂಡಿನಲ್ಲಿ ಪ್ಲೇಗು ಪ್ರಾರಂಭವಾಯಿತು. ಈ ಬೇನೆಯಲ್ಲಿ ⅓ ಜನರು ಮೃತ್ಯುವಿನ ಬಾಯಲ್ಲಿ ಬಿದ್ದರು. ಆದುದರಿಂದ ಎಲ್ಲೆಲ್ಲಿಯೂ ಹಾಹಾಕಾರವಾಯಿತು.

**೨ನೆಯ ರಿಚರ್ಡನು** (೧೩೭೭ – ೧೩೯೯) – ೩ನೆಯ ಎಡ್ವರ್ಡನು ಮರಣ ಹೊಂದಿದ ಬಳಿಕ ಅವನ ಮೊಮ್ಮಗನಾದ (ಕೃಷ್ಣಕುಮಾರನ ಮಗನು) ರಿಚರ್ಡನು ಪಟ್ಟಕ್ಕೆ ಬಂದನು. ಇವನು ೧೧ ವರ್ಷದವನಿದ್ದುದರಿಂದ ಲ್ಯಾಂಕೆಸ್ಟರದ ಸರದಾರನಾದ **ಜಾನ್ ಆಫ ಗಾಂಟ** ಎಂಬ ಅವನ ಕಕ್ಕನು ರಾಜ್ಯಕಾರಭಾರ ವನ್ನು ನೋಡುತ್ತಿದ್ದನು. ರಿಚರ್ಡನು ವಯಸ್ಸಿಗೆ ಬಂದ ಬಳಿಕ ರಾಜ್ಯಕಾರ ಭಾರವನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಅವನ ಆಳ್ಕೆಯಲ್ಲಿ ಫ್ರಾನ್ಸಿ ನೊಡನೆ ಯುದ್ಧವು ನಡೆದುದರಿಂದ ಯುದ್ಧದ ವೆಚ್ಚಕ್ಕೋಸುಗ ಅವನು ಪ್ರಜೆಗಳ ಮೇಲೆ ಬಗೆಬಗೆಯ ಕರಗಳನ್ನು ಕೂಡಿಸಿದನು. ಅದರಿಂದ ಎಲ್ಲೆಲ್ಲಿಯೂ ಅಸಂತೋಷವು ಹಬ್ಬಿತು. ಬಡಜನರು **ವ್ಯಾಟ್ ಟಾಯಲರ** ಎಂಬವನ ನೇತೃ ತ್ವದಲ್ಲಿ ಬಂಡನ್ನು ಪ್ರಾರಂಭಿಸಿದರು. ವ್ಯಾಟ್ ಟಾಯಲರನು ಕೊಲ್ಲಲ್ಪಟ್ಟನು. ರಿಚರ್ಡನು ಆಳುತ್ತಿರುವ ಸಮಯದಲ್ಲಿ ವಿಕ್ಲಿಫನೆಂಬ **ಧರ್ಮಸುಧಾರಕನು** ಆದನು. ವಿಕ್ಲಿಫನು ಧರ್ಮಾಧಿಕಾರಿಗಳ ಕೀಳು ನಡತೆಯನ್ನು ಟೀಕಿಸಿದುದಲ್ಲದೆ ಧರ್ಮಾಕಾರಿಗಳೆಂಬವರು ಪವಿತ್ರ ರೀತಿಯಿಂದ ತಮ್ಮ ಜೀವನವನ್ನು ಸಾಗಿಸು ವುದು ಅವಶ್ಯವೆಂದು ಸೂಚಿಸಿದನು. ಅವನು ಕ್ರೈಸ್ತಧರ್ಮದಲ್ಲಿ ಸೇರಿಕೊಂಡಿದ್ದ ಎಷ್ಟೋ ಅವಿವೇಕದ ಆಚಾರಗಳನ್ನು ಟೀಕಿಸಿದನು. ೧೩೮೨ರಲ್ಲಿ ಅವನು ಬೈಬ ಲನ್ನು ಇಂಗ್ಲಿಶಿನಲ್ಲಿ ಭಾಷಾಂತರಿಸಿದನು. ಧರ್ಮಸುಧಾರಣೆಯ ವಿಷಯದಲ್ಲಿ ಅವನ ವಿಚಾರಗಳು ಕೆಲವರ ಮನಸ್ಸಿಗೆ ಬಂದುವು, ಅವರು ವಿಕ್ಲಿಫನ ಅನುಯಾಯಿ ಗಳಾದರು. ಆದರೆ ಅವನ ವಿರೋಧಿಗಳು ಈ ಜನರನ್ನು **ಲೋಲರ್ಡ್ಸ** (ವ್ಯರ್ಥ ವಾಗಿ ಬಡಬಡಿಸುವವರು) ಎಂದು ಕರೆಯುತ್ತಿದ್ದರು. ಮುಂದೆ ಮುಂದೆ ಈ ಜನರು ಪಾಖಂಡಿಗಳಿರುವರೆಂದು ಭಾವಿಸಿ ಇಂಗ್ಲಂಡಿನ ಅರಸನು ಮತ್ತು ಜನರು ಇವರನ್ನು ಪರಿಪರಿಯಾಗಿ ಪೀಡಿಸತೊಡಗಿದರು. ಅದರಿಂದ ವಿಕ್ಲಿಫನ ಮತದ ಪ್ರಸಾರವು ಬಹಳವಾಗಲಿಲ್ಲ.

ರಿಚರ್ಡನ ಆಳ್ಕೆಯಲ್ಲಿ ಅವನ ದರ್ಬಾರದ ಜನರಲ್ಲಿ ಎರಡು ಪಕ್ಷಗಳಾಗಿ

ಎಲ್ಲೆಲ್ಲಿಯೂ ಅವ್ಯವಸ್ಥೆಯುಂಟಾಯಿತು. ಕೊನೆಗೆ ಪಾರ್ಲಿಮೆಂಟು ಅವನನ್ನು ಪಟ್ಟದಿಂದ ತಳ್ಳಿ ಅವನ ಕಕ್ಕನ ಮಗನಾದ ಲ್ಯಾಂಕ್ಯಾಸ್ಟರ ವಂಶದ ಹೆನ್ರಿಗೆ ಪಟ್ಟಗಟ್ಟಿತು.

**ಯಾರ್ಕ ಮತ್ತು ಲ್ಯಾಂಕ್ಯಾಸ್ಟರ ವಂಶಗಳು–ಅಂತಯುದ್ಧವು–** ೩ನೆಯ ಎಡ್ವರ್ಡನಿಗೆ ಐವರು ಗಂಡುಮಕ್ಕಳಿದ್ದರು. ೨ನೆಯ ರಿಚರ್ಡನು ಅವನ ಹಿರಿಯ ಮಗನ ಮಗನು. ಪಾರ್ಲಿಮೆಂಟು ಅವನನ್ನು ಪಟ್ಟದಿಂದ ತಳ್ಳಿ ಸೆರೆಯಲ್ಲಿಟ್ಟಿತು. ಅದೇ ಸ್ಥಿತಿಯಲ್ಲಿ ಅವನು ಮರಣಹೊಂದಿದನು. ಅವನಿಗೆ ಗಂಡುಮಕ್ಕಳು ಇಲ್ಲದಿದ್ದುದರಿಂದ ಅವನ ಹಿರಿಯ ಕಕ್ಕನಾದ **ಲಾಯೊನೇಲ್** ಇವನ ಮರಿಮಗನಾದ **ಎಡ್ವರ್ಡ ಮಾರ್ಟಿಮರ*** ಎಂಬವನೇ ನಿಜವಾದ ವಾರಸದಾರನಿದ್ದನು. ಅವನಿಗೆ ಯಾರ್ಕದ ಜಹಾಗೀರು ಬಂದಿತ್ತಾದುದರಿಂದ ಅವನ ವಂಶಕ್ಕೆ **ಯಾರ್ಕವಂಶ** ಎಂದು ಹೆಸರು ಬಂದಿತು. ಈ ಯಾರ್ಕವಂಶದವರಿಗೆ ಪಾರ್ಲಿಮೆಂಟು ಪಟ್ಟವನ್ನು ಕೊಡದೆ ಲಾಯೊನೇಲ್‍ನ ತಮ್ಮನಾದ **ಜಾನ್ ಆಫ ಗಾಂಟ** ಇವನ ವಂಶದಲ್ಲಿಯ **ನಾಲ್ಕನೆಯ ಹೆನ್ರಿಗೆ** ಪಟ್ಟವನ್ನು ಕೊಟ್ಟಿತು. ಈ ವಂಶದವರಿಗೆ ಲ್ಯಾಂಕ್ಯಾಸ್ಟರದ ಜಹಾಗೀರು ಇದ್ದಿತ್ತಾದುದರಿಂದ ಅದಕ್ಕೆ **ಲ್ಯಾಂಕ್ಯಾಸ್ಟರ ವಂಶವೆಂದು** ಹೆಸರು ಬಂದಿತು. ಯಾರ್ಕ್ ವಂಶದವರು ಇಂಗ್ಲಂಡಿನ ರಾಜಪದವನ್ನು ದೊರಕಿಸಲು ಪ್ರಯತ್ನವನ್ನು ಬಿಡಲಿಲ್ಲ. ಆದುದರಿಂದ ಈ ಎರಡು ವಂಶಗಳ ನಡುವೆ ೧೪೫೫–೧೪೮೫ರ ವರೆಗೆ ಯುದ್ಧವು ನಡೆಯಿತು. ಲ್ಯಾಂಕೆಸ್ಟರವಂಶದ ಚಿಹ್ನವು ಕೆಂಪು ಗುಲಾಬಿ ಹೂ, ಯಾರ್ಕವಂಶದ ಚಿಹ್ನವು ಬಿಳಿಯ ಗುಲಾಬಿ ಹೂ ಇದ್ದುದರಿಂದ ಈ ಯುದ್ಧಕ್ಕೆ **ವಾರ ಆಫ ದಿ ರೊಜಿಸ** (War of the Roses) ಎಂದು ಹೆಸರು ಬಂದಿತು. ಈ ಯುದ್ಧದ ಸಮಯದಲ್ಲಿ ಇಂಗ್ಲಂಡಿನಲ್ಲಿಯ ಸರದಾರರಲ್ಲಿ ಒಡಕು ಹುಟ್ಟಿತು. ಕೆಲವರು ಯಾರ್ಕವಂಶದವರಿಗೆ ನೆರವಾದರು, ಕೆಲವರು ಲ್ಯಾಂಕ್ಯಾಸ್ಟರ ವಂಶದವರ ಪಕ್ಷವನ್ನು ವಹಿಸಿದರು. ಇದರಿಂದ ದೇಶದಲ್ಲಿ ಎಲ್ಲೆಲ್ಲಿಯೂ ಯುದ್ಧದ ಬೇಗೆ ಹಬ್ಬಿತು.

ಈ ಯುದ್ಧದಿಂದ ಇಂಗ್ಲಂಡಿನಲ್ಲಿ ಎಷ್ಟೋ ಸರದಾರ ವಂಶಗಳು ಮಣ್ಣುಗೂಡಿದುವು. ಮೊದಲು ಯಾರ್ಕವಂಶದವರಿಗೆ ಜಯವು ದೊರೆತುದರಿಂದ ಆ ವಂಶದಲ್ಲಿಯ ೪ನೆಯ ಎಡ್ವರ್ಡನು (೧೪೬೧–೧೪೮೩), ೫ನೆಯ ಎಡ್ವರ್ಡನು (೧೪೮೩) ಮತ್ತು ೩ನೆಯ ರಿಚರ್ಡನು (೧೪೮೩–೧೪೮೫) ಇಂಗ್ಲಂಡಿನ ರಾಜ್ಯ

*೬೨ನೆಯ ಪುಟದ ಮೇಲಿನ ವಂಶವೃಕ್ಷವನ್ನು ನೋಡಿರಿ.

ವನ್ನು ಆಳಿದರು. ಲ್ಯಾಂಕೆಸ್ಟರ ವಂಶದಲ್ಲಿಯ ಮಾರ್ಗಾರೇಟ ಎಂಬ ರಾಜಕನ್ಯೆ ಎಡ್‌ಮಂಡ ಟ್ಯೂಡರನನ್ನು ಮದುವೆಯಾದಳು. ಹೆನ್ರಿ ಟ್ಯೂಡರ ಎಂಬ ಅವಳ ಮಗನು ಬಾಸವರ್ಥ ಕಾಳಗದಲ್ಲಿ ಯಾರ್ಕವಂಶದ ರಾಜನಾದ ೩ನೆಯ ರಿಚರ್ಡನನ್ನು ಕೊಂದು ರಾಜಪದವನ್ನು ದೊರಕಿಸಿದನು (೧೪೮೫). ಹೀಗೆ ಇಂಗ್ಲಂಡಿನ ರಾಜಪದವು ಟ್ಯೂಡರ ವಂಶದ ವಶದಲ್ಲಿ ಬಂದಿತು.

## ೭. ಸಾಮಾಜಿಕ ಸ್ಥಿತಿ

**ಇಂಗ್ಲಂಡಿನ ರಾಷ್ಟ್ರವು**– ಇಂಗ್ಲಂಡಿನಲ್ಲಿಯ ಜನಸಮಾಜವು ಅಲ್ಲಿಯ ಮೂಲನಿವಾಸಿಗಳಾದ ಬ್ರಿಟನರು ಮತ್ತು ಹೊರಗಿನಿಂದ ಬಂದ ಅಂಗಲ್ಸ, ಸ್ಯಾಕ್ಸನ್ಸ, ಡೇನ್ಸ, ಮತ್ತು ನಾರ್ಮನ್ ಈ ಜನರಿಂದ ಆಗಿರುವುದು. ಮೊದಲು ಮೊದಲು ಗೆಲ್ಲಲ್ಪಟ್ಟವರು ಮತ್ತು ಗೆದ್ದವರು ಎಂಬ ಭಾವನೆ ಮೂಲನಿವಾಸಿಗಳಲ್ಲಿ ಮತ್ತು ಹೊರಗಿನಿಂದ ಬಂದವರಲ್ಲಿ ಇದ್ದಿತು. ಆದರೆ ಎರಡು ಮೂರು ತಲೆಗ ಳಾದ ಬಳಿಕ ಹೊಸ ಜನರು ಮೂಲನಿವಾಸಿಗಳಲ್ಲಿ ಬೆರೆಯುತ್ತಿದ್ದರು. ಜನರು ಮಾತಾಡುವ ಭಾಷೆ ಇಂಗ್ಲಿಶ್ ಇದ್ದಿತು. ಆದರೆ ನಾರ್ಮನರ ಆಳ್ಕೆ ಪ್ರಾರಂಭ ವಾದ ಬಳಿಕ ರಾಜರ ಭಾಷೆಯೂ ಸರದಾರರ ಭಾಷೆಯೂ ಅದರಂತೆ ದರಬಾರದ ಭಾಷೆಯೂ ಫ್ರೆಂಚಾಯಿತು. ಆದರೆ ಕೆಲಕಾಲದ ಮೇಲೆ ಅವರಾದರೂ ಇಂಗ್ಲಿಶ್ ಭಾಷೆಯನ್ನು ಆಡತೊಡಗಿದರು, ಮತ್ತು ದರಬಾರದಲ್ಲಿಯೂ ಈ ಭಾಷೆಯೇ ಬಳಕೆಯಲ್ಲಿ ಬರತೊಡಗಿತು. ಮೊದಮೊದಲು ನಾರ್ಮನರ ಒಲವು ಫ್ರಾನ್ಸ ಮತ್ತು ನಾರ್ಮಂಡಿ ಇವುಗಳ ಕಡೆಗೆ ಇದ್ದಿತು, ಆದರೆ ಮುಂದೆ ಮುಂದೆ ಅವರಿಗೆ ಇಂಗ್ಲಂಡಿನ ವಿಷಯದಲ್ಲಿ ಮಮತೆ ಹುಟ್ಟಿತು. ಹೀಗೆ ಹದಿಮೂರನೆಯ ಶತಕದ ಆರಂಭದಲ್ಲಿ ಎಲ್ಲರಲ್ಲಿಯೂ ತಾವು ಇಂಗ್ಲಿಶರು ಎಂಬ ಭಾವನೆ ಹುಟ್ಟಿತ್ತು.

**ಸರದಾರರೂ ಜಮೀನದಾರರೂ ರೈತರೂ**– ಮಧ್ಯಯುಗದಲ್ಲಿ ಪಟ್ಟಣ ಗಳ ಸಂಖ್ಯೆ ಅಲ್ಪವಾಗಿದ್ದಿತು. ಜನಸಮಾಜವು ಹಳ್ಳಿಗಳಲ್ಲಿ ವಾಸವಾಗಿದ್ದಿತು. ಮತ್ತು ಒಕ್ಕಲತನವು ಜನರ ಮುಖ್ಯ ವ್ಯವಸಾಯವಾಗಿತ್ತು. ನಾರ್ಮನ ವಿಜಯದ ತರುವಾಯದಲ್ಲಿ ಇಂಗ್ಲಂಡಿನಲ್ಲಿಯ ಬಹಳ ಭೂಮಿ ದೊಡ್ಡ ದೊಡ್ಡ ಸರದಾರರಿಗೆ ಲಷ್ಕರಿ ನೌಕರಿಯ ಕರಾರಿನಿಂದ ಸರಂಜಾಮಿ ಜಹಾಗೀರೆಂದು ಕೊಡಲ್ಪಟ್ಟಿತ್ತು. ಈ ಸರಂಜಾಮಿ ಜಹಾಗೀರದಾರರು ತಮ್ಮ ಜಹಾಗೀರಿಯ ಕೆಲ ವೊಂದು ಭಾಗವನ್ನು ತಮ್ಮ ಕಡೆಗೆ ಇಟ್ಟುಕೊಂಡು ಉಳಿದುದನ್ನು ಲಷ್ಕರಿಯ

ನೌಕರಿಯ ಕರಾರಿನಿಂದ ಬೇರೆ ಸರದಾರರಿಗೆ ಕೊಟ್ಟಿದ್ದರು. ಈ ಸರದಾರರೂ ತಮ್ಮ ಭೂಮಿಗಳನ್ನು ಉತ್ಪನ್ನದ ಕೆಲವೊಂದು ಭಾಗವನ್ನು ತಮಗೆ ಸಲ್ಲಿಸಬೇಕೆಂಬ ಕರಾರಿನಿಂದ ಒಕ್ಕಲಿಗರಿಗೆ ಮತ್ತು ಹೊಲದಲ್ಲಿ ದುಡಿವ ರೈತರಿಗೆ ಕೊಡುತ್ತಿದ್ದರು. ಸರದಾರರೂ ದೊಡ್ಡ ದೊಡ್ಡ ಜಮೀನದಾರರೂ ತಮ್ಮ ಜಹಾಗೀರುಗಳಲ್ಲಿ ವಾಸಿಸುತ್ತಿದ್ದ ಜನರಲ್ಲಿಯ ಕಲಹಗಳನ್ನು ತೀರಿಸುವ ಮತ್ತು ಅವರಿಗೆ ನ್ಯಾಯದಾನವನ್ನು ಮಾಡುವ ಕೆಲಸವನ್ನು ಮಾಡುತ್ತಿದ್ದರು. ಕೊಡಕೊಳ್ಳುವ ಕೆಲಸದಲ್ಲಿ ಹಣದ ಉಪಯೋಗವು ಕ್ವಚಿತ್ತಾಗಿ ಆಗುತ್ತಿತ್ತು. ತಮ್ಮ ಒಳಿಯಲ್ಲಿಯ ವಸ್ತುವನ್ನು ಕೊಟ್ಟು ತಮಗೆ ಬೇಕಾದ ವಸ್ತುವನ್ನು ಜನರು ತರುತ್ತಿದ್ದರು. ಪೇಟೆಯಲ್ಲಿ ಮಾರಾಟಕ್ಕೆ ಧಾನ್ಯವು ಬರುತ್ತಿದ್ದಿಲ್ಲ. ಆದುದರಿಂದ ಪ್ರತಿಯೊಬ್ಬ ಜಮೀನದಾರನು ಮತ್ತು ಒಕ್ಕಲಿಗನು ತಮಗೆ ಬೇಕಾಗುವ ಧಾನ್ಯವನ್ನು ತಮ್ಮ ಭೂಮಿಯಲ್ಲಿ ಬೆಳೆಯುತ್ತಿದ್ದರು. ಆಗ ಮಾರ್ಗಗಳು ಅಲ್ಪ ಪ್ರಮಾಣದಲ್ಲಿದ್ದುವು. ಅವಾದರೂ ಸರಿಯಾಗಿರಲಿಲ್ಲ. ಆದುದರಿಂದ ಧಾನ್ಯವನ್ನೂ ಇತರ ವಸ್ತುಗಳನ್ನೂ ಜಹಾಗೀರಗಳಿಂದ ದೂರದೂರದ ಸ್ಥಳಗಳಿಗೆ ಕಳಿಸುವುದು ಕಠಿಣ ಕೆಲಸವಾಗಿದ್ದಿತ್ತು. ಆದುದರಿಂದ ಸರದಾರರೂ ಜಮೀನದಾರರೂ ತಮ್ಮ ಜಹಾಗೀರುಗಳಲ್ಲಿಯ ಒಂದು ಸ್ಥಳದ ಧಾನ್ಯವು ತೀರಿದರೆ ಮತ್ತೊಂದು ಸ್ಥಳಕ್ಕೆ ತಮ್ಮ ಕುಟುಂಬದಲ್ಲಿಯ ಎಲ್ಲ ಜನರೊಡನೆ ಹೋಗುತ್ತಿದ್ದರು. ದೊಡ್ಡ ದೊಡ್ಡ ಸರದಾರರಿಗೆ ಬೇರೆ ಬೇರೆ ಸ್ಥಳಗಳಲ್ಲಿ ಜಹಾಗೀರುಗಳಿದ್ದರೆ ಅವುಗಳ ವ್ಯವಸ್ಥೆಯನ್ನು ನೋಡಲು ಅವರು **ಸ್ಟುಅರ್ಟ ಮತ್ತು ಬೇಲಿಫ** ಎಂಬ ಅಧಿಕಾರಿಗಳನ್ನು ಇಟ್ಟುಕೊಳ್ಳುತ್ತಿದ್ದರು. ಭೂಮಿಗಳಲ್ಲಿ ದುಡಿವ ರೈತರ ಸ್ಥಿತಿ ಬಹು ಕಷ್ಟದಾಯಕವಾಗಿದ್ದಿತು. ಅವರಿಗೆ ಅವರ ಒಡೆಯರಿಂದ ಸ್ವಲ್ಪ ಭೂಮಿ ದೊರೆಯುತ್ತಿತ್ತು. ಆದರೆ ಅದಕ್ಕೆ ಪ್ರತಿಯಾಗಿ ಅವರು ತಮ್ಮ ಒಡೆಯರ ಭೂಮಿಯಲ್ಲಿ ವಾರದಲ್ಲಿ ಕೆಲವು ದಿವಸ ದುಡಿಯಬೇಕಾಗುತ್ತಿತ್ತು. ಈ ಪದ್ಧತಿಗೆ "ಸರ್ಫ ಪದ್ಧತಿ" (Serfdom) ಎಂದು ಹೆಸರು. ಅವರಿಗೆ ತಮ್ಮ ಭೂಮಿಯನ್ನು ಬಿಟ್ಟು ಬೇರೆಡೆಗೆ ಹೋಗಲು ಅಧಿಕಾರವಿದ್ದಿಲ್ಲ. ಇದಲ್ಲದೆ ತಮ್ಮ ಮಕ್ಕಳಿಗೆ ಯಾವುದಾದರೊಂದು ಉದ್ಯಮವನ್ನು ಕಲಿಯಲು ಬೇರೊಂದು ಊರಿಗೆ ಕಳುಹಲಾದರೂ ಅವರಿಗೆ ತಮ್ಮ ಒಡೆಯನ ಅಪ್ಪಣೆ ಬೇಕಾಗುತ್ತಿತ್ತು. ಹೆಣ್ಣುಮಕ್ಕಳ ಲಗ್ನವನ್ನಾದರೂ ಒಡೆಯನ ಅಪ್ಪಣೆಯಿಲ್ಲದೆ ಮಾಡಲು ಬರುತ್ತಿದ್ದಿಲ್ಲ. ಯಾವಾಗಲು ದುಡಿಯುತ್ತ ಇರಬೇಕಾದುದರಿಂದ ಅವರಿಗೆ ವಿಶ್ರಾಂತಿ ಎಂಬುದು ಇರುತ್ತಿರಲಿಲ್ಲ.

ಆದರೆ ಮುಂದೆ ಮುಂದೆ ಸರದಾರರ, ಜಮೀನದಾರರ ಮತ್ತು ರೈತರ ಸ್ಥಿತಿ

ಯಲ್ಲಿ ಬದಲಾಗುತ್ತ ಹೋಯಿತು. ಲಷ್ಕರಿ ನೌಕರಿಯ ಕರಾರಿನಂತೆ ರಾಜನು ಕರೆದಾಗ ಸೈನ್ಯದೊಡನೆ ಹೋಗುವುದಕ್ಕಿಂತ ಕೆಲವೊಂದು ನಿಶ್ಚಿತವಾದ ಕರವನ್ನು ಕೊಡುವುದು ಸರದಾರರಿಗೂ ದೊಡ್ಡ ದೊಡ್ಡ ಜಮೀನದಾರರಿಗೂ ಹೆಚ್ಚು ಅನುಕೂಲವಾಗಿ ತೋರಿತು. ಅದರಂತೆ ಒಡೆಯನ ಭೂಮಿಯಲ್ಲಿ ವಾರದಲ್ಲಿ ಕೆಲವು ದಿವಸ ದುಡಿವುದಕ್ಕಿಂತ ಕೆಲವೊಂದು ನಿಶ್ಚಿತವಾದ ಲಾವಣಿಯ ಹಣವನ್ನು ಕೊಡುವುದು ಮತ್ತು ಭೂಮಿಯಲ್ಲಿ ದಿನಗೂಲಿಯಿಂದ ಕೆಲಸಮಾಡುವುದು ಒಕ್ಕಲಿಗರಿಗೂ ರೈತರಿಗೂ ಹೆಚ್ಚು ಅನುಕೂಲವಾಗಿಯೂ ಲಾಭದಾಯಕವಾಗಿಯೂ ತೋರಿತು. ಇಂತಹ ರೈತರಿಗೆ ಕಾಪಿ ಹೋಲ್ಡರ್ಸ (Copy holders) ಎಂದು ಹೆಸರು. ಈ ಪದ್ಧತಿ ಮುಂದೆ ರೂಢವಾಗುತ್ತ ಹೋಯ್ತು. ಆದರೆ ೧೪ನೆಯ ಶತಕದಲ್ಲಿ ಪ್ಲೇಗಿನ ಬೇನೆಯಿಂದ ಅನೇಕರು ಮೃತ್ಯುಮುಖದಲ್ಲಿ ಬಿದ್ದುದರಿಂದ ಧಾನ್ಯವು ತುಟ್ಟಿಯಾಯಿತು, ಮತ್ತು ಕೂಲಿಯ ದರವು ಬೆಳೆಯಿತು. ಆದುದರಿಂದ ಮತ್ತೆ ಮೊದಲಿನಂತೆ ಒಕ್ಕಲಿಗರು ತಮ್ಮ ಒಡೆಯರ ಭೂಮಿಯಲ್ಲಿ ಕೆಲಸಮಾಡುತ್ತಿದ್ದು ಅವುಗಳನ್ನು ಬಿಟ್ಟು ಬೇರೆಡೆಗೆ ಹೋಗಬಾರದೆಂದು ಪಾರ್ಲಿಮೆಂಟು ಕಾಯದೆಯನ್ನು ಮಾಡಿತು. ಆದರೆ ಈ ಕಾಯದೆಯಿಂದ ಉಪಯೋಗವೇನೂ ಆಗದೆ ಅಸಂತೋಷವು ಹುಟ್ಟಿತು. ಜಮೀನದಾರರೂ ಕೂಲಿಯ ದರವು ಬೆಳೆದುದರಿಂದ ಒಕ್ಕಲತನದಲ್ಲಿ ಮನಸ್ಸುಹಾಕುವುದನ್ನು ಬಿಟ್ಟು ಕುರಿಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ಕೆಲಸದಲ್ಲಿ ಮನಸ್ಸು-ಹಾಕಲು ಆರಂಭಿಸಿದರು. ಅದರಿಂದ ಎಷ್ಟೋ ರೈತರಿಗೂ, ಕೂಲಿಯವರಿಗೂ ಉದ್ಯೋಗವು ದೊರೆಯದಂತಾಗಿ ನಿರುದ್ಯೋಗವು ಬೆಳೆದು ಜನರಲ್ಲಿ ಭಿಕ್ಷುಕರ ಸಂಖ್ಯೆ ಹೆಚ್ಚಿತು ಮತ್ತು ಅಲ್ಲಲ್ಲಿ ದೊಂಬೆಗಳು ಹುಟ್ಟಿದುವು.

**ವ್ಯಾಪಾರೋದ್ಯಮಗಳ ಮತ್ತು ಪಟ್ಟಣಗಳ ಬೆಳವಣಿಗೆ**—ಮಧ್ಯಯುಗದ ಆರಂಭದಲ್ಲಿ ವ್ಯಾಪಾರೋದ್ಯಮಗಳು ಬಹುಶಃ ಇರಲಿಲ್ಲ, ಮಾರ್ಗಗಳಾದರೂ ಬಹಳವಾಗಿರಲಿಲ್ಲ, ಇದ್ದುವೂ ಸರಿಯಾಗಿರಲಿಲ್ಲ. ಆದುದರಿಂದ ಪ್ರವಾಸಕ್ಕೆ ಬಲು ತೊಂದರೆಯಾಗುತ್ತಿತ್ತು. ಮಾರ್ಗಗಳಲ್ಲಿ ಕಳ್ಳಕಾಕರ ಉಪದ್ರವವು ಬಹಳವಾಗಿತ್ತು. ಜನರ ಕೊರತೆಗಳು ಬೆಳೆಯುತ್ತ ಹೋದಂತೆ ವ್ಯಾಪಾರೋದ್ಯಮಗಳೂ ಬೆಳೆಯತೊಡಗಿದುವು, ಮತ್ತು ಎಷ್ಟೋ ಜನರು ಒಕ್ಕಲತನವನ್ನು ಬಿಟ್ಟು ಈ ಉದ್ಯೋಗಗಳಲ್ಲಿ ತೊಡಗಲಾರಂಭಿಸಿದರು. ಮೊದಲು ಬಹುಶಃ ಎಲ್ಲ ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದು ಒಕ್ಕಲತನದಿಂದ ಜೀವಿಸುತ್ತಿದ್ದರು. ಆದರೆ ಮುಂದೆ ಮುಂದೆ ನಾಲ್ಕು ಮಾರ್ಗಗಳು ಕೂಡಿದೆಡೆಗಳಿಗೆ, ಯಾತ್ರೆಯ ಸ್ಥಳ

ಗಳಿಗೆ, ನದೀತೀರದ ಅನುಕೂಲವಾದ ಸ್ಥಳಗಳಿಗೆ, ಮಹತ್ವವು ಬರತೊಡಗಿತು. ಈ ಸ್ಥಳಗಳಲ್ಲಿ ಪೇಟೆಸಂತೆಗಳು ನೆರೆಯುತ್ತಿದ್ದುವು ಮತ್ತು ಕೊಡುಕೊಳ್ಳುವ ಕೆಲಸ ಕ್ಕೋಸುಗ ಜನರು ನೆರೆಯುತ್ತಿದ್ದರು. ಒಕ್ಕಲತನದಿಂದ ಜೀವಿಸುವ ರೈತರಲ್ಲಿ ಕೆಲವರು ಹೊಲಗಳ ಒಡೆಯರ ಕಾಟಕ್ಕೆ ಬೇಸತ್ತು ಇಂತಹ ಸ್ಥಳಗಳಲ್ಲಿ ಬಂದು ವಾಸ ಮಾಡಲಾರಂಭಿಸಿದರು. ಕಮ್ಮಾರರು, ಚರ್ಮಕಾರರು, ನೇಕಾರರು ಮೊದಲಾದ ಬೇಸಾಯಗಾರರು ಇಲ್ಲಿಗೆ ಬಂದು ತಮ್ಮ ಉದ್ಯೋಗಗಳನ್ನು ಮಾಡತೊಡಗಿದ ರಾದುದರಿಂದ ಇಲ್ಲಿಯ ಜನವಸತಿ ಬೆಳೆದು ಇವು ಪಟ್ಟಣಗಳಾಗ ತೊಡಗಿದುವು. ಪಟ್ಟಣಗಳ ಬೇಸಾಯಗಾರರಿಂದ ಕರವನ್ನು ತೆಗೆದುಕೊಳ್ಳುವ ಮತ್ತು ಅವರ ಲ್ಲಿಯ ನ್ಯಾಯಗಳನ್ನು ತೀರಿಸುವ ಅಧಿಕಾರವು ಈ ಸ್ಥಳಗಳ ಜಹಾಗೀರದಾರರಿಗೆ ಇದ್ದಿತು. ಆದರೆ ಮುಂದೆ ಮುಂದೆ ಈ ಸರದಾರರಿಗೆ ಪಟ್ಟಣದ ಜನರು ಹಣವನ್ನು ಕೊಟ್ಟು ತಮ್ಮ ಅಧಿಕಾರಿಗಳನ್ನು ನಿಯೋಜಿಸಲು, ಪಟ್ಟಣದ ಎಲ್ಲ ಅಂತಸ್ಥ ವ್ಯವಸ್ಥೆಯನ್ನು ನೋಡಿಕೊಳ್ಳಲು ಮತ್ತು ಅಲ್ಲಿಯ ಜನರಿಂದ ಕರದ ಹಣ ವನ್ನು ಕೂಡಿಸಲು **ಅಧಿಕಾರವನ್ನೂ ಸನದನ್ನೂ** (Charter) ಪಡೆಯ ಲಾರಂಭಿಸಿದರು. ಈ ಎಲ್ಲ ಪಟ್ಟಣಗಳಲ್ಲಿ **ಲಂಡನ್** ಪಟ್ಟಣವು ಬಹು ದೊಡ್ಡ ದಾಗಿತ್ತು. ಅಂಗ್ಲೋಸ್ಯಾಕ್ಸನ್ ರಾಜರ ಕಾಲದಲ್ಲಿ **ವಿಂಚೆಸ್ಟರ ಪಟ್ಟಣವು ರಾಜಧಾನಿಯಾಗಿದ್ದಿತು**; ಆದರೆ ನಾರ್ಮನರ ಆಳ್ಕೆಯ ಆರಂಭದಿಂದ ಲಂಡನ್ ಪಟ್ಟಣವು ರಾಜಧಾನಿಯ ಸ್ಥಳವಾಗಿ ಅದರ ಮಹತ್ವವು ಬಹಳವಾಗಿ ಬೆಳೆಯಿತು. ಲಂಡನಿನಲ್ಲಿಯ ಜನರು ತಮ್ಮ ಪಟ್ಟಣದ ಅಧಿಕಾರಿಗಳನ್ನು ನಿಯೋಜಿಸಲು ಮತ್ತು ಅಂತಸ್ಥ ವ್ಯವಸ್ಥೆಯನ್ನು ನೋಡಲು ರಾಜನಿಂದ ಸನದನ್ನು (Charter) ಪಡೆ ದಿದ್ದರು. ಇಂತಹ ಸನದನ್ನು ತಾವೂ ಪಡೆಯಬೇಕೆಂದು ಪ್ರತಿಯೊಂದು ಪಟ್ಟಣದ ನಿವಾಸಿಗಳ ಮಹತ್ವಾಕಾಂಕ್ಷೆ ಇದ್ದಿತು. ಉದ್ಯಮಗಳಲ್ಲಿ ಮುಂದುವರಿಯು ತ್ತಿರುವ ಪಟ್ಟಣಗಳಲ್ಲಿ ವಿವಿಧ ವ್ಯವಸಾಯಗಳನ್ನು ಮಾಡುತ್ತಿರುವ ಜನರ ಗಿಲ್ಡ ಅಥವಾ **ಸಂಘಗಳು** ಇರುತ್ತಿದ್ದುವು. ಉತ್ತಮ ವಸ್ತುಗಳು ಹುಟ್ಟುವಂತೆ ವ್ಯವಸ್ಥೆ ಮಾಡುವುದು, ಯೋಗ್ಯರಾದ ತರುಣರಿಗೆ ಉದ್ಯಮಗಳ ಶಿಕ್ಷಣವನ್ನು ಕೊಡು ವುದು, ಗಿಲ್ಡುಗಳಲ್ಲಿ ಸೇರಿದ ಜನರಿಗೆ ಅನಾನುಕೂಲತೆಯ ಪ್ರಸಂಗಗಳಲ್ಲಿ ಹಣದ ಸಾಹಾಯ್ಯವನ್ನು ಮಾಡುವುದು, ಇವೇ ಮೊದಲಾದ ಕೆಲಸಗಳು ಈ ಗಿಲ್ಡುಗಳ ಕಡೆಗೆ ಇದ್ದಿತು. ಮಧ್ಯಯುಗದಲ್ಲಿ ಮೊದಲು ಪರರಾಷ್ಟ್ರಗಳೊಡನೆ ನಡೆಯು ತ್ತಿರುವ ವ್ಯಾಪಾರವು ಇಟಾಲಿಯನ್ ಮತ್ತು ಜರ್ಮನ್ ಜನರ ವಶದಲ್ಲಿದ್ದಿತು. ಆದರೆ ಮುಂದೆ ಇಂಗ್ಲಿಶರು ಇದರಲ್ಲಿ ಸೇರಿದರು. ಜ್ಯೂ ಜನರು ಸಾಹುಕಾರಿಕೆ

ಯನ್ನು ಮಾಡುತ್ತಿದ್ದರು. ಆದರೆ ಅವರ ಬಡ್ಡಿಯ ದರವು ಬಹಳವಾಗಿ ಇದ್ದಿತಾದುದರಿಂದ ಅವರು ಜನರಿಗೆ ಬಹು ಅಪ್ರಿಯರಾಗಿದ್ದರು.

**ಶಿಕ್ಷಣವೂ ವಿದ್ಯಾಲಯಗಳೂ**—ಮಧ್ಯಯುಗದಲ್ಲಿ ಓದುಬರೆಹಗಳನ್ನು ಅರಿತವರೆಂದರೆ ಧರ್ಮಾಧಿಕಾರಿಗಳು, ಬಿಶಪರು, ಮಠಗಳಲ್ಲಿಯ ಸಾಧುಗಳು ಮತ್ತು ಗ್ರಾಮೋಪಾಧ್ಯಾಯರು. ಸಮಾಜದಿಂದ ಇವರಿಗೆ ಮಾನವು ದೊರೆಯುತ್ತಿತ್ತು. ಆದರೆ ಬರುಬರುತ್ತ ಧಾರ್ಮಿಕ ಕಾರ್ಯದಲ್ಲಿ ತೊಡಗಿದ ಈ ಜನರ ಮೊದಲಿನ ಅಕೃತ್ರಿಮವೂ ಉಚ್ಚವೂ ಆದ ಆಚಾರವಿಚಾರಗಳು ಕಡಿಮೆಯಾಗಿ ಅವರು ವಿಲಾಸಪ್ರಿಯರಾದರು, ಮತ್ತು ಅವರಲ್ಲಿ ದುರಾಚರಣವು ತಲೆದೋರಿತು. ಅದರಿಂದ ಜನರಿಗೆ ಅವರ ವಿಷಯದಲ್ಲಿದ್ದ ಆದರಭಾವವು ಮೆಲ್ಲಮೆಲ್ಲನೆ ನಷ್ಟವಾಯಿತು. ಧಾರ್ಮಿಕ ಕಾರ್ಯದಲ್ಲಿ ತೊಡಗಿದ ಜನರಿಗೆ ಬೇಕಾಗುವ ಶಿಕ್ಷಣವು ಧರ್ಮಮಠಗಳಲ್ಲಿ ದೊರೆಯುತ್ತಿತ್ತು. ಕಾಲಕ್ರಮದಿಂದ ಇತರ ವಿಷಯಗಳ ಶಿಕ್ಷಣಕ್ಕೋಸುಗ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟುವು. ಪಶ್ಚಿಮಯುರೋಪದಲ್ಲಿ ಪುರಾತನವೂ ಪ್ರಸಿದ್ಧವೂ ಆದ ವಿಶ್ವವಿದ್ಯಾಲಯಗಳು ರೋಮ ಮತ್ತು ಪ್ಯಾರೀಸ ನಗರಗಳಲ್ಲಿ ಇದ್ದುವು; ಈ ಸ್ಥಳಗಳಿಗೆ ಶಿಕ್ಷಣವನ್ನು ಪಡೆಯಲು ಇಂಗ್ಲಂಡಿನಿಂದಲೂ ವಿದ್ಯಾರ್ಥಿಗಳು ಹೋಗುತ್ತಿದ್ದರು. ೧೨ನೆಯ ಶತಕದಲ್ಲಿ ಇಂಗ್ಲಂಡಿನಲ್ಲಿಯೂ ಆಕ್ಸಫರ್ಡ ಎಂಬಲ್ಲಿ ವಿಶ್ವವಿದ್ಯಾಲಯವು ಸ್ಥಾಪಿಸಲ್ಪಟ್ಟಿತು. ಮುಂದೆ ಕೆಂಬ್ರಿಜ ಎಂಬಲ್ಲಿಯೂ ಇನ್ನೊಂದು ವಿಶ್ವವಿದ್ಯಾಲಯವು ಆಯಿತು. ಈ ವಿಶ್ವವಿದ್ಯಾಲಯಗಳಿಗೆ ಪೋಪನ ಮತ್ತು ರಾಜನ ಮಾನ್ಯತೆ ಇದ್ದಿತು. ಇವುಗಳಲ್ಲಿ ಧರ್ಮಶಾಸ್ತ್ರದ, ತತ್ವಜ್ಞಾನದ, ಕಾಯ್ದೆಯ ಮತ್ತು ವೈದ್ಯಕದ ಶಿಕ್ಷಣವು ದೊರೆಯುತ್ತಿತ್ತು. ಸಿರಿವಂತರೂ ಬಡವರೂ ಇಲ್ಲಿಗೆ ಶಿಕ್ಷಣವನ್ನು ಪಡೆಯಲು ಬರುತ್ತಿದ್ದರು. ಇಲ್ಲಿಯ ಶಿಕ್ಷಣವು ಪೂರ್ಣವಾದ ಬಳಿಕ ಧಾರ್ಮಿಕ ಕ್ಷೇತ್ರದಲ್ಲಿ ಬಿಶಪ್, ಆರ್ಚಬಿಶಪ್, ಕಾರ್ಡಿನಲ ಮತ್ತು ಪೋಪ ಈ ಪದವಿಗಳನ್ನು ಪಡೆಯಲು ಅಥವಾ ರಾಜನ ಮಂತ್ರಿ ಮತ್ತು ಪ್ರಧಾನನಾಗಲು ಅನುಕೂಲವಾಗುತ್ತಿತ್ತು.

ಸರದಾರರು ತಮ್ಮ ಮಕ್ಕಳನ್ನು ಶಿಕ್ಷಣಾರ್ಥವಾಗಿ ಇತರ ಸರದಾರರ ಬಳಿಗೆ ಚಿಕ್ಕಂದಿನಲ್ಲಿ, ೮—೧೦ ವರ್ಷದವರಿರುವಾಗಲೇ, ಕಳಿಸುತ್ತಿದ್ದರು. ಪರಸ್ಥಳಗಳಿಗೆ ಹೋಗುವುದರಿಂದ ಅವರಲ್ಲಿ ಸಮಯಸೂಚಕತೆ, ದಿಟ್ಟತನ, ಸ್ವಾವಲಂಬನ ಈ ಮೊದಲಾದ ಸದ್ಗುಣಗಳು ಸ್ವಾಭಾವಿಕವಾಗಿ ಬರುತ್ತಿದ್ದುವು. ಅಲ್ಲಿ ಅವರಿಗೆ ಸ್ವಲ್ಪ ಪುಸ್ತಕ ವಿದ್ಯೆ, ಯುದ್ಧಕಲೆ, ಕುದುರೆಯೇರುವುದು, ಶಿಷ್ಟಾಚಾರವು ಮೊದಲಾದುದರ ಶಿಕ್ಷಣವು ದೊರೆಯುತ್ತಿತ್ತು. ಎಲ್ಲ ಶಿಕ್ಷಣವು ಪೂರ್ಣವಾದ

ಬಳಿಕ ಅವರಿಗೆ **ಸರದಾರಕಿ** (Knighthood) ಯನ್ನು ಕೊಡುವ ಸಮಾರಂಭವು ನೆರವೇರುತ್ತಿತ್ತು.

ವ್ಯಾಪಾರೋದ್ಯಮಗಳ ಶಿಕ್ಷಣವು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಗಿಲ್ಡಗಳಿಂದ ಅಥವಾ ಸಂಘಗಳಿಂದ ದೊರೆಯುತ್ತಿದ್ದಿತು. ಮೊದಲು ಉಮೇದ್ವಾರನಾಗಿ ಕೆಲಸವನ್ನು ಕಲಿತು ಅದರಲ್ಲಿ ಪ್ರಾವೀಣ್ಯವನ್ನು ಪಡೆದ ಬಳಿಕ ಸ್ವತಂತ್ರ ರೀತಿಯಿಂದ ಉದ್ಯಮವನ್ನು ಕೈಕೊಳ್ಳಲು ಆ ಉಮೇದ್ವಾರನಿಗೆ ಅಪ್ಪಣೆ ದೊರೆಯುತ್ತಿತ್ತು.

**ಮನೆಗಳೂ ಕಟ್ಟಡಗಳೂ**—ದೊಡ್ಡ ದೊಡ್ಡ ಸರದಾರರು ಭದ್ರವಾದ ಕೋಟೆಗಳಲ್ಲಿ ವಾಸಿಸುತ್ತಿದ್ದರು. ಆದರೆ ಇಂತಹ ಕೋಟೆಗಳ ಸಂಖ್ಯೆಯನ್ನು ಕಡಿಮೆಮಾಡುವುದೇ ಅರಸರ ನೀತಿಯಾಗಿತ್ತು. ೧೩ನೆಯ ಶತಕದಿಂದ ಮುಂದೆ ಎಷ್ಟೋ ಪುರಾತನ ಕೋಟೆಗಳು ನಾಶಮಾಡಲ್ಪಟ್ಟುವು. ಆ ಬಳಿಕ ಸರದಾರರು ತಮ್ಮ ಭೂಮಿಗಳಲ್ಲಿ ದೊಡ್ಡ ಮನೆಗಳನ್ನು ಕಟ್ಟಿಸಿಕೊಂಡು ಇರತೊಡಗಿದರು. ಸಾಮಾನ್ಯ ಜನರ ಮನೆಗಳು ಕಟ್ಟಿಗೆಯವೂ, ಮಣ್ಣಿನವೂ ಆಗಿದ್ದುವು. ಚರ್ಚುಗಳ ಮತ್ತು ಧರ್ಮಮಠಗಳ ಕಟ್ಟಡಗಳು ಪ್ರಶಸ್ತವಾಗಿಯೂ ಭವ್ಯವಾಗಿಯೂ ಇದ್ದುವು. ಊರಲ್ಲಿಯ ಮಾರ್ಗಗಳು ಕಿರಿಯವಾಗಿದ್ದುವು. ಅವುಗಳಲ್ಲಿ ಸ್ವಚ್ಛತೆ ಇರುತ್ತಿರಲಿಲ್ಲ. ಮಾರ್ಗಗಳನ್ನು ಉಡುಗುವುದೆಂಬುದು ಆಗ ಬಹುಶಃ ಗೊತ್ತಿರಲಿಲ್ಲ. ಒಳಿತಾಗಿ ಮಳೆಯಾದಾಗ ಮಾತ್ರ ಅಲ್ಲಿಯ ಹೊಲಸು ತೊಳೆದು ಹೋಗುತ್ತಿತ್ತು.

**ಮನೋರಂಜನೆಯೂ ಉಡುಪೂ**—ರಾಜರಿಗೂ ಸರದಾರರಿಗೂ ಬೇಟೆಯಾಡುವುದು ಮತ್ತು ಪಕ್ಷಿಗಳನ್ನು ಹಿಡಿವುದು ಮನೋರಂಜನೆಯ ಸಾಧನಗಳಾಗಿದ್ದುವು. ರಾಜರು ಬೇಟೆಗೋಸುಗ ದೊಡ್ಡದೊಡ್ಡ ಅರಣ್ಯಗಳನ್ನು ಕಾದಿಡುತ್ತಿದ್ದರು. ಅಲ್ಲಿ ಕೆಳಗಿನ ವರ್ಗಗಳ ಜನರಿಗೆ ಬೇಟೆಯಾಡಲು ಪ್ರತಿಬಂಧವಿರುತ್ತಿತ್ತು. ಸರದಾರರಿಗೆ **"ಟೂರ್ನಮೆಂಟ್ಸ"** (**ಕ್ರೀಡಾ ಸತ್ರಗಳು**) ಇನ್ನೊಂದು ಬಗೆಯ ಮನೋರಂಜನೆಯ ಸಾಧನವಾಗಿದ್ದುವು. ಮಧ್ಯಯುಗದಲ್ಲಿ ಯುದ್ಧಕಲೆ, ಶಿಷ್ಟಾಚಾರ, ಮತ್ತು ಸ್ತ್ರೀದಾಕ್ಷಿಣ್ಯ ಇವಕ್ಕೆ ಮಹತ್ವವಿದ್ದಿತು. ಆದುದರಿಂದ ಟೂರ್ನಮೆಂಟುಗಳಲ್ಲಿ ಭಾಗವನ್ನು ವಹಿಸಿ ಹೆಸರನ್ನು ಪಡೆಯಬೇಕೆಂದು ಸರದಾರ ಮನೆತನದಲ್ಲಿಯ ಪ್ರತಿಯೊಬ್ಬ ಸಾಹಸಿಯಾದ ತರುಣನಿಗೆ ಮಹತ್ವಾಕಾಂಕ್ಷೆಯಿರುತ್ತಿತ್ತು. ಎತ್ತುಗಳ ಮತ್ತು ನಾಯಿಗಳ ಕಾದಾಟವು, ನೃತ್ಯವು ಮತ್ತು ಗುರಿ ಹೊಡೆವುದು ಇವು ಸಾಮಾನ್ಯಜನರ ಮನೋರಂಜನೆಯ ಸಾಧನಗಳಾಗಿದ್ದುವು.

ಸರದಾರ ಜನರು ಉಣ್ಣೆಯ ಮತ್ತು ರೇಶ್ಮೆಯ ವಸ್ತ್ರಗಳನ್ನು ಧರಿಸುತ್ತಿದ್ದರು. ಯುದ್ಧಕಾಲದಲ್ಲಿ ಅವರು ಚಿಲಕತ್ತನ್ನೂ ಶಿರಸ್ತ್ರಾಣವನ್ನೂ ಉಪಯೋಗಿಸುತ್ತಿದ್ದರು. ಸಾಮಾನ್ಯ ಜನರ ಬಟ್ಟೆಗಳು ಉರುಟಾಗಿರುತ್ತಿದ್ದುವು. ಚಳಿಯನ್ನು ನಿವಾರಿಸಲು ಅವರು ಉಣ್ಣೆಯ ಬಟ್ಟೆಗಳನ್ನು ಉಪಯೋಗಿಸುತ್ತಿದ್ದರು ಮತ್ತು ಮೊಣಕಾಲುಗಳ ವರೆಗೆ ಬರುವ ನಿಲುವಂಗಿಯನ್ನು ಅವರು ತೊಡುತ್ತಿದ್ದರು.

## ೮. ಕ್ರೈಸ್ತಧರ್ಮದ ಸ್ಥಾಪನೆಯೂ ಇಂಗ್ಲಂಡಿನಲ್ಲಿಯ ಧಾರ್ಮಿಕ ವ್ಯವಸ್ಥೆಯೂ

**ಕ್ರೈಸ್ತಧರ್ಮದ ಸಂಸ್ಥಾಪಕನಾದ ಯೇಸುಕ್ರಿಸ್ತನು** – ಯೇಸುಕ್ರಿಸ್ತನು (Jesus Christ) ಕ್ರೈಸ್ತಧರ್ಮದ ಸಂಸ್ಥಾಪಕನು. ಅವನು ಇ. ಸ. ಪೂ. ೪ನೆಯ ವರ್ಷದಲ್ಲಿ ಪ್ಯಾಲೆಸ್ಟಾಯಿನ ಪ್ರಾಂತದಲ್ಲಿಯ **ಬೆಥಲೆಹೆಮ್** ಎಂಬ ಹಳ್ಳಿಯಲ್ಲಿ ಹುಟ್ಟಿದನು. ಅವನ ತಂದೆತಾಯಿಗಳು **ಜ್ಯೂ** (ಯೆಹುದಿ) ಧರ್ಮದವರಾಗಿದ್ದರು. ಯೇಸುಕ್ರಿಸ್ತನಿಗೆ ಬಾಲ್ಯದಲ್ಲಿಯೇ ಜ್ಯೂ ಧರ್ಮದ ದೀಕ್ಷೆ ದೊರೆತಿತ್ತು. ಆದರೆ ಜ್ಯೂ ಧರ್ಮದಲ್ಲಿಯ ಕರ್ಮಕಾಂಡವು, ಧರ್ಮಾಧಿಕಾರಿಗಳ ಸ್ವಾರ್ಥಪರಾಯಣತೆ ಮತ್ತು ಈಶ್ವರನನ್ನು ಸಂತೋಷಗೊಳಿಸಲು ಕೊಡುತ್ತಿರುವ ಪಶುಬಲಿ ಮೊದಲಾದ ಮಾತುಗಳು ಅವನಿಗೆ ಅಸಹ್ಯವಾಗಿ ತೋರಿದುವು. ಅವನಿಗೆ ತನ್ನ ೩೦ನೆಯ ವರ್ಷದಲ್ಲಿ ತನಗೆ ಈಶ್ವರನ ಸಾಕ್ಷಾತ್ಕಾರವಾಗಿರುವುದೆಂದೂ ತಾನು ದೇವದೂತನಿದ್ದು ಸತ್ಯಧರ್ಮವನ್ನು ಪ್ರತಿಷ್ಠಾಪಿಸಲು ಈಶ್ವರನ ಆಜ್ಞೆ ತನಗಾಗಿರುವುದೆಂದೂ ಎನಿಸಿತು. ಆಗ ಅವನು ಜನರಿಗೆ ಉಪದೇಶ ಮಾಡಲಾರಂಭಿಸಿದನು. ಅವನ ಉಪದೇಶದ ಸಾರವು ಇಂತಿರುವುದು:– "ಈಶ್ವರನು ಒಬ್ಬನೇ ಇರುವನು. ಅವನು ಎಲ್ಲ ಜಗತ್ತನ್ನು ಪ್ರೀತಿಸುವನು. ಜನರಿಗೆ ಅವರವರ ಪಾಪಪುಣ್ಯಗಳಂತೆ ಅವನು ನ್ಯಾಯವನ್ನು ಕೊಡುವನು. ಮನುಷ್ಯರೆಲ್ಲರು ಅವನ ಮಕ್ಕಳು. ಆದುದರಿಂದ ಪ್ರತಿಯೊಬ್ಬನು ಬೇರೆಯವರೊಡನೆ ಬಂಧುಭಾವದಿಂದಲೂ ಪ್ರೇಮದಿಂದಲೂ ವರ್ತಿಸಬೇಕು. ದುಃಖಪೀಡಿತರಿಗೆ ಸಾಹಾಯ್ಯವನ್ನು ಕೊಡಬೇಕು. ಆಚರಣವನ್ನು ಶುದ್ಧವಾಗಿಟ್ಟುಕೊಳ್ಳಬೇಕು. ತನ್ನಿಂದ ಏನಾದರೂ ದುರಾಚರಣವಾದರೆ ಅದಕ್ಕೋಸ್ಕರ ಪಶ್ಚಾತ್ತಾಪ ಪಡಬೇಕು. ಮತ್ತು ಮತ್ತೆ ದುರಾಚರಣವು ಆಗದಂತೆ ಪ್ರಯತ್ನಿಸಬೇಕು. ಮೂರ್ತಿಪೂಜೆ ಈಶ್ವರನಿಗೆ ಸಮ್ಮತವಿಲ್ಲ." ಈ ಬಗೆಯಾಗಿ ಅವನು ಜನರಿಗೆ ಉಪದೇಶಿಸುತ್ತ ಪ್ಯಾಲೆಸ್ಟಾಯಿನ್

ಪ್ರಾಂತದ ರಾಜಧಾನಿಯಾದ ಜೆರೂಸಲೇಮಿಗೆ ಹೋಗಿ ಅಲ್ಲಿಯೂ ಉಪದೇಶವನ್ನು ಮಾಡತೊಡಗಿದನು. ಎಷ್ಟೋ ಜ್ಯೂ ಜನರು ಯೇಸುವಿನ ಶಿಷ್ಯರಾದರು. ಈ ಮಾತು ಜ್ಯೂ ಧರ್ಮೋಪದೇಶಕರಿಗೆ ಸೇರಲಿಲ್ಲ. ಅವರು ಯೇಸುಕ್ರಿಸ್ತನು ಪಾಖಂಡನೂ ನಾಸ್ತಿಕನೂ ಇರುವನು. ಅದಕ್ಕಾಗಿ ಅವನಿಗೆ ಶಿಕ್ಷೆಯಾಗಬೇಕೆಂದು ಪ್ಯಾಲೆಸ್ಟಾಯಿನಿನಲ್ಲಿಯ ಅಧಿಕಾರಿಗಳನ್ನು ಬೇಡಿಕೊಂಡರು. ಪ್ಯಾಲೆಸ್ಟಾಯಿನು ಆಗ ರೋಮನರ ವಶದಲ್ಲಿದ್ದಿತು. ಇ. ಸ. ೩೩ನೆಯ ವರ್ಷ ಅವನನ್ನು ಸಿಲುಬೆಗೇರಿಸಿ ಮೈಯಲ್ಲಿ ಮೊಳೆಗಳನ್ನು ಹೂಳಿ ಕೊಂದರು. ಆದರೆ ಯೇಸು ಪ್ರಭುವಿನ ಉಪದೇಶವನ್ನು ಅವನ ಶಿಷ್ಯರು ಮರೆಯಲಿಲ್ಲ. ಅವರು ಯೇಸುವನ್ನು "ಕ್ರಿಸ್ತ" (Christ) ಎಂದರೆ ಅವತಾರ ಪುರುಷನೆಂದು ತಿಳಿದರು. ಅವರೂ ಯೇಸುವಿನಂತೆ ಉಪದೇಶಮಾಡತೊಡಗಿದರು. ಕ್ರೈಸ್ತಧರ್ಮವು ಮೆಲ್ಲಮೆಲ್ಲನೆ ಹಬ್ಬಲಾರಂಭಿಸಿತು. ಇಂದಿಗೆ ಸುಮಾರು ೬೫ ಕೋಟಿ ಜನರು ಕ್ರೈಸ್ತಧರ್ಮದ ಅನುಯಾಯಿಗಳಾಗಿರುವರು. ಯೇಸುಕ್ರಿಸ್ತನು ಕ್ರಾಸಿನ ಮೇಲೆ ಕೊಲ್ಲಲ್ಪಟ್ಟನಾದುದರಿಂದ ಕ್ರಾಸು ಕ್ರೈಸ್ತಧರ್ಮದ ಪವಿತ್ರ ಚಿಹ್ನವಾಗಿರುವುದು. ಕ್ರಿಸ್‌ಮಸ್ ಹಬ್ಬವು ಅವನ ಜನ್ಮದಿನವಾದ ಡಿಶೆಂಬರ ೨೫ರಿಂದ ಪ್ರಾರಂಭವಾಗುತ್ತದೆ. ಅವನ ಜನ್ಮದ ನಾಲ್ಕನೆಯ ವರ್ಷದಿಂದ ವರ್ಷಗಳನ್ನು ಎಣಿಸುವ ಪದ್ಧತಿ ಮುಂದೆ ಪ್ರಾರಂಭವಾಯಿತು. ಈ ಪದ್ಧತಿಗೆ ಇಸವಿ ಸನ್ ಎಂದು ಹೆಸರು.

**ಬೈಬಲ್**—ಬೈಬಲು ಕ್ರೈಸ್ತಧರ್ಮದವರ ಪವಿತ್ರ ಗ್ರಂಥವು. ಅದರಲ್ಲಿ ಎರಡು ಭಾಗಗಳಿರುವುವು. ಮೊದಲನೆಯ ಭಾಗಕ್ಕೆ ಹಳೆಯ ಕರಾರವೆಂದು (Old Testament) ಮತ್ತು ಎರಡನೆಯ ಭಾಗಕ್ಕೆ ಹೊಸ ಕರಾರವೆಂದು (New Testament) ಹೆಸರು. ಹಳೆಯ ಕರಾರದಲ್ಲಿ ಸೃಷ್ಟಿಯ ಉತ್ಪತ್ತಿಯಿಂದ ಮುಂದಿನ ವೃತ್ತಾಂತವೂ ಜ್ಯೂ ಜನರ ಇತಿಹಾಸವೂ ಇರುವುದು. ಇದರಲ್ಲಿ ಒಬ್ಬ ಅವತಾರ ಪುರುಷನು ಜಗತ್ತನ್ನು ಉದ್ಧರಿಸಲು ಮತ್ತು ಜ್ಯೂ ಜನರಿಗೆ ಪೃಥ್ವಿಯ ಸಾಮ್ರಾಜ್ಯವನ್ನು ಒದಗಿಸಿಕೊಡಲು ಬರುವನೆಂಬ ಮಾತು ಸೂಚಿಸಲ್ಪಟ್ಟಿರುವುದು. ಹೊಸ ಕರಾರದಲ್ಲಿ ಜಗತ್ತನ್ನು ಉದ್ಧರಿಸಲು ಬರುವ ಅವತಾರ ಪುರುಷನು ಯೇಸುಕ್ರಿಸ್ತನೇ ಆಗಿರುವನೆಂದು ಹೇಳಲ್ಪಟ್ಟಿರುವುದು. ಯೇಸುಕ್ರಿಸ್ತನು ಮಾಡಿದ ಉಪದೇಶವು ಮತ್ತು ಅವನ ವಚನಗಳ ಮತ್ತು ಮತಗಳ ಸಂಗ್ರಹವು ಇದರಲ್ಲಿ ಇರುತ್ತವೆ. ಬೈಬಲು ಮೊದಲು ಹಿಬ್ರು ಭಾಷೆಯಲ್ಲಿ ಬರೆಯಲ್ಪಟ್ಟಿತ್ತು. ಮುಂದೆ ಗ್ರೀಕರು ಮತ್ತು ರೋಮನರು ಅದನ್ನು ಗ್ರೀಕ ಮತ್ತು ಲ್ಯಾಟಿನ ಭಾಷೆಗಳಿಗೆ ಪರಿವರ್ತಿಸಿದರು.

**ಕ್ರೈಸ್ತಧರ್ಮದ ಪ್ರಸಾರವು**– ಕ್ರಿಸ್ತನ ಮರಣದ ತರುವಾಯದಲ್ಲಿ ಅವನ ಪ್ರಮುಖ ಶಿಷ್ಯನಾದ **ಪಾಲ** ಎಂಬವನು ಜೆರೂಸಲೇಮ, ಅಂಟಿಯಾ ಮೊದಲಾದ ಸ್ಥಳಗಳಿಗೆ ಹೋಗಿ ಕ್ರೈಸ್ತಧರ್ಮವನ್ನು ಉಪದೇಶಿಸಿದನು. ಮುಂದೆ ರೋಮನ ಸಾಮ್ರಾಜ್ಯದಲ್ಲಿ ಈ ಧರ್ಮದ ಪ್ರಸಾರವಾಗಲು ಆರಂಭವಾಯ್ತು. ಆದರೆ ಈ ಧರ್ಮಕ್ಕೆ ಆ ಕಾಲದ ರೋಮನ ಬಾದಶಹನ ಮಾನ್ಯತೆ ಇರಲಿಲ್ಲ. ಆದುದರಿಂದ ಪಾಲನು ಪಾಖಂಡ ಮತ್ತು ನಾಸ್ತಿಕ ಮತದ ಪ್ರಸಾರಕನೆಂಬ ಆರೋಪದಿಂದ ಹಿಡಿಯಲ್ಪಟ್ಟು ರೋಮದಲ್ಲಿ ಕೊಲ್ಲಲ್ಪಟ್ಟನು (ಸು. ಇ. ಸ. ೬೫). ಆದರೂ ರೋಮನ ಸಾಮ್ರಾಜ್ಯದಲ್ಲಿ ಕ್ರೈಸ್ತಧರ್ಮದ ಪ್ರಸಾರಕ್ಕೆ ತಡೆಯಾಗಲಿಲ್ಲ. ಕೊನೆಗೆ ಇ. ಸ. ೩೧೩ರಲ್ಲಿ **ಕಾನ್ಸ್ಟಂಟಾಯಿನ್** ಎಂಬ ರೋಮನ ಬಾದಶಹನು ಕ್ರೈಸ್ತಧರ್ಮಕ್ಕೆ ಮಾನ್ಯತೆಯನ್ನಿತ್ತು ತಾನೂ ಕ್ರೈಸ್ತನಾದನು. ಅದರಿಂದ ರೋಮನ ಸಾಮ್ರಾಜ್ಯದಲ್ಲಿ ಕ್ರೈಸ್ತಧರ್ಮವು ವೇಗದಿಂದ ಹಬ್ಬಿತು. ಮತ್ತು ಜೆರೂಸಲೇಮ, ರೋಮ, ಕಾನ್‌ಸ್ಟ್ಯಾಂಟಿನೋಪಲ, ಅಂಟಿಯಾ, ಅಲೆಕ್‌ಝಾಂಡ್ರಿಯಾ ಈ ಸ್ಥಳಗಳಲ್ಲಿ ಕ್ರೈಸ್ತಧರ್ಮದ ಧರ್ಮಪೀಠಗಳು ಸ್ಥಾಪಿಸಲ್ಪಟ್ಟುವು. **ರೋಮ** ಮತ್ತು **ಕಾನ್‌ಸ್ಟ್ಯಾಂಟಿನೋಪಲ** ಇವು ರಾಜಧಾನಿಗಳ ಸ್ಥಳಗಳಾಗಿದ್ದುದರಿಂದ ಅಲ್ಲಿಯ ಧರ್ಮಪೀಠಗಳಿಗೆ ವಿಶೇಷವಾದ ಮಹತ್ವವು ಪ್ರಾಪ್ತವಾಯಿತು. ಇ. ಸ. ೪೭೬ರಲ್ಲಿ ಪಶ್ಚಿಮ ರೋಮನ್ ಸಾಮ್ರಾಜ್ಯವು ನಾಶವಾಗಿ ಅಲ್ಲಿ ವನ್ಯಜನರ ಗುಂಪುಗಳು ಬೇರೆ ಬೇರೆ ರಾಜ್ಯಗಳನ್ನು ಸ್ಥಾಪಿಸಿದುವು. ಈ ಜನರಲ್ಲಿ ರೋಮದಲ್ಲಿಯ ಧರ್ಮಪೀಠದವರು ಕ್ರೈಸ್ತಧರ್ಮದ ಪ್ರಸಾರವನ್ನು ಮಾಡಿದರು. ಆದುದರಿಂದ **ರೋಮದ** ಬಿಶಪನಿಗೆ (ಧರ್ಮಾಧಿಕಾರಿಗೆ) **ಪೋಪ** (ತಂದೆ) ಎಂಬ ಹೆಸರು ಬಂದಿತು, ಮತ್ತು ಅವನ ಮಹತ್ವವು ಬೆಳೆದು ಅವನು ಕ್ರೈಸ್ತ **ಜಗದ್ಗುರು** ಎಂದು ಭಾವಿಸಲ್ಪಟ್ಟನು. ಇ. ಸ. ೮೦೦ರಲ್ಲಿ ಲಿಯೋ ಎಂಬ ಪೋಪನು ಫ್ರ್ಯಾಂಕಜನರ ಪರಾಕ್ರಮಿಯಾದ **ಚಾರ್ಲಮೇನ** ಎಂಬ ಅರಸನಿಗೆ ರೋಮ ನಗರದಲ್ಲಿ **ರೋಮನ್ ಬಾದಶಹ**ನೆಂದು ರಾಜ್ಯಾಭಿಷೇಕವನ್ನು ಮಾಡಿದನು. ಈ ಸಂಗತಿಯಿಂದ ರೋಮದ ಪೋಪನ ಮಹತ್ವವು ಮತ್ತಿಷ್ಟು ಬೆಳೆಯಿತು. ರಾಜನಿಗೆ ರಾಜಪದವನ್ನು ಕೊಡುವ ಮತ್ತು ಅವನನ್ನು ಪದಚ್ಯುತನಾಗಿ ಮಾಡುವ ಅಧಿಕಾರವು ಪೋಪನಿಗೆ ಇರುವುದೆಂದೂ ರಾಜಸತ್ತೆಗಿಂತ ಧಾರ್ಮಿಕಸತ್ತೆ ಹೆಚ್ಚಿನದೆಂದೂ ಅಂದಿನಿಂದ ಜನರ ತಿಳಿವಳಿಕೆಯಾಯಿತು.



**ಇಂಗ್ಲಂಡಿನಲ್ಲಿ ಕ್ರೈಸ್ತಧರ್ಮದ ಪ್ರಸಾರವು**– ರೋಮನ್ ಜನರು ಇಂಗ್ಲಂಡಿನಲ್ಲಿಯ ಮೊದಲಿನ ಡ್ರುಯಿಡ ಧರ್ಮಾಧಿಕಾರಿಗಳ ಧರ್ಮವನ್ನು ನಾಶ

ಗೊಳಿಸಿ ಕ್ರೈಸ್ತಧರ್ಮದ ಪ್ರಸಾರವನ್ನು ಮಾಡತೊಡಗಿದರು. ಆದರೆ ಇ. ಸ. ೪೧೦ರಲ್ಲಿ ರೋಮನ್ ಸೈನ್ಯವು ಇಂಗ್ಲಂಡಿನಿಂದ ಹೊರಟುಹೋದ ಬಳಿಕ ಕೆಲ ಕಾಲದ ಮೇಲೆ ಅಂಗಲ್ಸ ಮತ್ತು ಸ್ಯಾಕ್ಸನ್ಸ ಮೊದಲಾದ ಜನರು ಅಲ್ಲಿ ಬಂದರು. ಇವರು ಮೂರ್ತಿಪೂಜಕರೂ ಕ್ರೈಸ್ತಧರ್ಮದ ದ್ವೇಷಿಗಳೂ ಆಗಿದ್ದರು. ಇದರಿಂದ ಇಂಗ್ಲಂಡಿನಲ್ಲಿಯ ಕ್ರೈಸ್ತಧರ್ಮವು ಮೃತಪ್ರಾಯವಾಯಿತು. ಆದರೆ ಇಂಗ್ಲಂಡಿನಲ್ಲಿಯ **ಕೆಂಟ**ದ ಅರಸನಾದ **ಎಥೆಲಬರ್ಟ**ನ ವಿನಂತಿಯನ್ನು ಮನ್ನಿಸಿ **ಪೋಪ ಗ್ರೇಗರಿ** ಇವನು ಇ. ಸ. ೫೯೭ರಲ್ಲಿ **ಆಗಸ್ಟಾಯಿನ** ಎಂಬ ಸಾಧುವಿನೊಡನೆ ನಾಲ್ವತ್ತು ಧರ್ಮೋಪದೇಶಕರನ್ನು ಇಂಗ್ಲಂಡಿಗೆ ಕಳುಹಿದನು. ಈ ಧರ್ಮೋಪದೇಶಕರ ಪ್ರಯತ್ನದಿಂದ ಇಂಗ್ಲಂಡಿನಲ್ಲಿ ಮತ್ತೆ ಕ್ರೈಸ್ತಧರ್ಮದ ಪ್ರಸಾರವಾಯಿತು. ಮುಂದೆ ಇನ್ನೂರು ವರ್ಷಗಳಲ್ಲಿ ಎಲ್ಲ ಜನರು ಕ್ರೈಸ್ತಧರ್ಮಿಗಳಾದರು.

**ಇಂಗ್ಲಂಡಿನಲ್ಲಿ ಕ್ರೈಸ್ತಧರ್ಮದ ವ್ಯವಸ್ಥೆ**—ಇಂಗ್ಲಂಡಿನಲ್ಲಿ **ಕ್ಯಾಂಟರ್ಬರಿ** ಮತ್ತು **ಯಾರ್ಕ** ಇಲ್ಲಿಯ ಬಿಶಪರು (ಧರ್ಮಾಧಿಕಾರಿಗಳು) ಪ್ರಮುಖರಾಗಿದ್ದರು ಅವರು **ಆರ್ಚಬಿಶಪ**ರೆಂದು ಕರೆಯಲ್ಪಡುತ್ತಿದ್ದರು. ಇವರಿಬ್ಬರಲ್ಲಿ ಕ್ಯಾಂಟರ್ಬರಿಯ ಬಿಶಪನು ಹೆಚ್ಚಿನವನು. ಅವನೇ ರಾಜ್ಯಾಭಿಷೇಕದ ಸಮಯದಲ್ಲಿ ಧಾರ್ಮಿಕ ವಿಧಿಯನ್ನು ಮಾಡುವನು. ಇಂಗ್ಲಂಡಿನ ಧಾರ್ಮಿಕ ವ್ಯವಸ್ಥೆಯೂ ಅವನ ನೇತೃತ್ವದಲ್ಲಿ ನಡೆಯುತ್ತದೆ. ಇಂಗ್ಲಂಡಿನಲ್ಲಿ ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ **ಚರ್ಚು**ಗಳು (ಪ್ರಾರ್ಥನಾ ಮಂದಿರಗಳು) ಇರುತ್ತವೆ. ಅವುಗಳಲ್ಲಿ ಕ್ಲರ್ಜಿ (Clergy) ಎಂಬ ಧರ್ಮಾಧಿಕಾರಿಗಳು ಕೆಲಸವನ್ನು ಮಾಡುವರು. ಈ ಧರ್ಮಾಧಿಕಾರಿಗಳು ತಮ್ಮ ತಮ್ಮ ಊರುಗಳ ಧಾರ್ಮಿಕ ವ್ಯವಸ್ಥೆಯನ್ನು ನೋಡುವರು. ಪ್ರಾರ್ಥನೆಯನ್ನು ನಡೆಯಿಸುವುದು, ಧರ್ಮೋಪದೇಶವನ್ನು ಮಾಡುವುದು, ಪುರಾಣಗಳನ್ನು ಹೇಳುವುದು, ಕ್ರೈಸ್ತಧರ್ಮದ ದೀಕ್ಷೆಯನ್ನು ಕೊಡುವುದು, ಲಗ್ನವನ್ನು ಮಾಡಿಸುವುದು, ಅಂತ್ಯವಿಧಿಯನ್ನು ಮಾಡಿಸುವುದು ಇವೇ ಮೊದಲಾದ ಧಾರ್ಮಿಕ ಕಾರ್ಯಗಳನ್ನು ಈ ಕ್ಲರ್ಜಿಗಳು ಮಾಡುವರು. ಈ ಧರ್ಮಾಧಿಕಾರಿಗಳಿಗೆ ಮತ್ತು ಅವರ ಪ್ರಾರ್ಥನಾಮಂದಿರಗಳಿಗೆ ಊರಿನ ಉತ್ಪನ್ನದ ಒಂದು ಕ್ಲಪ್ತವಾದ ಭಾಗವು ದೊರೆಯುತ್ತದೆ. ಹಿಂದಿನ ಕಾಲದಲ್ಲಿ ಅಲ್ಲಲ್ಲಿ ಸಾಧುಗಳು, ಸಾಧ್ವಿಗಳು **ಧರ್ಮಮಠಗಳನ್ನು** (Monasteries) ಸ್ಥಾಪಿಸಿದ್ದರು. ಧಾರ್ಮಿಕ ಕಾರ್ಯಗಳಲ್ಲಿ ತೊಡಗಿದ ಆರ್ಚಬಿಶಪ, ಬಿಶಪ, ಸಾಧುಸಾಧ್ವಿ ಇವರಿಗೆ ಲಗ್ನವನ್ನು ಮಾಡಿಕೊಳ್ಳಲು ಪ್ರತಿಬಂಧವಿದ್ದಿತು. ಅವರು ಬ್ರಹ್ಮಚರ್ಯ ವ್ರತದಿಂದ ಇರಬೇಕಾಗುತ್ತಿತ್ತು. ಧರ್ಮಮಠಗಳಲ್ಲಿ ಧರ್ಮೋಪ

ದೇಶವನ್ನು ಮಾಡುವುದು, ಶಿಕ್ಷಣವನ್ನು ಕೊಡುವುದು, ಬೈಬಲ್ ಮತ್ತು ಇತರ ಪುಸ್ತಕಗಳ ಹಸ್ತಲಿಖಿತ ಪ್ರತಿಗಳನ್ನು ಮಾಡುವುದು, ಔಷಧೋಪಚಾರವನ್ನು ಮಾಡುವುದು, ಅನ್ನಛತ್ರಗಳನ್ನು ನಡೆಯಿಸುವುದು, ಅನಾಥರಿಗೂ ನಿರಾಶ್ರಿತರಿಗೂ ಅನ್ನವನ್ನು ಕೊಡುವುದು ಮೊದಲಾದ ಧಾರ್ಮಿಕ, ಸಮಾಜೋನ್ನತಿಯ, ಶಿಕ್ಷಣದ ಮತ್ತು ಭೂತದಯೆಯ ಕೆಲಸಗಳಾಗುತ್ತಿದ್ದುವು. ಆದುದರಿಂದ ಈ ಧರ್ಮಮಠಗಳಿಗೆ ಭಾವಿಕರೂ ಧರ್ಮಶೀಲರೂ ಆದ ಜನರಿಂದ ಕಾಣ್ಕೆಗಳು, ಮತ್ತು ಭೂಮಿಗಳು ದೊರೆಯುತ್ತಿದ್ದುವು. ಧರ್ಮಮಠಗಳಲ್ಲಿ ವಾಸಿಸುವ ಸಾಧುಗಳು ಆಗಾಗ ರೋಮ, ಪ್ಯಾರೀಸ ಮೊದಲಾದ ಸ್ಥಳಗಳಿಗೆ ಹೋಗುತ್ತಿದ್ದರು. ಈ ಪಟ್ಟಣಗಳು ಆಗ ವಿದ್ಯೆಯಲ್ಲಿಯೂ, ಜ್ಞಾನದಲ್ಲಿಯೂ ಮುಂದುವರಿದಿದ್ದುವು. ಅಲ್ಲಿ ಶಿಕ್ಷಣವನ್ನು ಪಡೆದು ಬಂದ ಧರ್ಮಾಧಿಕಾರಿಗಳ ಸಹವಾಸದಿಂದ ಇಂಗ್ಲಂಡಿನ ಜನರಲ್ಲಿ ಜ್ಞಾನವೃದ್ಧಿಯಾಗಲು ಅನುಕೂಲವಾಗುತ್ತಿತ್ತು.

**ಧರ್ಮಜಾಗೃತಿಯ ಕಾರ್ಯಗಳು**—ಇಂಗ್ಲಂಡಿನಲ್ಲಿಯ ಧಾರ್ಮಿಕ ವ್ಯವಸ್ಥೆ ಮೇಲೆ ಹೇಳಿದಂತೆ ಇದ್ದಿತು. ಆಗ ಪ್ರಾರ್ಥನಾಮಂದಿರಗಳೂ ಧರ್ಮಮಠಗಳೂ ಧರ್ಮೋನ್ನತಿಯ ಮತ್ತು ಸಮಾಜ-ಹಿತದ ಕೆಲಸಗಳನ್ನು ಮಾಡುತ್ತಿದ್ದುವು. ಆದರೆ ಎಲ್ಲ ಧರ್ಮಾಧಿಕಾರಿಗಳು ಮತ್ತು ಮಠಗಳಲ್ಲಿ ವಾಸಿಸುವ ಎಲ್ಲ ಸಾಧುಗಳು ಸದಾಚರಣೆಗಳಿರಲಿಲ್ಲ. ಅಲ್ಲಲ್ಲಿ ದುರಾಚಾರವು ತಲೆಯೆತ್ತುತ್ತಿತ್ತು. ಮೊದಮೊದಲು ಪ್ರಾರ್ಥನಾಮಂದಿರಗಳಲ್ಲಿ ಮತ್ತು ಧರ್ಮಮಠಗಳಲ್ಲಿ ಭಾವಿಕ ಮತ್ತು ಧರ್ಮಶೀಲ ಜನರಿಂದ ಬಂದ ಹಣದ ಉಪಯೋಗವು ಜನಹಿತದ ಕಾರ್ಯಗಳಿಗೋಸುಗ ಆಗುತ್ತಿತ್ತು. ಆದರೆ ಮುಂದೆ ಮುಂದೆ ಧರ್ಮಾಧಿಕಾರಿಗಳ ಮತ್ತು ಸಾಧುಗಳ ಆಚರಣವು ಕೆಟ್ಟಿತು. ಇದರಿಂದ ಹಣವು ಸತ್ಕಾರ್ಯಕ್ಕೆ ವಿನಿಯೋಗಿಸಲ್ಪಡದೆ ದುರಾಚರಣೆಗಳ ವಿಲಾಸಕ್ಕೆ ಉಪಯೋಗಿಸಲ್ಪಡಲಾರಂಭಿಸಿತು. ಜನರಲ್ಲಿ ಶಿಕ್ಷಣದ ಪ್ರಸಾರವು ಅಲ್ಪ ಪ್ರಮಾಣದಲ್ಲಿದ್ದಿತು. ಓದು ಬರೆಹಗಳನ್ನು ಬಲ್ಲವರ ಸಂಖ್ಯೆ ಅಲ್ಪವಾಗಿತ್ತು. ಇದಲ್ಲದೆ ಕ್ರೈಸ್ತಧರ್ಮದವರ ಪವಿತ್ರ ಗ್ರಂಥವಾದ ಬೈಬಲು ಲ್ಯಾಟಿನ ಮತ್ತು ಗ್ರೀಕ ಭಾಷೆಗಳಲ್ಲಿದ್ದುದರಿಂದ ಅವುಗಳಲ್ಲಿ ಏನಿದೆಂದು ತಿಳಿದುಕೊಳ್ಳಲು ಜನರಿಗೆ ಸಾಮರ್ಥ್ಯವಿದ್ದಿಲ್ಲ. ಧರ್ಮಾಧಿಕಾರಿಗಳು ಹೇಳಿದುದನ್ನು ಅವರು ನಂಬಬೇಕಾಗುತ್ತಿತ್ತು. ಎಷ್ಟೊ ವಿಚಾರವಂತರು ಧರ್ಮಾಧಿಕಾರಿಗಳ ದುರ್ವರ್ತನವನ್ನು ಖಂಡಿಸಿ ಹೊಸ ಪಂಥಗಳ ಪ್ರಸಾರವನ್ನು ಮಾಡಿ ಜನರ ಮುಂದೆ ಉಚ್ಚವಾದ ಧ್ಯೇಯವನ್ನು ಇಡುತ್ತಿದ್ದರು. ಇಂತಹ ಸಜ್ಜನರಲ್ಲಿ ಫ್ರ್ಯಾನ್ಸಿಸನೆಂಬ ಇಟಲಿದೇಶದ ಸಾಧು ಒಬ್ಬ

ನಿದ್ದನು. ಅವನು ೧೨೦೯ರಲ್ಲಿ ಒಂದು ಪಂಥವನ್ನು ಸ್ಥಾಪಿಸಿದನು. ಈ ಪಂಥದ ಜನರು ವಿಲಾಸವನ್ನು ಸಂಪೂರ್ಣವಾಗಿ ತ್ಯಜಿಸಿ ಅನಾಥರ ಮತ್ತು ಅನಾಶ್ರಿತರ ಉದ್ಧಾರವನ್ನು ಮಾಡಲು ತಮ್ಮ ಆಯುಷ್ಯವನ್ನು ಸವೆಯಿಸುತ್ತಿದ್ದರು. ಮುಂದೆ ೧೩ನೆಯ ಶತಕದಲ್ಲಿ ಡಾಮಿನಿಕ್ ಎಂಬ ಸಾಧು ಸ್ಪೇನದಲ್ಲಿ ಒಂದು ಪಂಥವನ್ನು ಸ್ಥಾಪಿಸಿದನು. ಅವನು ಪುರಾಣ ಪ್ರವಚನಗಳನ್ನು ಹೇಳಿಯೂ, ಧರ್ಮೋಪದೇಶ ವನ್ನು ಮಾಡಿಯೂ ಜನರಲ್ಲಿ ಧಾರ್ಮಿಕ ವೃತ್ತಿಯನ್ನು ಜಾಗೃತಗೊಳಿಸಲು ಯತ್ನಿಸಿದನು. ಈ ಪಂಥಗಳು ಯುರೋಪದ ಬೇರೆ ದೇಶಗಳಲ್ಲಿ ಸ್ಥಾಪಿಸಲ್ಪಟ್ಟಿ ದ್ದರೂ ಅವುಗಳ ಪ್ರಸಾರವು ಇಂಗ್ಲಂಡಿನಲ್ಲಿಯೂ ಆಗಿದ್ದಿತು. ಆರಂಭದಲ್ಲಿ ಈ ಪಂಥಗಳಿಂದ ಒಳಿತಾದ ಕೆಲಸವಾಯಿತು. ಆದರೆ ಮುಂದೆ ಇವುಗಳಲ್ಲಿ ಡಾಂಭಿಕರು ಸೇರಿದುದರಿಂದ ಅವುಗಳ ವಿಷಯದಲ್ಲಿ ಲೋಕಾದರವು ಇಲ್ಲದಾಗಿ ಅವು ನಷ್ಟವಾದುವು. ಇಂಗ್ಲಂಡಿನಲ್ಲಿಯೂ **ಜಾನ ವಿಕ್ಲಿಫನು** (೧೩೨೪—೧೩೮೪) ಬೈಬಲಿನಲ್ಲಿಯ ಧರ್ಮತತ್ವಗಳಂತೆ ಧರ್ಮಾಧಿಕಾರಿಗಳ ಆಚರಣವು ಇಲ್ಲದುದನ್ನು ಕಂಡು ಅವರ ವರ್ತನವನ್ನು ಖಂಡಿಸಿದನು. ಅವನು ಬೈಬ ಲನ್ನು ಇಂಗ್ಲಿಶ್ ಭಾಷೆಗೆ ಪರಿವರ್ತಿಸಿದನು. ಅವನಿಗೆ ಎಷ್ಟೋ ಅನುಯಾಯಿ ಗಳು ದೊರೆತರು. ಅವರ ಸಾಹಾಯ್ಯದಿಂದ ಅವನು ಜನರಲ್ಲಿ ಧರ್ಮಜಾಗೃತಿ ಯನ್ನು ಮಾಡಲು ಪ್ರಯತ್ನಿಸಿದನು. ಆದರೆ ಆಗ ಜನರಲ್ಲಿ ಜ್ಞಾನದ ಪ್ರಸಾರವು ಇಲ್ಲದುದರಿಂದ ಅವನ ಪ್ರಯತ್ನಕ್ಕೆ ಉತ್ತೇಜನವು ದೊರೆಯಲಿಲ್ಲ. ಅವನ ಮರಣದ ತರುವಾಯದಲ್ಲಿ ಅವನ ಕಾರ್ಯವು ನಿಂತಿತು. ಅವನ ಅನುಯಾಯಿಗಳನ್ನು ಅವನ ಶತ್ರುಗಳು **ಲೋಲರ್ಡ** (ವ್ಯರ್ಥವಾಗಿ ಬಡಬಡಿಸುವವರು) ಎಂದು ಕರೆ ಯುತ್ತಿದ್ದರು. ಎಷ್ಟೋ ಅನುಯಾಯಿಗಳು ನಾಸ್ತಿಕರೆಂದೂ ಪಾಖಂಡಿಗಳೆಂದೂ ಸುಡಲ್ಪಟ್ಟರು. ಆದರಿಂದ ವಿಕ್ಲಿಫನ ಮತ್ತು ಅವನ ಅನುಯಾಯಿಗಳ ಪ್ರಯತ್ನ ಗಳೆಲ್ಲವೂ ನಿಷ್ಫಲವಾದುವು. ರೋಮದ ಪೋಪನಿಗೆ ಧರ್ಮಮಠ, ಪ್ರಾರ್ಥನಾ ಮಂದಿರ ಮೊದಲಾದುವುಗಳಿಂದ ಧಾರ್ಮಿಕಕರವು ದೊರೆಯುತ್ತಿತ್ತು. ಇದಲ್ಲದೆ ಎಲ್ಲಿಯಾದರೂ ಹೊಸ ಧರ್ಮಾಧಿಕಾರಿ ನಿಯೋಜಿಸಲ್ಪಟ್ಟರೆ ಅಲ್ಲಿಯ ಮೊದಲ ನೆಯ ವರ್ಷದ ಉತ್ಪನ್ನವೂ ಕಾಣ್ಕೆಗಳ ರೂಪದಿಂದ ಧನವೂ ಅವನಿಗೆ ಹೋಗು ತ್ತಿತ್ತು. ಪೋಪನು ಧರ್ಮಾಧಿಕಾರಿಗಳ ಸ್ಥಳಗಳಲ್ಲಿ ಇಂಗ್ಲಿಶ್ ಜನರನ್ನು ನಿಯೋ ಜಿಸದೆ ಪರಕೀಯರನ್ನು ನಿಯೋಜಿಸುತ್ತಿದ್ದನು. ಇದನ್ನು ಕಂಡು ಇಂಗ್ಲಂಡಿನ ಪಾರ್ಲಿಮೆಂಟು ೧೪ನೆಯ ಶತಕದಲ್ಲಿ ಇದನ್ನು ಪ್ರತಿಬಂಧಿಸಲು ಒಂದು ಕಾಯ್ದೆ ಯನ್ನು ಮಾಡಿತು. ಇದರಿಂದ ಪೋಪನ ಕಡೆಗೆ ಹೋಗುತ್ತಿರುವ ಧನದ ಪ್ರವಾ

ಹಕ್ಕೆ ತಡೆಯಾದುದಲ್ಲದೆ ಅನೇಕ ವಿಷಯಗಳಲ್ಲಿ ಅವನ ಅಧಿಕಾರವೂ ಕಡಿಮೆ ಯಾಗತೊಡಗಿತು.

---

## ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿಯ ಇಂಗ್ಲಂಡು— ಸಾರಾಂಶವು.

(೧) ಪ್ರಾಚೀನ ಯುಗವು, ಮಧ್ಯ ಯುಗವು ಮತ್ತು ಅರ್ವಾಚೀನ ಯುಗವು—(ಅ) ಪ್ರಾಚೀನಯುಗವು— ಅತಿ ಪ್ರಾಚೀನ ಕಾಲದಿಂದ ಇ. ಸ. ೪೭೬ರ ವರೆಗೆ. ಯುರೋಪದಲ್ಲಿ ಮೊದಲು ಗ್ರೀಸದಲ್ಲಿಯು ಮತ್ತು ಆ ಬಳಿಕ ರೋಮದಲ್ಲಿಯ ರಾಜ್ಯಗಳು ಪ್ರಮುಖವಾಗಿದ್ದುವು. ವಿದ್ಯೆಯಲ್ಲಿ, ಕಲೆಯಲ್ಲಿ, ಆಚಾರವಿಚಾರಗಳಲ್ಲಿ ಮುಂದುವರಿದಿದ್ದುವು. (ಆ) ಮಧ್ಯಯುಗವು—ಇ. ಸ. ೪೭೬ರಿಂದ ಸು. ೧೪೫೦ರ ವರೆಗೆ. ಇ. ಸ. ೪೭೬ರಲ್ಲಿ ವನ್ಯಜನರು ಪಶ್ಚಿಮ ರೋಮ ಸಾಮ್ರಾಜ್ಯವನ್ನು ಮಣ್ಣು ಗೂಡಿಸಿದುದರಿಂದ ವಿದ್ಯೆ, ಕಲೆ, ಮತ್ತು ಸಂಸ್ಕೃತಿ ಇವುಗಳ ಹ್ರಾಸವು. ಸರದಾರರ ಮತ್ತು ಮನ್ನೆಯರ (ಲಾರ್ಡರ) ವರ್ಚಸ್ಸು. ಐಕ್ಯವನ್ನು ಹುಟ್ಟಿಸಿ ಶಾಂತತೆಯನ್ನು ಸ್ಥಾಪಿಸಲು ಚರ್ಚುಗಳ ಪ್ರಯತ್ನವು. ಫ್ರ್ಯಾಂಕ ಜನರ ಅರಸನಾದ ಚಾರ್ಲಮೇನ ನನ್ನು ರೋಮದ ಪೋಪನು ಇ. ಸ. ೮೦೦ರಲ್ಲಿ ರೋಮದ ಬಾದಶಹನಾಗಿ ಮಾಡಿದನು. ಪವಿತ್ರ ಸಾಮ್ರಾಜ್ಯ ಸ್ಥಾಪನೆ. (ಇ) ಅರ್ವಾಚೀನಯುಗವು—ಇ. ಸ. ಸು. ೧೪೫೦ರಲ್ಲಿ ಪ್ರಾರಂಭವು. ೧೪೫೩ರಲ್ಲಿ ತುರ್ಕರು ಪೂರ್ವ ರೋಮನ ಸಾಮ್ರಾಜ್ಯವನ್ನು ನಾಶ ಗೊಳಿಸಿದರು. ಪಾಶ್ಚಾತ್ಯ ವ್ಯಾಪಾರಕ್ಕೆ ಅಡ್ಡಿ. ಹಿಂದುಸ್ತಾನಕ್ಕೆ ಹೋಗಲು ಹೊಸ ದಾದ ಜಲಮಾರ್ಗದ ಶೋಧವು. ಸಮುದ್ರ ಪ್ರವಾಸವು, ಹೊಸ ಪ್ರದೇಶಗಳ ಶೋಧವು. ಕಾನ್ಸಟಾಂಟಿನೋಪಲಿನಲ್ಲಿಯ ಗ್ರೀಕ ಮತ್ತು ಲ್ಯಾಟಿನ ಭಾಷೆಗಳಲ್ಲಿ ಪಾರಂಗತ ರಾದ ವಿದ್ವಾಂಸರು ಯುರೋಪಕ್ಕೆ ಓಡಿಬಂದರು. ಅವರ ಶಿಕ್ಷಣದ ಪರಿಣಾಮದಿಂದ ಹೊಸ ವಿಚಾರಗಳು, ಚಿಕಿತ್ಸಕ ಬುದ್ಧಿ, ಅಂಧಶ್ರದ್ಧೆಯ ತ್ಯಾಗವು, ಧರ್ಮಸುಧಾರಣೆಯ ಕಾರ್ಯಗಳು. ಶಾಸ್ತ್ರೀಯ ಶೋಧಗಳ ವಿಷಯದಲ್ಲಿ ಪ್ರಯತ್ನವು.

(೨) ಇಂಗ್ಲಂಡಿನ ಪ್ರಾಚೀನ ನಿವಾಸಿಗಳು—ಇಂಗ್ಲಂಡಿನ ಪ್ರಾಚೀನ ಹೆಸರು ಶ್ವೇತದ್ವೀಪವು (Albion). ಪ್ರಾಚೀನ ಕಾಲದಲ್ಲಿ ಇಂಗ್ಲಂಡಿಗೆ ಸ್ಪೇನ ಮತ್ತು ಫ್ರಾನ್ಸ (ಗಾಲ) ಈ ಸ್ಥಳಗಳಿಂದ ಕೆಲ್ಟ ಜಾತಿಯ ಬ್ರಿಟನ್‌ರೆಂಬ ಜನರು ಬಂದರಾದುದರಿಂದ ಇಂಗ್ಲಂಡಿಗೆ ಬ್ರಿಟನ್ ಎಂಬ ಹೆಸರು ಬಂದಿತು. ಬ್ರಿಟನ ಜನರು ಬಹುಮಟ್ಟಿಗೆ ವನ್ಯ ಸ್ಥಿತಿಯಲ್ಲಿದ್ದರು. ಅವರಲ್ಲಿ ಧಾರ್ಮಿಕ ಕಾರ್ಯಗಳನ್ನು ಮಾಡುವ ಮತ್ತು ನ್ಯಾಯ ಗಳನ್ನು ಬಗೆಹರಿಸುವ ಡ್ರುಯಿಡ ಧರ್ಮಾಧಿಕಾರಿಗಳ ವರ್ಚಸ್ಸು.

(೩) ರೋಮನರ ಆಳ್ಕೆ—ಇ. ಸ. ಪೂ. ೫೫ರಿಂದ ಇ. ಸ. ೪೧೦ರ ವರೆಗೆ. ಜ್ಯೂಲಿ ಯಸ್ ಸೀಝರನು ಬ್ರಿಟನಿಗೆ ದಾಳಿಯನ್ನು ಇಕ್ಕಿದುದು. ರೋಮನರ ವರ್ಚಸ್ಸು.

ಕ್ಯಾರೆಕ್ಟೇಟಸ್ ಮತ್ತು ಬೊಡೇಶಿಯಾ ಇವರು ರೋಮನರನ್ನು ವಿರೋಧಿಸಿದುದು ಮತ್ತು ಸೋತುದು. ಸ್ಯಾಕ್ಸನರ ಉಪದ್ರವವನ್ನು ತಪ್ಪಿಸಲು ಅಗ್ರೀಕೋಲಾ ಇವನು ಉಪಾಯಗಳನ್ನು ಕೈಕೊಂಡುದು, ಭಾಷೆ, ಉಡುಗೆತೊಡುಗೆ, ಆಚಾರವಿಚಾರ, ಸಂಸ್ಕೃತಿ, ಪಟ್ಟಣಗಳ ಸ್ಥಾಪನೆ, ಕಲೆ, ವಿದ್ಯೆ, ಕ್ರೈಸ್ತಧರ್ಮ ಮೊದಲಾದ ಸಂಗತಿಗಳಲ್ಲಿ ರೋಮನರ ಸಹವಾಸದಿಂದ ಬ್ರಿಟನರು ಸುಧಾರಿಸಿದುದು. ಇ. ಸ. ೪೧೦ರಲ್ಲಿ ರೋಮನ ಸೈನ್ಯವು ಬ್ರಿಟನಿನಿಂದ ಹೊರಟುಹೋದುದರಿಂದ ಬ್ರಿಟನರು ನಿರಾಶ್ರಿತರಾದುದು.

(೪) ಅಂಗಲ್ಸ್, ಸ್ಯಾಕ್ಸನ್ಸ್, ಮತ್ತು ಡೇನ್ಸ್ ಇವರ ಆಳ್ಕೆ, (೪೫೦-೧೦೬೬)— ಪಿಕ್ಟ್ಸ್ ಮತ್ತು ಸ್ಕಾಟ್ಸ ಇವರಿಂದ ಬ್ರಿಟನ ದೇಶವನ್ನು ರಕ್ಷಿಸಲು ಅಂಗಲ್ಸ ಮತ್ತು ಸ್ಯಾಕ್ಸನ್ಸ ಇವರು ಇಂಗ್ಲಂಡಿಗೆ ಬಂದರು. ಆದರೆ ಅವರು ಅಲ್ಲಿಯೇ ಉಳಿದರು. ಅಂಗಲ್ಸ ಜನರಿಂದ ಬ್ರಿಟನಿಗೆ ಇಂಗ್ಲಂಡೆಂಬ ಹೆಸರು ಬಂದುದು. ಇಂಗ್ಲಂಡಿನಲ್ಲಿ ಅಂಗ್ಲೋಸ್ಯಾಕ್ಸನರ ಏಳು ರಾಜ್ಯಗಳು, ವೆಸೆಕ್ಸದ ಎಗಬರ್ಟನು ೮೨೭ರಲ್ಲಿ ಏಕೀಕರಣವನ್ನು ಮಾಡಿದನು. ಅರಸನಿಗೆ ಆಲೋಚನೆಯನ್ನು ಹೇಳಲು ವಿಟನಗೇಮೂಟ ಮಂಡಳವು. ಕ್ರೈಸ್ತಧರ್ಮದ ಪ್ರಸಾರವು. ಮೊದಲನೆಯ ಧರ್ಮಪ್ರಸಾರಕನಾದ ಆಗಸ್ಟೈನನು. ಡೇನ್ಸರ ದಾಳಿಗಳು. ೮೭೮ರಲ್ಲಿ ದೊಡ್ಡ ದಾಳಿ ಮತ್ತು ಆಲ್ಫ್ರೆಡನ ಪ್ರತೀಕಾರವು. ಆಲ್ಫ್ರೆಡನ ಸುಧಾರಣೆಗಳು—ಕೋಟೆಗಳನ್ನು ಕಟ್ಟಿಸುವುದು, ಹಡಗುಪಡೆಯನ್ನು ಸಿದ್ಧಗೊಳಿಸುವುದು, ಶಾಲೆಗಳನ್ನು ಸ್ಥಾಪಿಸಿ ವಿದ್ಯೆಗೆ ಮತ್ತು ಕಲೆಗಳಿಗೆ ಉತ್ತೇಜನವನ್ನೀವುದು, ಮತ್ತು ಕಾಯ್ದೆಗಳನ್ನು ಸಂಗ್ರಹಿಸುವುದು. ಮಹಾನ್ ಆಲ್‌ಫ್ರೆಡನು. ೧೦೧೬ರಿಂದ ೧೦೪೨ರ ವರೆಗೆ ಡ್ಯಾನಿಶ್ ರಾಜರು. ಅವರಲ್ಲಿ ಪ್ರಸಿದ್ಧನಾದ ಕ್ಯಾನ್ಯೂಟರಾಜನು. ಧರ್ಮಪ್ರಸಾರ ಮತ್ತು ಧರ್ಮಮಠ ಇವುಗಳಿಗೋಸುಗ ಧನವ್ಯಯವು. ೧೦೪೨ರಿಂದ ೧೦೬೬ರ ವರೆಗೆ ಅಂಗ್ಲೊಸ್ಯಾಕ್ಸನರ ರಾಜನಾದ ಧರ್ಮಾತ್ಮಾ ಎಡ್ವರ್ಡನು. ನಾರ್ಮಂಡಿ ಅವನ ತಾಯಿಯ ತವರುಮನೆ. ಆದುದರಿಂದ ಇಂಗ್ಲಂಡಿಗೆ ನಾರ್ಮನರ ಬರುಹೋಗುವುದು.

(೫) ನಾರ್ಮನ ವಂಶವು (೧೦೬೬ರಿಂದ ೧೧೫೪)—ನಾರ್ಮನರು ಡೆನ್ಮಾರ್ಕದ ಮೂಲನಿವಾಸಿಗಳು. ಫ್ರಾನ್ಸಿನಲ್ಲಿ ಎರಡು ಶತಕಗಳ ವರೆಗೆ ಇದ್ದುದರಿಂದ ಅವರು ಭಾಷೆಯಲ್ಲಿ, ಆಚಾರವಿಚಾರಗಳಲ್ಲಿ ಫ್ರೆಂಚರಾದುದು. ೧ನೆಯ ವಿಲಿಯಮನು ಸರಂಜಾಮಿ ಪದ್ಧತಿಯನ್ನು ಸ್ಥಾಪಿಸಿದುದು. ಲಷ್ಕರಿ ನೌಕರಿಯ ಕರಾರವು. ಸರದಾರರ ವರ್ಚಸ್ಸನ್ನು ತಗ್ಗಿಸಲು ವಿಲಿಯಮನ ಯತ್ನವು. ವಿಟನಗೆಮೂಟ ಮಂಡಳವು ಮನ್ನೆಯರ (ಲಾರ್ಡರ) ಮಂಡಳವಾದುದು. ಧಾರ್ಮಿಕ ವಿಷಯದಲ್ಲಿ ಇಂಗ್ಲಂಡಿನ ರಾಜನ ಸಮ್ಮತಿ ಇಲ್ಲದೆ ಪೋಪನು ಕೈಹಾಕಬಾರದೆಂಬ ನೀತಿ. ೧ನೆಯ ಹೆನ್ರಿ ಕಾಯ್ದೆಯಂತೆ ಮತ್ತು ರೂಢಿಯಂತೆ ನಡೆವೆನೆಂದು ಪ್ರಕಟಗೊಳಿಸಿದುದು. ಸ್ಟೀಫನನ ಆಳ್ಕೆಯಲ್ಲಿ ಅವ್ಯವಸ್ಥೆ, ಸರದಾರರ ವರ್ಚಸ್ಸು.

(೬) ಅಂಜೊ, ಲ್ಯಾಂಕೆಸ್ಟರ ಮತ್ತು ಯಾರ್ಕ ವಂಶಗಳು (೧೧೫೪—೧೪೮೫)—ಅಂಜೊ ವಂಶವು (೧೧೫೪—೧೩೯೯)—೨ನೆಯ ಹೆನ್ರಿ ಸರದಾರರ ವರ್ಚಸ್ಸನ್ನು

ತಗ್ಗಿಸಿದನು. ಒಂದೇ ಬಗೆಯ ನ್ಯಾಯಾಸನಗಳಿಂದ ಧರ್ಮಾಧಿಕಾರಿಗಳಿಗೂ ಸಾಮಾನ್ಯ ಜನರಿಗೂ ಸಮನಾದ ನ್ಯಾಯದಾನವು. ೧ನೆಯ ರಿಚರ್ಡನು ಧರ್ಮಯುದ್ಧದಲ್ಲಿ ಬಹಳ ವರ್ಷಗಳನ್ನು ಕಳೆದನು. ಜಾನನ ಅನ್ಯಾಯದ ವರ್ತನವು. ಪ್ರಜೆಗಳ ಮೇಲೆ ಅಸಹ್ಯವಾದ ಕರಗಳು. ಧರ್ಮಾಧಿಕಾರಿಗಳು, ಸರದಾರರು, ಮತ್ತು ಸಾಮಾನ್ಯ ಜನರು ತಮ್ಮ ಹಕ್ಕುಗಳ ರಕ್ಷಣೆಗೋಸುಗ ಜಾನನಿಂದ ಮ್ಯಾಗ್ನಾ ಚಾರ್ಟ್ರ ಸನದನ್ನು ಪಡೆದರು. ೩ನೆಯ ಹೆನ್ರಿ ಅಲ್ಪ ವಯಸ್ಕನಿರುವಾಗ ಪಟ್ಟಕ್ಕೆ ಬಂದನು. ಅವನ ತಾಯಿಯೂ, ಹೆಂಡತಿಯೂ ಫ್ರಾನ್ಸಿನಲ್ಲಿಯ ತಮ್ಮ ಆಪ್ತೇಷ್ಟರಿಗೆ ಇಂಗ್ಲಂಡಿನಲ್ಲಿಯ ಜಹಾಗೀರುಗಳನ್ನು ಕೊಟ್ಟರು. ರಾಜ್ಯಕಾರಭಾರದ ವೆಚ್ಚಕ್ಕೋಸುಗ ಜನರ ಮೇಲೆ ಅಸಹ್ಯವಾದ ಕರಗಳು. ರಾಜ್ಯದಲ್ಲಿ ಅಸಂತೋಷವು ಮತ್ತು ಬಂಡು. ಸಾಯಮನ್ ಡಿ. ಮಾಂಟಫೋರ್ಡನು ಸರದಾರರ, ಮತ್ತು ಪಟ್ಟಣ ಮತ್ತು ಜಿಲ್ಹೆಗಳ ಪ್ರತಿನಿಧಿಗಳ ಸಭೆಯನ್ನು—ಪಾರ್ಲಿಮೆಂಟನ್ನು—ಕರೆದನು. ೧ನೆಯ ಎಡ್ವರ್ಡನು ೧೨೯೫ರಲ್ಲಿ ಮಾದರಿಯ ಪಾರ್ಲಿಮೆಂಟನ್ನು ಸ್ಥಾಪಿಸಿದನು. ೩ನೆಯ ಎಡ್ವರ್ಡನು ಫ್ರಾನ್ಸಿನ ರಾಜ್ಯಪದಕ್ಕೆ ತನಗೆ ಅಧಿಕಾರವುಂಟೆಂಬ ನೆವದಿಂದ ನೂರು ವರ್ಷಗಳ ಯುದ್ಧವನ್ನು ಆರಂಭಿಸಿದನು. ಕ್ಯಾಲೆ ಪಟ್ಟಣವನ್ನು ಬಿಟ್ಟು ಉಳಿದೆಲ್ಲ ಪ್ರದೇಶವನ್ನು ಫ್ರೆಂಚರು ವಶಪಡಿಸಿಕೊಂಡರು. ಸ್ಕಾಟಲಂಡಿನ ಮೇಲೆ ವರ್ಚಸ್ಸನ್ನು ಸ್ಥಾಪಿಸಲು ಮಾಡಿದ ಪ್ರಯತ್ನವು ನಿಷ್ಫಲವಾಯ್ತು. ೨ನೆಯ ರಿಚರ್ಡನ ಆಳ್ಕೆಯಲ್ಲಿ ವಿಕ್ಲಿಫನ ಧರ್ಮಸುಧಾರಣೆಯ ಕಾರ್ಯವು. ಬೈಬಲಿನ ಭಾಷಾಂತರವು. ಧರ್ಮಾಧಿಕಾರಿಗಳ ವಿಲಾಸವೃತ್ತಿಯ ಮೇಲೆ ಟೀಕೆ. ಲ್ಯಾಂಕೆಸ್ಟರ ಮತ್ತು ಯಾರ್ಕ ಮನೆತನಗಳು (೧೩೯೯—೧೪೮೫)—ಇಂಗ್ಲಂಡಿನ ಪಟ್ಟಕ್ಕೆ ತಮ್ಮದೇ ಅಧಿಕಾರವಿರುವುದೆಂದು ಈ ಎರಡು ವಂಶಗಳಲ್ಲಿ ಸ್ಪರ್ಧೆ ಮತ್ತು ಯುದ್ಧವು (೧೪೫೫—೧೪೮೫), ಲ್ಯಾಂಕೆಸ್ಟರ ವಂಶದ ಮಾರ್ಗಾರೆಟ ರಾಜಕನ್ಯೆಯ ಮಗನಾದ ಹೆನ್ರಿ ಟ್ಯೂಡರನಿಗೆ ಜಯವು ಮತ್ತು ಟ್ಯೂಡರ ವಂಶದ ಸ್ಥಾಪನೆ (೧೪೮೫).

(೭) ಸಾಮಾಜಿಕ ಸ್ಥಿತಿ—(ಅ) ಇಂಗ್ಲಂಡಿನ ರಾಷ್ಟ್ರವು—ಬ್ರಿಟನ್, ಆಂಗಲ್ಸ, ಸ್ಯಾಕ್ಸನ್ಸ, ಜ್ಯೂಟ್ಸ ಮತ್ತು ನಾರ್ಮನ್ಸ ಇವರೆಲ್ಲರ ಏಕೀಕರಣವು. ಕಾಲಾಂತರದಿಂದ ಎಲ್ಲರಿಗೂ ಇಂಗ್ಲಿಶ್ ಎಂಬ ಒಂದೇ ಹೆಸರು. ನಾರ್ಮನರ ಭಾಷೆ ಫ್ರೆಂಚ, ಸಾಮಾನ್ಯ ಜನರ ಭಾಷೆ ಇಂಗ್ಲಿಶ್. ಕಾಲಾಂತರದಿಂದ ಎಲ್ಲರ ಭಾಷೆ ಇಂಗ್ಲಿಶ್. ಆದರೆ ಅದರಲ್ಲಿ ಫ್ರೆಂಚ ಶಬ್ದಗಳ ಸಮಾವೇಶವು. (ಆ) ವ್ಯಾಪಾರೋದ್ಯಮಗಳ ಮತ್ತು ಪಟ್ಟಣಗಳ ಬೆಳವಣಿಗೆ:—ವ್ಯಾಪಾರವು ಅಲ್ಪ ಪ್ರಮಾಣದಲ್ಲಿ, ಮಾರ್ಗಗಳ ದುಃಸ್ಥಿತಿ, ಯಾತ್ರೆಯ ಸ್ಥಳಗಳು ಮತ್ತು ನಾಲ್ಕು ಮಾರ್ಗಗಳು ಕೂಡುವ ಸ್ಥಳಗಳು ಕಾಲಾನುಕ್ರಮದಿಂದ ಪಟ್ಟಣಗಳಾದುವು. ಉದ್ಯಮಗಳ ವೃದ್ಧಿ. ದುಡ್ಡಿನ ವ್ಯವಹಾರವು ಜ್ಯೂ ಜನರ ಕೈಯಲ್ಲಿ. ಪಟ್ಟಣಗಳು ಬೆಳೆದುವು. ಲಂಡನ ನಗರಕ್ಕೆ ಮಹತ್ವವು. ಪಟ್ಟಣಗಳಲ್ಲಿ ವ್ಯಾಪಾರಸ್ಥರು ತಮ್ಮ ಪಟ್ಟಣಗಳ ಕರಗಳನ್ನು ಮತ್ತು ಸುಂಕವನ್ನು ವಸೂಲು ಮಾಡುವ, ನ್ಯಾಯಗಳನ್ನು ಬಗೆಹರಿಸುವ ಮತ್ತು ತಮ್ಮ ಅಧಿಕಾರಿಗಳನ್ನು ನಿಯೋಜಿಸುವ, ಹಕ್ಕುಗಳಿಗಾಗಿ ಸರದಾರರಿಗೂ, ರಾಜನಿಗೂ ಹಣವನ್ನು ಕೊಟ್ಟು ಸನದುಗಳನ್ನು ದೊರಕಿಸಿದರು. ಗಿಲ್ಡ

ಗಳ ಸ್ಥಾಪನೆ. (ಇ) ಶಿಕ್ಷಣವೂ ಶಾಲೆಗಳೂ:— ಬಹಳ ಜನರು ಅಶಿಕ್ಷಿತರು. ಧರ್ಮಾಧಿಕಾರಿಗಳು, ಬಿಶಪರು, ಧರ್ಮಮಠಗಳಲ್ಲಿಯ ಸಾಧುಗಳು ಇವರೇ ಕಲಿತವರು. ಇವರಲ್ಲಿ ಸಾಮಾನ್ಯಜನರ ಶ್ರದ್ಧೆ. ಧರ್ಮಮಠಗಳಲ್ಲಿ ಶಿಕ್ಷಣದ, ಔಷಧೋಪಚಾರದ, ಮತ್ತು ಅನಾಥ ರಕ್ಷಣದ ವ್ಯವಸ್ಥೆ, ವಿಶ್ವವಿದ್ಯಾಲಯಗಳ ಸ್ಥಾಪನೆ. ಯುರೋಪದಲ್ಲಿ ರೋಮ ಮತ್ತು ಪ್ಯಾರೀಸ ಈ ಪಟ್ಟಣಗಳಲ್ಲಿ ಮಹತ್ವದ ವಿಶ್ವವಿದ್ಯಾಲಯಗಳು. ಧಾರ್ಮಿಕ ವಿಷಯದ, ವೈದ್ಯಕೀಯ, ತತ್ವಜ್ಞಾನದ, ಕಾಯ್ದೆ ಮೊದಲಾದುದರ ಶಿಕ್ಷಣವು. ಇಂಗ್ಲಂಡಿನಲ್ಲಿ ಆಕ್ಸಫರ್ಡ ಮತ್ತು ಕೇಂಬ್ರಿಜ ವಿಶ್ವವಿದ್ಯಾಲಯಗಳ ಸ್ಥಾಪನೆ. ಉದ್ಯಮ ಶಿಕ್ಷಣದ ವ್ಯವಸ್ಥೆ ಪಟ್ಟಣಗಳ ಗಿಲ್ಡ್‌ಗಳ ಕಡೆಗೆ ಇದ್ದಿತು. ಸರದಾರರ ಮಕ್ಕಳ ಶಿಕ್ಷಣವು ಬೇರೆ ಸರದಾರರ ಕೋಟೆಗಳಲ್ಲಿ. ಅಲ್ಲಿ ಅವರಿಗೆ ಯುದ್ಧಕಲೆ, ಪುಸ್ತಕವಿದ್ಯೆ, ಶಿಷ್ಟಾಚಾರ ಇವುಗಳ ಶಿಕ್ಷಣವು ದೊರೆಯುತ್ತಿತ್ತು. (ಈ) ಮನೆಗಳು ಮತ್ತು ಕಟ್ಟಡಗಳು— ಸಾಮಾನ್ಯ ಜನರ ಮನೆಗಳು ಕಟ್ಟಿಗೆಯವು, ಸರದಾರರ ಕೋಟೆಗಳು ಭದ್ರವಾಗಿರುತ್ತಿದ್ದರೂ ಕಲಾಭಿರುಚಿ ಅಲ್ಲಿ ಇರಲಿಲ್ಲ. ೧೩ನೆಯ ಶತಕದಿಂದ ಕೋಟೆಗಳ ಬದಲು ದೊಡ್ಡ ಮನೆಗಳು. ಚರ್ಚುಗಳ ಮತ್ತು ಧರ್ಮಮಠಗಳ ಕಟ್ಟಡಗಳು ಭವ್ಯವಾಗಿಯೂ ದೊಡ್ಡವೂ ಇರುತ್ತಿದ್ದುವು. ಮಾರ್ಗಗಳು ಕಿರಿಯವು. ಸ್ವಚ್ಛತೆ ಇಲ್ಲಿಲ್ಲ. ಅಲ್ಲಿಯ ಹೊಲಸು ತೊಳೆದು ಹೋಗುವುದು ಮಳೆಯಿಂದ. (ಉ) ಮನೋರಂಜನೆಯ ಸಾಧನೆಗಳು ಮತ್ತು ಉಡುಪುಗಳು— ಬೇಟೆ ಮತ್ತು ಕ್ರೀಡಾಸತ್ರಗಳು ರಾಜರ ಮತ್ತು ಸರದಾರರ ಮನೋರಂಜನೆಯ ಸಾಧನೆಗಳು. ಎತ್ತುಗಳ ಮತ್ತು ನಾಯಿಗಳ ಕಾದಾಟವು, ನೃತ್ಯ, ಗುರಿಹೊಡೆವುದು ಇವು ಸಾಮಾನ್ಯ ಜನರ ಮನೋರಂಜನೆಯ ಸಾಧನೆಗಳು. ಸರದಾರರ ವಸ್ತ್ರಗಳು ಉಣ್ಣೆಯವಾಗಿದ್ದುವು. ಅವು ಬಣ್ಣಬಣ್ಣದವಾಗಿರುತ್ತಿದ್ದವು. ಯುದ್ಧಕಾಲದಲ್ಲಿ ಅವರು ಚಿಲಕತ್ತನ್ನೂ ಶಿರಸ್ತ್ರಾಣವನ್ನೂ ಉಪಯೋಗಿಸುತ್ತಿದ್ದರು. ಸಾಮಾನ್ಯ ಜನರ ವಸ್ತ್ರಗಳು ಉರುಟಾಗಿರುತ್ತಿದ್ದುವು. ಮೊಣಕಾಲನ್ನು ಮುಟ್ಟುವ ನಿಲುವಂಗಿಗಳನ್ನು ಅವರು ಉಪಯೋಗಿಸುತ್ತಿದ್ದರು.

(೮) ಕ್ರೈಸ್ತಧರ್ಮದ ಸ್ಥಾಪನೆ ಮತ್ತು ಇಂಗ್ಲಂಡಿನಲ್ಲಿಯ ಧಾರ್ಮಿಕ ವ್ಯವಸ್ಥೆ— (ಅ) ಕ್ರೈಸ್ತಧರ್ಮದ ಸ್ಥಾಪನೆ— ಇ. ಸ. ಪೂ. ೪ನೆಯ ವರ್ಷದಲ್ಲಿ ಯೇಸು ಕ್ರಿಸ್ತನ ಜನ್ಮವು— ಜ್ಯೂ ಧರ್ಮದಲ್ಲಿಯ ಕರ್ಮಕಾಂಡವು, ಬಲಿದಾನವು, ಮೂರ್ತಿಪೂಜೆಯ ಅತಿರೇಕವು ಮತ್ತು ಸ್ವಾರ್ಥ ವರ್ತನವು, ಇವುಗಳ ವಿಷಯದಲ್ಲಿ ತಿರಸ್ಕಾರವು. ತಾನು ದೇವದೂತನು (ಮೆಸಾಯಾ) ಎಂದು ಯೇಸುವಿನ ಭಾವನೆ. ಜನರಿಗೆ ಉಪದೇಶವು. ಜನಸೇವೆಯೇ ಈಶ್ವರ ಸೇವೆ. ಕ್ರಿಸ್ತನ ಛಲನೆ ಮತ್ತು ಅವನ ೩೩ನೆಯ ವಯಸ್ಸಿನಲ್ಲಿ ಕ್ರಾಸಿನ ಮೇಲೆ ಅವನಿಗೆ ಮೃತ್ಯು. "ಹಳೆಯ ಕರಾರವು", ಜ್ಯೂ ಜನರ ಧಾರ್ಮಿಕ ಗ್ರಂಥವು. ಯೇಸುಕ್ರಿಸ್ತನ ಉಪದೇಶವೆಂದರೆ "ಹೊಸ ಕರಾರವು." ಇವೆರಡರಿಂದಾದ ಬೈಬಲು ಕ್ರೈಸ್ತರ ಪವಿತ್ರ ಗ್ರಂಥವು. ಬೈಬಲಿನ ಮೂಲಭಾಷೆ ಹಿಬ್ರು. ಆ ಬಳಿಕ ಗ್ರೀಕ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಭಾಷಾಂತರವು. ಮತ್ತು ಮಧ್ಯಯುಗದ ಕೊನೆಯ ಭಾಗದಲ್ಲಿ ಇತರ

ಭಾಷೆಗಳಲ್ಲಿ ಭಾಷಾಂತರವು. (ಆ) ಕ್ರೈಸ್ತಧರ್ಮದ ಪ್ರಸಾರವು— ಕ್ರಿಸ್ತನ ಶಿಷ್ಯರು ಕ್ರಿಸ್ತನನ್ನು ಅವತಾರ ಪುರುಷನೆಂದು ಎನ್ನುತ್ತಿದ್ದರು. ಕ್ರಿಸ್ತನಿಂದ ಅವನ ಧರ್ಮಕ್ಕೆ ಕ್ರೈಸ್ತ ಧರ್ಮವೆಂದು ಹೆಸರು. ಪಾಲನು ಜ್ಯೂ ಜನರನ್ನು ಮತ್ತು ಜ್ಯೂ ಅಲ್ಲದ ಗ್ರೀಕ, ರೋಮನ್ ಮೊದಲಾದ ಜನರನ್ನು ಕ್ರೈಸ್ತಧರ್ಮದಲ್ಲಿ ತೆಗೆದುಕೊಂಡನು. ರೋಮನ್ ಸಾಮ್ರಾಜ್ಯದಲ್ಲಿ ಕ್ರೈಸ್ತಧರ್ಮದ ಪ್ರಸಾರವನ್ನು ಮಾಡಿದನು. ಪಾಖಂಡನೆಂದು ಕೊಲ್ಲಲ್ಪಟ್ಟನು. ಇ. ಸ. ೩೧೩ರಲ್ಲಿ ರೋಮನ್ ಬಾದಶಹನಾದ ಕಾನ್ಸ್ಟಂಟಾಯಿನನು ಕ್ರೈಸ್ತನಾದನು. ರೋಮನ ಸಾಮ್ರಾಜ್ಯದಲ್ಲಿ ಕ್ರೈಸ್ತಧರ್ಮಕ್ಕೆ ಮಾನ್ಯತೆ. ರೋಮ, ಕಾನ್ಸ್ಟಂಟಿನೋಪಲ್, ಜೆರೂಸಲೇಮ, ಅಲೆಕ್ಝಾಂಡ್ರಿಯಾ, ಅಂಟಿಯಾ ಈ ಪಟ್ಟಣಗಳಲ್ಲಿಯ ಕ್ರೈಸ್ತಧರ್ಮಾಧಿಕಾರಿಗಳಿಗೆ ಮಹತ್ವವು ಪ್ರಾಪ್ತವಾಗುವುದು. ಮತ್ತು ಅಲ್ಲಿ ಧರ್ಮಪೀಠಗಳು ಸ್ಥಾಪಿಸಲ್ಪಡುವುವು. ಮಧ್ಯಯುಗದಲ್ಲಿ ರೋಮ, ಕಾನ್ಸ್ಟಂಟಿನೋಪಲ ಇಲ್ಲಿಯ ಬಿಶಪರು ಕ್ರೈಸ್ತಧರ್ಮದ ಮುಖ್ಯ ಗುರು ಎಂದು ತಿಳಿಯಲ್ಪಡುವರು. ಪಶ್ಚಿಮ ಯುರೋಪದಲ್ಲಿ ರೋಮದ ಬಿಶಪನಿಂದ ಕ್ರೈಸ್ತಧರ್ಮದ ಪ್ರಸಾರವು; ಅವನಿಗೆ ವಿಶೇಷ ಮಹತ್ವವು, ಮತ್ತು ಅವನಿಗೆ ಪೋಪನೆಂಬ ಪದವಿ. ರೋಮದ ಪೋಪನು ಕ್ರೈಸ್ತರ ಧರ್ಮದ ಗುರು ಎಂದು ತಿಳಿಯಲ್ಪಡುವನು. ಧಾರ್ಮಿಕ ಸಂದರ್ಭಗಳಂತೆ ರಾಜಕೀಯ ಸಂದರ್ಭಗಳಲ್ಲಿಯೂ ಅವನಿಗೆ ವಿಶೇಷವಾದ ಅಧಿಕಾರವು ದೊರೆವುದು. ಮುಂದೆ ಮುಂದೆ ಧರ್ಮಾಧಿಕಾರಿಗಳ ಮತ್ತು ಪೋಪನ ವಿಲಾಸಪೂರ್ಣವಾದ ಜೀವನವು. ಜನರ ಅಸಂತೋಷವು. ಮತ್ತು ಅದರ ವಿರುದ್ಧವಾಗಿ ಚಳವಳಿ. ಪೋಪನಿಗಿಂತ ಬೈಬಲಿಗೆ ಹೆಚ್ಚು ಮಹತ್ವವು. ಧರ್ಮಸುಧಾರಣೆಯ ಚಳವಳಿ ೧೬ನೆಯ ಶತಕದ ಪ್ರಾರಂಭದಲ್ಲಿ.

(ಇ) ಇಂಗ್ಲಂಡಿನಲ್ಲಿಯ ಧಾರ್ಮಿಕ ವ್ಯವಸ್ಥೆ—ರೋಮನರ ಆಳ್ಕೆಯಲ್ಲಿ ಇಂಗ್ಲಂಡಿನಲ್ಲಿ ಕ್ರೈಸ್ತಧರ್ಮವು. ಆದರೆ ಮುಂದೆ ಆದರ ಲೋಪವು. ಅಂಗ್ಲೋ ಸ್ಯಾಕ್ಸನರ ಸಮಯದಲ್ಲಿ ಆಗಸ್ಟಾಯಿನನು ಮತ್ತೆ ಕ್ರೈಸ್ತಧರ್ಮದ ಸ್ಥಾಪನೆಯನ್ನು ಮಾಡಿದನು (೫೯೭). ಕ್ಯಾಂಟರ್ಬರಿ ಮತ್ತು ಯಾರ್ಕ ಇಲ್ಲಿಯ ಬಿಶಪರು ಮುಖ್ಯರಾದವರೆಂದು ಅವರಿಗೆ ಆರ್ಚಬಿಶಪರೆಂಬ ಪದವಿ. ಇವರಿಬ್ಬರಲ್ಲಿ ಕ್ಯಾಂಟರ್ಬರಿಯ ಆರ್ಚಬಿಶಪನು ಪ್ರಮುಖನು. ರಾಜನ ಧಾರ್ಮಿಕ ಕೃತ್ಯಗಳನ್ನು ಮಾಡುವುದು, ಧಾರ್ಮಿಕ ವ್ಯವಸ್ಥೆಯ ಮೇಲೆ ಲಕ್ಷ್ಯವನ್ನಿಡುವುದು ಅವನ ಕೆಲಸವು. ಅವನ ಕೈಕೆಳಗೆ ಪಟ್ಟಣಗಳಲ್ಲಿಯೂ, ಹಳ್ಳಿಗಳಲ್ಲಿಯೂ, ಬಿಶಪ್ ಮತ್ತು ಕ್ಲರ್ಜಿ ಎಂಬ ಅಧಿಕಾರಿಗಳು. ಅಲ್ಲಲ್ಲಿ ಧರ್ಮಮಠಗಳು. ಅಲ್ಲಿ ಶಿಕ್ಷಣವನ್ನು ಕೊಡುವುದು. ಬೈಬಲು ಮತ್ತು ಇತರ ಹಸ್ತಲಿಖಿತ ಪ್ರತಿಗಳನ್ನು ಮಾಡುವುದು, ಔಷಧೋಪಚಾರ, ಅನ್ನಛತ್ರ, ಅನಾಥರಿಗೆ ಆಶ್ರಯವನ್ನೀವುದು, ಇವೇ ಮೊದಲಾದ ಕೆಲಸಗಳು. ಇವುಗಳ ವೆಚ್ಚಕ್ಕೆ ಅರಸನಿಂದಲೂ, ಧಾರ್ಮಿಕ ವೃತ್ತಿಯ ಜನರಿಂದಲೂ ಕಾಣಿಕೆಗಳು. ಪೋಪ, ಬಿಶಪ, ಕ್ಲರ್ಜಿ, ಧರ್ಮಾಧಿಕಾರಿಗಳು, ಧರ್ಮಮಠದಲ್ಲಿಯ ಸಾಧುಗಳು ಇವರೆಲ್ಲರ ಬೈಬಲಿಗೆ ವಿರುದ್ಧವಾದ ಆಚರಣವು. ಇವರ ಆಚರಣವು ಸುಧಾರಿಸಬೇಕೆಂದೂ, ಜನರಲ್ಲಿ ಧಾರ್ಮಿಕ ಜಾಗೃತಿಯಾಗಬೇಕೆಂದೂ ಪ್ರಯ

ತ್ನಗಳು. ಇಂಗ್ಲಂಡಿನಲ್ಲಿಯ ಮೊದಲನೆಯ ಧರ್ಮಸುಧಾರಕನಾದ ವಿಕ್ಲಿಫನು. ಅವನ ಅನುನಾಯಿಗಳ ಛಲನವು. ಜನರು ಅಶಿಕ್ಷಿತರಿದ್ದುದರಿಂದ ವಿಕ್ಲಿಫನ ಮತ್ತು ಅವನ ಅನುನಾಯಿಗಳ ಪ್ರಯತ್ನಗಳೆಲ್ಲವು ನಿಷ್ಫಲವಾದುವು.

## ಪರಿಶಿಷ್ಟ ೧.

## ಪ್ರಾಚೀನ ಮತ್ತು ಮಧ್ಯ ಯುಗಗಳಲ್ಲಿಯ ಇಂಗ್ಲಂಡು—ಮಹತ್ವದ ಪ್ರಶ್ನೆಗಳು.

(೧) ಇಂಗ್ಲಂಡಿನ ಮತ್ತು ಯುರೋಪದ ಇತಿಹಾಸದಲ್ಲಿ ಪ್ರಾಚೀನಯುಗವು, ಮಧ್ಯಯುಗವು ಮತ್ತು ಅರ್ವಾಚೀನ ಯುಗಗಳೆಂದು ಕಲ್ಪಿಸಿದುದು ಏಕೆ? ಈ ಭಾಗ ಗಳ ಕಾಲಮರ್ಯಾದೆಗಳಾವುವು ಮತ್ತು ಅವುಗಳಲ್ಲಿಯ ವಿಶೇಷ ಮಹತ್ವದ ಸಂಗತಿ ಗಳಾವುವು?

(೨) ಇಂಗ್ಲಂಡ ದೇಶಕ್ಕೆ ಯಾವ ಯಾವ ಕಾಲಗಳಲ್ಲಿ ಯಾವ ಯಾವ ಹೆಸರು ಗಳು ಯಾವ ಯಾವ ಕಾರಣಗಳಿಂದ ಉಂಟಾಗಿದ್ದುವು?

(೩) ಬ್ರಿಟನರ ವಿಷಯದಲ್ಲಿ ನಿಮಗೆ ಏನು ಗೊತ್ತಿದೆ? ಅವರಲ್ಲಿಯ ಪರಾಕ್ರಮಿ ಗಳಾದ ರಾಜ್ಯಕರ್ತರ ವಿಷಯದಲ್ಲಿ ನೀಮಗೆ ಗೊತ್ತಿದ್ದುದನ್ನು ಹೇಳಿರಿ.

(೪) ರೋಮನರು ಎಲ್ಲಿಯವರು? ಅವರ ವಿಷಯದಲ್ಲಿ ನೀವು ಏನನ್ನು ಬಲ್ಲಿರಿ? ಅವರು ಇಂಗ್ಲಂಡಿಗೆ ಯಾವಾಗ ಮತ್ತು ಏಕೆ ದಾಳಿಗಳನ್ನಿಕ್ಕಿದರು? ಅವರ ಸೇನಾಪತಿ ಯಾರು?

(೫) ರೋಮನರು ಇಂಗ್ಲಂಡಿನಲ್ಲಿ ಮಾಡಿದ ಸುಧಾರಣೆಗಳಾವುವು? ರೋಮನರ ಆಳ್ಕೆಯಿಂದ ಇಂಗ್ಲಂಡಿನ ಮೇಲೆ ಆದ ಪರಿಣಾಮಗಳು ಯಾವುವು?

(೬) ಅಂಗ್ಲೋ ಸ್ಯಾಕ್ಸನರು ಇಂಗ್ಲಂಡಿಗೆ ಯಾವಾಗ ಮತ್ತು ಏಕೆ ಬಂದರು? ಅವರು ಇಂಗ್ಲಂಡಿನಲ್ಲಿ ಎಷ್ಟು ರಾಜ್ಯಗಳನ್ನು ಸ್ಥಾಪಿಸಿದರು?

(೭) ಆಲ್ಫ್ರೆಡರಾಜನ ವಿಷಯದಲ್ಲಿ ನಿಮಗೆ ಏನು ಗೊತ್ತಿದೆ? ಅವನಿಗೆ ಮಹಾನ್ ಆಲ್ಫ್ರೆಡನೆಂದು ಏಕೆ ಹೆಸರು? ಅವನು ಮಾಡಿದ ಕಾರ್ಯಗಳಾವುವು?

(೮) ಡೇನ್ಸರು ಎಲ್ಲಿಯವರು? ಅವರು ಇಂಗ್ಲಂಡಿಗೆ ಯಾವಾಗ ಮತ್ತು ಏಕೆ ಬಂದರು? ಅವರಲ್ಲಿಯ ಕ್ಯಾನ್ಯೂಟರಾಜನ ವಿಷಯದಲ್ಲಿ ನೀವು ಏನನ್ನು ಬಲ್ಲಿರಿ?

(೯) ಸರಂಜಾಮಿ ಪದ್ಧತಿ ಎಂದರೇನು? ಈ ಪದ್ಧತಿಯನ್ನು ಇಂಗ್ಲಂಡಿನಲ್ಲಿ ಯಾರು ಮತ್ತು ಯಾವಾಗ ಸ್ಥಾಪಿಸಿದರು? ೧ನೆಯ ವಿಲಿಯಮನು ಮನ್ನೆಯರ ವಿಷ ಯದಲ್ಲಿಯೂ, ಧರ್ಮಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿಯೂ ಕೈಕೊಂಡ ನೀತಿ ಯಾ ವುದು?

(೧೦) ೨ನೆಯ ಹೆನ್ರಿ ಯಾವ ಯಾವ ಸುಧಾರಣೆಗಳನ್ನು ಮಾಡಿದನು?

(೧೧) ಮ್ಯಾಗ್ನಾ ಚಾರ್ಟರ್ ಸನದನ್ನು ಮಹತ್ವದ ಸನದೆಂದು ಕರೆವುದು ಏಕೆ?

ಈ ಸನದಿನಲ್ಲಿಯ ಮುಖ್ಯ ಕಲಮುಗಳಾವುವು? ಇವನ್ನು ಯಾರು ಯಾರಿಂದ ಪಡೆದರು?

(೧೨) ಪಾರ್ಲಿಮೆಂಟ ಸಭೆಯ ಸ್ಥಾಪನೆಗೆ ಯಾವ ಪ್ರಯತ್ನಗಳು ಕಾರಣವಾದುವು? ಮಾದರಿಯ ಪಾರ್ಲಿಮೆಂಟು ಎಂದು ಯಾವ ಪಾರ್ಲಿಮೆಂಟಿಗೆ ಹೆಸರು?

(೧೩) ಧರ್ಮಯುದ್ಧಗಳೆಂದರೇನು? ಅವು ಯಾವಾಗ ಮತ್ತು ಏಕೆ ಪ್ರಾರಂಭವಾದುವು? ಅವುಗಳಿಂದಾದ ಪರಿಣಾಮಗಳೇನು? ಇಂಗ್ಲಂಡಿನ ಅರಸರಲ್ಲಿ ಯಾರು ಇವುಗಳಲ್ಲಿ ಭಾಗವನ್ನು ವಹಿಸಿದರು?

(೧೪) ಫ್ರಾನ್ಸಿನೊಡನೆ ನೂರು ವರ್ಷಗಳ ಯುದ್ಧವು ಏಕೆ ಪ್ರಾರಂಭವಾಯಿತು? ಈ ಯುದ್ಧದಿಂದ್ದಾದ ಪರಿಣಾಮಗಳೇನು?

(೧೫) ಯಾರ್ಕ ಮತ್ತು ಲ್ಯಾಂಕ್ಯಾಸ್ಟರ ಈ ವಂಶಗಳಲ್ಲಿ ಯುದ್ಧವಾಗಲು ಕಾರಣಗಳೇನು? ಅವುಗಳಿಗೆ ವಾರ ಆಫ ದಿ ರೋಜೆಸ ಎಂದು ಹೆಸರೇಕೆ? ಯುದ್ಧಗಳಿಂದಾದ ಪರಿಣಾಮಗಳಾವುವು?

(೧೬) ಮಧ್ಯಯುಗದಲ್ಲಿ ಇಂಗ್ಲಂಡಿನ ಸಮಾಜರಚನೆ, ವ್ಯಾಪಾರ, ಉದ್ಯಮಗಳು, ಪಟ್ಟಣಗಳು, ಕಟ್ಟಡಗಳು, ಶಿಕ್ಷಣದ ವ್ಯವಸ್ಥೆ ಮನೋರಂಜನೆಯ ಸಾಧನೆಗಳು ಇವುಗಳನ್ನು ಕುರಿತು ನಿಮಗೆ ಗೊತ್ತಿದ್ದುದನ್ನು ಹೇಳಿರಿ.

(೧೭) ಕ್ರೈಸ್ತಧರ್ಮದ ಸ್ಥಾಪನೆಯನ್ನು ಮತ್ತು ಪ್ರಸಾರವನ್ನು ಯಾರು ಮಾಡಿದರು? ಇಂಗ್ಲಂಡಿನಲ್ಲಿ ಮಧ್ಯಯುಗದಲ್ಲಿ ಧಾರ್ಮಿಕ ವ್ಯವಸ್ಥೆ ಹೇಗಿದ್ದಿತು? ಧಾರ್ಮಿಕ ವಿಷಯಗಳಲ್ಲಿ ಸುಧಾರಣೆಯಾಗಬೇಕೆಂದು ಪ್ರಯತ್ನಿಸಿದವರಾರು?

(೧೮) ಮುಂದೆ ಹೇಳಿದ ಸ್ತ್ರೀ ಪುರುಷರ ವಿಷಯದಲ್ಲಿ ನಿಮಗೆ ಗೊತ್ತಿದ್ದುದೇನು? ಜ್ಯೂಲಿಯಸ್ ಸೀಝುರ, ಯೇಸುಕ್ರಿಸ್ತ, ಪಾಲ, ಪೋಪ ಗ್ರೇಗರಿ, ಚಾರ್ಲಮೇನ, ಆಲ್ಫ್ರೆಡ್, ಕ್ಯಾನ್ಯೂಟ, ಕ್ಯಾರೆಕ್ಟೇಟಸ್, ಬೊಡೇಶಿಯಾ, ಹಿಯರವರ್ಡ ದಿ ಸ್ಯಾಕ್ಸನ್, ಜೊನ್ ಆಫ ಆರ್ಕ, ವಿಕ್ಲಿಫ, ಫ್ರಾನ್ಸಿಸ್ ಸಾಧು, ಡಾಮಿನಿಕ್ ಸಾಧು.

(೧೯) ಮುಂದಿನ ಮಾತುಗಳನ್ನು ಕುರಿತು ಗೊತ್ತಿದ್ದುದನ್ನು ಹೇಳಿರಿ:—ಟೈಬಲ್, ವಿಟನ್‌ಗೇಮೂಟ, ಕರ್ಫ್ಯೂ ಬೆಲ್, ಡೂಮ್ಸಡೇ ಬುಕ್, ಲೋಲರ್ಡ್ಸ, ಡೇನ್ ಗೇಲ್ಡ, ಡ್ರುಯಿಡ ಜನರು, ಪವಿತ್ರ ರೋಮನ್ ಸಾಮ್ರಾಜ್ಯವು, ಮನ್ನೆಯರ ಮಂಡಳ, ಯೂನಿಯನ್ ಜ್ಯಾಕ್.

(೨೦) ಜ್ಯೂಲಿಯಸ್ ಸೀಝುರನ ಸೈನ್ಯದಲ್ಲಿ ನೀವು ಒಬ್ಬ ಸೈನಿಕನೆಂದು ತಿಳಿದು ಬ್ರಿಟನ್ನಿನ ಮತ್ತು ಅಲ್ಲಿಯ ಜನರ ವಿಷಯದಲ್ಲಿ ಮಾಹಿತಿಯನ್ನು ಹೇಳಿರಿ.

(೨೧) ಇಂಗ್ಲಂಡಿನಲ್ಲಿಯ ಅಂಗ್ಲೋ ಸ್ಯಾಕ್ಸನರ ಕಾಲದಲ್ಲಿಯ ನೀವು ಒಬ್ಬ ಒಕ್ಕಲಿಗನೆಂದು ತಿಳಿದು ನಾರ್ಮನರ ಆಳಿಕೆಯಿಂದಾದ ಪರಿಣಾಮಗಳನ್ನು ಕುರಿತು ನಿಮ್ಮ ಮಿತ್ರನಿಗೆ ಪತ್ರವನ್ನು ಬರೆಯಿರಿ.

---

# ೨ನೆಯ ಪ್ರಕರಣವು

## ಏಳನೆಯ ಹೆನ್ರಿ

ಜನ್ಮವು ೧೪೫೬, ರಾಜ್ಯಾರೋಹಣವು (೨೯ನೆಯ ವರ್ಷದಲ್ಲಿ) ೧೪೮೫;
ಮೃತ್ಯು ೧೫೦೯.

೧೪೮೫—೧೫೦೯

### ತತ್ಕಾಲೀನ ರಾಜ್ಯಕರ್ತರು

| ಸ್ಕಾಟಲಂಡ | ಫ್ರಾನ್ಸ | ಸ್ಪೇನ |
| --- | --- | --- |
| ೩ನೆಯ ಜೇಮ್ಸನು ೧೪೮೮ರ ವರೆಗೆ | ೮ನೆಯ ಚಾರ್ಲಸನು (೧೪೯೮ರ ವರೆಗೆ) | ಇಝಾಬೆಲಾ ಮತ್ತು ಫರ್ಡಿನಾಂಡ. |
| ೪ನೆಯ ಜೇಮ್ಸನು. | ೧೨ನೆಯ ಲುಯಿ. | |

### ಮಹತ್ವದ ಇಸ್ವಿಗಳು

೧೪೫೩ ತುರ್ಕಿ ಜನರು ಕಾನ್‌ಸ್ಟಾಂಟಿನೋಪಲ್ ಪಟ್ಟಣವನ್ನು ತೆಗೆದುಕೊಳ್ಳುವರು.
೧೪೮೭ ಸ್ಟಾರ್ ಚೆಂಬರ ಕೋರ್ಟಿನ ಸ್ಥಾಪನೆ.
೧೪೯೨ ಕೋಲಂಬಸನು ಅಮೇರಿಕೆಯ ಶೋಧವನ್ನು ಮಾಡುವನು.
೧೪೯೮ ವಾಸ್ಕೋ-ಡಿ-ಗಾಮಾ ಇವನು ಹಿಂದುಸ್ಥಾನದ ಕಡೆಗೆ ಹೋಗುವ ಜಲಮಾರ್ಗವನ್ನು ಶೋಧಿಸುವನು.
೧೦೫೨ ರಾಜಪುತ್ರ ಹೆನ್ರಿ ಮತ್ತು ಕ್ಯಾಥೆರಾಯಿನ್ ಇವರ ಲಗ್ನದ ನಿಶ್ಚಯವು.
೧೫೦೨ ಮಾರ್ಗಾರೆಟ ಮತ್ತು ಸ್ಕಾಟಲಂಡಿನ ೪ನೆಯ ಜೇಮ್ಸ ಇವರ ಲಗ್ನವು.

**ಏಳನೆಯ ಹೆನ್ರಿ**—ಇಂಗ್ಲಂಡಿನಲ್ಲಿ ೧೪೫೫—೧೪೮೫ ಈ ಮೂವತ್ತು ವರ್ಷಗಳಲ್ಲಿ ಇಂಗ್ಲಂಡಿನ ಪಟ್ಟಕ್ಕೆ ತನ್ನದೇ ಅಧಿಕಾರವಿರುವುದೆಂದು ಹೇಳುವ ಯಾರ್ಕ ಮತ್ತು ಲ್ಯಾಂಕೆಸ್ಟರ ಈ ಎರಡು ವಂಶಗಳ ನಡುವೆ '**ವಾರ ಆಫ್ ದಿ ರೋಜೆಸ್**'* ಎಂಬ ಯುದ್ಧವು ನಡೆದಿತ್ತು. ಈ ಯುದ್ಧದಿಂದ ಎಲ್ಲೆಲ್ಲಿಯೂ ಅವ್ಯವಸ್ಥೆಯಾಗಿತ್ತು. ಆದರೆ ಲ್ಯಾಂಕೆಸ್ಟರ ವಂಶದಲ್ಲಿಯ **ಮಾರ್ಗಾರೆಟ**

*ಲ್ಯಾಂಕೆಸ್ಟರ ವಂಶದ ಗುರ್ತು ಕೆಂಪು ಗುಲಾಬಿ ಹೂ (ರೋಜ) ಇತ್ತು, ಯಾರ್ಕ ವಂಶದ ಗುರ್ತು ಬಿಳಿಯ ಗುಲಾಬಿ ಹೂ ಇದ್ದಿತು. ಆದುದರಿಂದ ಈಯೆರಡು ವಂಶಗಳ ನಡುವೆ ಆದ ಯುದ್ಧಕ್ಕೆ ವಾರ್ ಆಫ್ ದಿ ರೋಜೆಸ್ ಎಂದು ಹೆಸರು ಬಂದಿತು.

ಎಂಬ ರಾಜಕನ್ಯೆಯ ಮಗನಾದ **ಹೆನ್ರಿ ಟ್ಯೂಡರ** ಇವನಿಗೆ ಬಾಸವರ್ಥ ಎಂಬಲ್ಲಿ ಜಯವು ದೊರೆತುದರಿಂದ ಈ ಯುದ್ಧವು ನಿಂತಿತು (೧೪೮೫). ಯುದ್ಧದಲ್ಲಿ ಜಯ ಸಂಪಾದನೆ ಮತ್ತು ವಂಶಪರಂಪರೆಯ ಅಧಿಕಾರವು ಈ ಎರಡೂ ದೃಷ್ಟಿಯಿಂದ ಪಟ್ಟಕ್ಕೆ ತಾನೇ ಬಾಧ್ಯಸ್ಥನೆಂಬುದನ್ನು ತೋರಿಸಿ ಹೆನ್ರಿ ಪಾರ್ಲಿಮೆಂಟಿನ ಮಾನ್ಯತೆಯನ್ನು ಪಡೆದು ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಮುಂದೆ ಅವನು ಯಾರ್ಕವಂಶದ ಪಕ್ಷದವರನ್ನು ತನ್ನ ಕಡೆಗೆ ಒಲಿಸಿಕೊಳ್ಳಲು ಆ ವಂಶದಲ್ಲಿಯ **ಎಲಿಝಾಬೆಥ** ಎಂಬ ರಾಜಕನ್ನೆಯನ್ನು (೪ನೆಯ ಎಡವರ್ಡನ ತಂಗಿ) ಲಗ್ನವಾದನು (೧೪೮೬). ಈ ಸಮಯದಲ್ಲಿ ಎಲಿಝಾಬೆಥ್ ಇವಳ ಕಕ್ಕನ ಮಗನೂ ವಾರವಿಕದ ಅರ್ಲನೂ ಆದ **ಎಡವರ್ಡನೆಂಬ** ಅಲ್ಪ ವಯಸ್ಕನಾದ



ಏಳನೆಯ ಹೆನ್ರಿ

ರಾಜಪುತ್ರನು ಯಾರ್ಕವಂಶದ ಒಬ್ಬನೇ ಒಬ್ಬ ಪ್ರತಿನಿಧಿಯಾಗಿದ್ದನು. ಆದುದರಿಂದ ಅವನ ಪಕ್ಷದ ಜನರು ಮುಂದೆ ತೊಂದರೆಯನ್ನು ಹುಟ್ಟಿಸಬಾರದೆಂದು ಹೆನ್ರಿ ಅವನನ್ನು ಸೆರೆಯಲ್ಲಿಟ್ಟನು. ಇಷ್ಟೆಲ್ಲವನ್ನು ಮಾಡಿದರೂ ಹೆನ್ರಿಗೆ ಶಾಂತತೆಯಿರಲಿಲ್ಲ. ಅವನು ಸಮೀಪದ ವಾರಸದಾರನಾಗಿರಲಿಲ್ಲ. ಆದುದರಿಂದ ಅವನ ವಿರುದ್ಧವಾಗಿ ಒಳಸಂಚುಗಳೂ ಕಾರಸ್ಥಾನಗಳೂ ಬಂಡುಗಳೂ ಹುಟ್ಟಿದುವು.

***ಟ್ಯೂಡರ ವಂಶದವರ ಪ್ರಬಲವೂ ಅನಿಯಂತ್ರಿತವೂ ಆದ ರಾಜಸತ್ತೆ**—ಏಳನೆಯ ಹೆನ್ರಿ ಪಟ್ಟಕ್ಕೆ ಬಂದ ಬಳಿಕ ಇಂಗ್ಲಂಡಿನಲ್ಲಿ ಟ್ಯೂಡರ ವಂಶದ ಸತ್ತೆ ಪ್ರಾರಂಭವಾಗಿ ೧೬೦೩ರ ವರೆಗೆ ಬಾಳಿತು. ಕಳೆದ ೩೦ ವರ್ಷಗಳ ಯುದ್ಧದಲ್ಲಿ ಅನೇಕ ಮನ್ನೆಯರೂ ಸರದಾರರೂ ಕೊಲ್ಲಲ್ಪಟ್ಟಿದ್ದರು. ಅದರಿಂದ ಮಧ್ಯಯುಗದಲ್ಲಿ ಸರದಾರವರ್ಗಕ್ಕಿದ್ದ ಮಹತ್ವವು ಈಗ ಬಹ್ವಂಶ

---

*ಟ್ಯೂಡರ ವಂಶದ ವಂಶವೃಕ್ಷವನ್ನು ಮುಂದಿನ ಪುಟದಲ್ಲಿ ನೋಡಿರಿ.


ಟ್ಯೂಡರ ವಂಶದ ವಂಶವೃಕ್ಷವು
ಏಳನೆಯ ಹೆನ್ರಿ
೧೪೮೫ — ೧೫೦೯
ಆರ್ಥರ
(ಮೃತ್ಯು ೧೫೦೨)
೮ನೆಯ ಹೆನ್ರಿ
(೧೫೦೯ — ೧೫೪೭)
ಮಾರ್ಗರೆಟ್ (ಸ್ಕಾಟಲಂಡಿನ ೪ನೆಯ ಜೇಮ್ಸನೊಡನೆ ಲಗ್ನವು)
ಮೇರಿ
ಮೊದಲನೆಯ ಲಗ್ನವು ೧೨ನೆಯ ಲುಯಿಯೊಡನೆ
ಚಾರ್ಲಸ್ ಬ್ರ್ಯಾಂಡನನೊಡನೆ ಪುನರ್ವಿವಾಹವು. (ಡ್ಯೂಕ್ ಆಫ್ ಸಫೊಕ್)
೫ನೆಯ ಜೇಮ್ಸ
ಮೇರಿ
(೧೫೫೩ — ೧೫೫೮)
ಎಲಿಝಾಬೆಥ್
(೧೫೫೮ — ೧೬೦೩)
೬ನೆಯ ಎಡ್ವರ್ಡ
(೧೫೪೭ — ೧೫೫೩)
ಫ್ರಾನ್ಸಿಸ್ (ಹೆನ್ರಿ ಗ್ರೆ ಇವನೊಡನೆ ಲಗ್ನವು)
(೧ನೆಯ ಲಗ್ನವು ೧೫೫೮) ಫ್ರಾನ್ಸಿಸ್ ಇವನೊಡನೆ
ಮೇರಿ
(ಸ್ಕಾಟ್‌ಲಂಡಿನ ರಾಣಿ)
(೨ನೆಯ ಲಗ್ನವು ೧೫೬೫) ಲಾರ್ಡ ಡಾರ್ನ್ಲೆ ಇವನೊಡನೆ
ಜೇನ ಗ್ರೇ
(ಗಿಲ್‌ಫರ್ಡ ಡಡ್ಲೆ ಇವನೊಡನೆ ಲಗ್ನವು) ಇವಳು ೧೫೫೪ರಲ್ಲಿ ಶೂಲಕ್ಕೇರಿಸಲ್ಪಟ್ಟಳು.
೧ನೆಯ ಜೇಮ್ಸ (ಸ್ಕಾಟಲಂಡಿನ ೬ನೆಯ ಜೇಮ್ಸ)
(೧೬೦೩ — ೧೬೨೫)
ಸ್ಟುವರ್ಟ ವಂಶದ ಮೊದಲನೆಯ ಅರಸನು.

ದಿಂದ ಕಡಿಮೆಯಾಗಿತ್ತು. ಟ್ಯೂಡರ ವಂಶದ ರಾಜ್ಯಕರ್ತರ ನೀತಿಯಾದರೂ ಸರದಾರರ ಮಹತ್ವವನ್ನೂ ವರ್ಚಸ್ಸನ್ನೂ ಕಡಿಮೆಮಾಡುವುದೇ ಆಗಿತ್ತು. ಇದೇ ಸಮಯದಲ್ಲಿ ಯುದ್ಧಗಳಲ್ಲಿ ತುಬಾಕಿಯ ಮದ್ದಿನ ಉಪಯೋಗವಾಗಲು ಪ್ರಾರಂಭವಾಯ್ತು. ಆದುದರಿಂದ ಕುದುರೆ ಚಿಲಕತ್ತುಗಳನ್ನು ಇಟ್ಟುಕೊಂಡಿರಲು ಸಮರ್ಥರಾದ ಸರದಾರರು ಮತ್ತು ಕನಿಷ್ಠರೆಂದು ತಿಳಿಯಲ್ಪಡುತ್ತಿದ್ದ ಕಾಲಾಳುಗಳು ಇವರಲ್ಲಿ ಉಚ್ಚನೀಚ ತಾರತಮ್ಯವು ಕಡಿಮೆಯಾಯ್ತು, ಮತ್ತು ಅಶ್ವಾರೋಹಿಗಳಾದ ಸರದಾರರಿಗೆ ಮೊದಲಿನಂತೆ ಮಾನವು ದೊರೆಯದಂತಾಯ್ತು. ಅರಸರು ಕೆಳಗಿನ ವರ್ಗದ ಸಿಪಾಯಿಗಳನ್ನು ಸೈನ್ಯದಲ್ಲಿ ಸೇರಿಸತೊಡಗಿದರು. ಇದರಿಂದ ಸರದಾರರ ವರ್ಚಸ್ಸಿಗೆ ಮತ್ತೊಂದು ಆಘಾತವಾಯ್ತು. ಮಧ್ಯಯುಗದಲ್ಲಿ ಪಾರ್ಲಿಮೆಂಟು ಅನೇಕ ಕಾಯ್ದೆಗಳನ್ನು ಮಾಡಿ ರಾಜಸತ್ತೆಯ ಮೇಲೆ ನಿಯಂತ್ರಣವನ್ನು ಹಾಕಿತ್ತು. ರಾಜನಿಗೆ ಪಾರ್ಲಿಮೆಂಟಿನ ಸಮ್ಮತಿಯ ಹೊರ್ತು ಕರಗಳನ್ನು ಕೂಡಿಸಲು ಬರುತ್ತಿದ್ದಿಲ್ಲ. ಆದರೆ ಟ್ಯೂಡರ ವಂಶದ ರಾಜರು ಪಾರ್ಲಿಮೆಂಟಿನ ಸಮ್ಮತಿ ಅವಶ್ಯವಿಲ್ಲದ ಮಾರ್ಗದಿಂದಲೇ ಹಣವನ್ನು ಕೂಡಿಸಿ ಪಾರ್ಲಿಮೆಂಟಿನ ಮರ್ಯಾದೆಯನ್ನು ಕಾಯ್ದು ರಾಜ್ಯಕಾರಭಾರವನ್ನು ಮಾಡುತ್ತಿದ್ದರು. ಪಾರ್ಲಿಮೆಂಟಿನ ಒಪ್ಪಿಗೆಯಿಂದ್ದ ಕರಗಳಿಂದ ಬರುವ ಹಣಕ್ಕಿಂತ ಹೆಚ್ಚಾಗಿ ಹಣವು ಬೇಕಾಗಿದ್ದರೆ ಅವರು ಆಯಾತವಸ್ತುಗಳ ಮೇಲಿನ ಸುಂಕದ ಪ್ರಮಾಣವನ್ನು ಹೆಚ್ಚಿಸಿ, ಸರ್ವಾಧಿಕಾರಗಳನ್ನು (Monopolies) ಮಾರಿ, ಮನ್ನೆಯರಿಗೂ ಸರದಾರರಿಗೂ ಹೆಚ್ಚಿನ ದಂಡವನ್ನು ಮಾಡಿ, ಅಥವಾ ಒತ್ತಾಯದ ಸಾಲಗಳನ್ನು (Benevolences) ತೆಗೆದುಕೊಂಡು ಹಣವನ್ನು ಕೂಡಿಸುತ್ತಿದ್ದರು. ಪಾರ್ಲಿಮೆಂಟಿನ ಸಮ್ಮತಿಯಿಲ್ಲದೆ ಕಾಯ್ದೆಗಳನ್ನು ಮಾಡುವ ಅಧಿಕಾರವು ಅರಸರಿಗಿರಲಿಲ್ಲ. ಆದರೆ ಜಾಹೀರನಾಮೆಗಳನ್ನು (Proclamation) ಪ್ರಕಟಿಸಿ ತಾತ್ಪೂರ್ತಿಕ ಕಾಯ್ದೆಗಳನ್ನು ಮಾಡಿಯೂ, ಇದ್ದ ಕಾಯ್ದೆಗಳನ್ನು ರದ್ದುಗೊಳಿಸಿಯೂ ಪಾರ್ಲಿಮೆಂಟಿನ ನಿಯಂತ್ರಣವನ್ನು ಕುಗ್ಗಿಸುತ್ತಿದ್ದರು. ಇಂಗ್ಲಂಡಿನಲ್ಲಿಯ ಯಾವ ವ್ಯಕ್ತಿಯನ್ನೂ ಬಹಿರಂಗ ವಿಚಾರಣೆಯಿಲ್ಲದೆ ಬಂಧನದಲ್ಲಿಡಲು ರಾಜ್ಯಾಧಿಕಾರಿಗಳಿಗೆ ಅಧಿಕಾರವಿರಲಿಲ್ಲ. ಆದರೆ ಅರಸರು ಈ ವಿಷಯದಲ್ಲಿಯೂ ಯುಕ್ತಿಗಳನ್ನು ಕಲ್ಪಿಸಿ ತಮ್ಮ ಕೆಲಸವನ್ನು ಸಾಧಿಸುತ್ತಿದ್ದರು. ಜ್ಯೂರಿಯಲ್ಲಿಯ ಜನರ ಮೇಲೆ ಅಪ್ರತ್ಯಕ್ಷವಾಗಿ ವರ್ಚಸ್ಸನ್ನು ಉಪಯೋಗಿಸಿಯೂ, ರಾಜದ್ರೋಹದ ಕಾಯ್ದೆಯ ವ್ಯಾಪ್ತಿಯನ್ನು ಹೆಚ್ಚಿಸಿಯೂ, ಹೊಸ ನ್ಯಾಯಾಸನಗಳನ್ನು ಸ್ಥಾಪಿಸಿಯೂ ಅರಸರು ತಮ್ಮ ಮೇಲಿನ ನಿರ್ಬಂಧ

ವನ್ನು ನಿರರ್ಥಕಗೊಳಿಸುತ್ತಿದ್ದರು. ಟ್ಯೂಡರ ವಂಶದ ರಾಜರ ಈ ನೀತಿಯಿಂದ ಅವರ ಸತ್ತೆ ಪ್ರಬಲವೂ ಅನಿಯಂತ್ರಿತವೂ ಆಯ್ತು. ಆದರೂ ಜನರಿಗೆ ಅಪ್ರಿಯ ರಾದವರನ್ನೆ ಶಿಕ್ಷೆಗೆ ಗುರಿಮಾಡುವ ಪ್ರವೃತ್ತಿ ಅವರದಿದ್ದುದರಿಂದ ಸಾಮಾನ್ಯ ಜನರ ಬೆಂಬಲವು ಅವರಿಗೆ ದೊರೆಯುತ್ತಿತ್ತು. ಈ ಕಾರಣದಿಂದ ರಾಜಸತ್ತೆ ಪ್ರಬಲವೂ ಅನಿಯಂತ್ರಿತವೂ ಆಗಿದ್ದರೂ ಅದು ಲೋಕಪ್ರಿಯವಾಗಿತ್ತು.

**ಲ್ಯಾಂಬರ್ಟ ಸಿಮ್‌ನೆಲನ ಬಂಡು** (೧೪೮೬ – ೮೭)— **ಲ್ಯಾಂಬರ್ಟ** ಸಿಮ್‌ನೆಲ ಎಂಬ ೧೪ ವರ್ಷದ ಹುಡುಗನನ್ನು ಮುಂದೆ ಮಾಡಿ ಹೆನ್ರಿಯ ಶತ್ರುಗಳು ಐರ್ಲಂಡಿನಲ್ಲಿ ಬಂಡನ್ನು ಹೂಡಿದರು. ಈತನು ಯಾರ್ಕವಂಶದ ವಾರ್‌ವಿಕದ ಅರ್ಲನಾದ ಎಡವರ್ಡನೆಂದೂ ಅವನು ಕಾರಾಗೃಹದಿಂದ ಓಡಿ ಬಂದಿರುವನೆಂದೂ ಅವರು ಪ್ರಕಟಿಸಿದರು. ಅವರ ಮಾತನ್ನು ಅನೇಕರು ನಂಬಿದರು. ಯಾರ್ಕವಂಶದ ಪಕ್ಷಪಾತಿಗಳು ಹೆನ್ರಿಯ ವಿರುದ್ಧವಾಗಿ ಬಂಡನ್ನು ಮಾಡಲು ಇದು ಉತ್ತಮವಾದ ಸಂಧಿಯೆಂದು ಬಗೆದು ಅವರನ್ನು ಕೂಡಿದರು. ಅವರು ಆ ಹುಡುಗನಿಗೆ ಐರ್ಲಂಡಿನಲ್ಲಿ ರಾಜ್ಯಾಭಿಷೇಕವನ್ನು ಮಾಡಿದರು. ಆ ಬಳಿಕ ಸಿಮ್‌ನೆಲನು ತನ್ನ ಅನುಯಾಯಿಗಳೊಡನೆ ಲ್ಯಾಂಕೆಶಾಯರ ಪರಗಣೆಗೆ ಬಂದನು. ಅಲ್ಲಿ ಯಾರ್ಕವಂಶದ ವಿಷಯದಲ್ಲಿ ಸಹಾನುಭೂತಿಯುಳ್ಳ ಅನೇಕ ಜನರು ಅವನನ್ನು ಕೂಡಿಕೊಂಡರು. ಅವನು ಮುಂದೆ ಲಂಡನಿನ ಮೇಲೆ ದಂಡೆತ್ತಿ ಹೋಗುವಾಗ **ಸ್ಟೋಕ** (ನಾಟಿಂಗ ಹ್ಯಾಮಶಾಯರ) ಎಂಬಲ್ಲಿ ಹೆನ್ರಿಯ ಸೈನ್ಯವು ಅವನನ್ನು ತಡೆಯಿತು (೧೪೮೬). ಅಲ್ಲಿ ಸಿಮ್‌ನೆಲನು ಸೋತು ಹೆನ್ರಿಯ ಸೆರೆಯಾಳಾದನು. ಹೆನ್ರಿ ಅವನನ್ನು ಕೊಲ್ಲದೆ ಕಾರಾಗೃಹದಲ್ಲಿಟ್ಟನು.

**ಬ್ರಿಟನಿ ಸಂಸ್ಥಾನಕ್ಕೆ ಹೆನ್ರಿಯ ಸಾಹಾಯ್ಯವು**— ಇದಾದ ಬಳಿಕ ಹೆನ್ರಿ ಫ್ರಾನ್ಸಿನ ರಾಜಕಾರಣದಲ್ಲಿ ಕೈಹಾಕಿ ಇಂಗ್ಲಂಡಿನ ಮಹತ್ವವನ್ನೂ ವರ್ಚಸ್ಸನ್ನೂ ಹೆಚ್ಚಿಸಲು ಯತ್ನಿಸಿದನು. ಫ್ರಾನ್ಸಿನ ಅರಸನಾದ ಎಂಟನೆಯ ಚಾರ್ಲಸನು ಫ್ರಾನ್ಸಿನಲ್ಲಿಯ ಸ್ವತಂತ್ರವಾಗಿದ್ದ ಬ್ರಿಟನಿ ಎಂಬ ಚಿಕ್ಕ ಸಂಸ್ಥಾನವನ್ನು ಗೆದ್ದುಕೊಳ್ಳಲು ಸೈನ್ಯವನ್ನು ಕಳಿಹಿದನು. ಆ ಸಮಯದಲ್ಲಿ ಈ ಸಂಸ್ಥಾನವು ಡಚೆಸ್ ಅನ್ ಎಂಬವಳ ವಶದಲ್ಲಿತ್ತು. ಅವಳು ಚಾರ್ಲಸನ ವಿರುದ್ಧವಾಗಿ ಹೆನ್ರಿಯ ಸಾಹಾಯ್ಯವನ್ನು ಕೇಳಿದಳು. ಫ್ರಾನ್ಸಿನ ರಾಜಕಾರಣದಲ್ಲಿ ಕೈಹಾಕಲು ಇದು ಯೋಗ್ಯಸಂಧಿಯೆಂದು ಬಗೆದು ಹೆನ್ರಿ ಬ್ರಿಟನಿಯ ರಾಣಿಗೆ ಸಾಹಾಯ್ಯವೀಯಲು ನಿಶ್ಚಯಿಸಿದನು. ಈ ಕಾರ್ಯಕ್ಕೆ ಪಾರ್ಲಿಮೆಂಟಿನಿಂದ ಹಣದ ಸಾಹಾಯ್ಯವು ದೊರೆತ ಬಳಿಕ ಅವನು ಫ್ರಾನ್ಸಿಗೆ ಸೈನ್ಯವನ್ನು ಕಳಿಹಿ

ದನು. ಆದರೆ ಈ ಸೈನ್ಯವು ಫ್ರಾನ್ಸದೇಶವನ್ನು ಸೇರುವ ಮೊದಲೆ ಅನ್ ರಾಣಿ ಚಾರ್ಲಸನಿಗೆ ಶರಣುಹೋದಳು ಮತ್ತು ಅವನನ್ನು ಲಗ್ನವಾದಳು (೧೪೯೧). ಚಾರ್ಲಸನ ಮನಸ್ಸಿನಲ್ಲಿ ಇಟಲಿಯ ಮೇಲೆ ದಂಡೆತ್ತಿ ಹೋಗಬೇಕೆಂದು ಇದ್ದುದರಿಂದ ಆತನು ಹೆನ್ರಿಗೆ ಒಂದುವರೆ ಲಕ್ಷ ಪೌಂಡುಗಳನ್ನು ಕೊಟ್ಟು ಅವನೊಡನೆ ಒಪ್ಪಂದವನ್ನು ಮಾಡಿಕೊಂಡನು (೧೪೯೨). ಇಂಗ್ಲಿಶ್ ಸೈನ್ಯವು ಇಂಗ್ಲಂಡಿಗೆ ಮರಳಿತು. ಈ ಬಗೆಯಾಗಿ ಫ್ರಾನ್ಸಿನಲ್ಲಿಯ ಸ್ವತಂತ್ರವಾಗಿ ಉಳಿದಿದ್ದ ಬ್ರಿಟನಿ ಸಂಸ್ಥಾನವು ಫ್ರಾನ್ಸಿನ ರಾಜ್ಯಕ್ಕೆ ಕೂಡಿದುದರಿಂದ ಫ್ರಾನ್ಸು ಒಂದು ಸಂಘಟಿತವಾದ ರಾಷ್ಟ್ರವಾಯ್ತು.

**ಪರಕೀನ ವಾರಬೆಕನ ಬಂಡು** (೧೪೯೨—೯೭)—ಇದೇ ಸಮಯದಲ್ಲಿ **ಪರಕೀನ ವಾರಬೆಕನೆಂಬ** ಒಬ್ಬ ಸಾಹಸಿಯಾದ ತರುಣನು ಐರ್ಲಂಡಿನಲ್ಲಿ ಬಂಡನ್ನು ಹೂಡಿದನು. ೯ ವರ್ಷಗಳ ಹಿಂದೆ ಸೆರೆಯಲ್ಲಿ ಕೊಲ್ಲಲ್ಪಟ್ಟನೆಂದು ತಿಳಿಯಲ್ಪಟ್ಟಿದ್ದ ರಿಚರ್ಡ ಡ್ಯೂಕ ಆಫ್ ಯಾರ್ಕನು ತಾನೇ ಎಂದು ಅವನು ಹೇಳತೊಡಗಿದನು. ಐರಿಶ್ ಜನರಿಗೆ ಇವನ ಮಾತು ನಿಜವೆಂದು ತೋರಿತು. ಅವರು ಇವನಿಗೆ ಸಾಹಾಯ್ಯಮಾಡಲು ಸಿದ್ಧರಾದರು. ಈ ಬಂಡಿನ ಸುದ್ದಿಯನ್ನು ಕೇಳಿದೊಡನೆ ಹೆನ್ರಿ ಪರಕೀನನನ್ನು ಹಿಡಿಯಲು ಆಜ್ಞೆಯಿತ್ತನು. ಆಗ ಪರಕೀನನು ಬರ್ಗಂಡಿಯ (ಫ್ರಾನ್ಸಿನ ಪೂರ್ವದಿಕ್ಕಿನಲ್ಲಿಯ ಒಂದು ಸಂಸ್ಥಾನವು) ರಾಣಿಯಾದ ಮಾರ್ಗಾರೆಟ್ ಎಂಬವಳು ಯಾರ್ಕವಂಶದವಳಿದ್ದುದರಿಂದ ಅವಳಿಂದ ತನಗೆ ಸಾಹಾಯ್ಯವು ದೊರೆಯಬಹುದೆಂದು ಆಶೆಯಿಂದ ಬರ್ಗಂಡಿಗೆ ಓಡಿಹೋದನು. ಮಾರ್ಗಾರೆಟ ರಾಣಿಗೆ ಲ್ಯಾಂಕೆಸ್ಟರ ವಂಶದ ವಿರುದ್ಧವಾಗಿ ಕಾರಸ್ಥಾನವನ್ನು ಮಾಡುವುದಿದ್ದುದರಿಂದ ಅವಳು ಅವನಿಗೆ ಆಶ್ರಯವಿತ್ತುದಲ್ಲದೆ 'ತನ್ನ ಸೋದರಳಿಯನಾದ ರಾಜಪುತ್ರ ರಿಚರ್ಡನು ಅವನೇ' ಎಂದು ಪ್ರಕಟಿಸಿದಳು. ಬರ್ಗಂಡಿಯ ರಾಣಿಯ ಸಾಹಾಯ್ಯವನ್ನು ಪಡೆದು ೨೦೦೦ ಯೋಧರ ಸೈನ್ಯದೊಡನೆ ಪರಕೀನನು ಇಂಗ್ಲಂಡಿನ ಕೆಂಟ ಪರಗಣೆಗೆ ಬಂದನು; ಆದರೆ ಅಲ್ಲಿ ಅವನ ಬೇಳೆ ಬೇಯಲಿಲ್ಲ. ಆ ಬಳಿಕ ಅವನು ತಿರುಗಿ ಐರ್ಲಂಡಿಗೆ ಹೋದನು (೧೪೯೫); ಆದರೆ ಅಲ್ಲಿ ತನಗೆ ಸಾಹಾಯ್ಯವು ದೊರೆವ ಸಂಭವವು ಅವನಿಗೆ ತೋರಲಿಲ್ಲ. ಸರ್ ಎಡ್ವರ್ಡ ಪಾಯನಿಂಗ್ಸ ಎಂಬವನು ೧೪೯೪ರಿಂದ ಐರ್ಲಂಡಿನ ಗವರ್ನರನಾಗಿದ್ದನು. ಆತನು ತನ್ನ ಉಗ್ರನೀತಿಯಿಂದ ಅಲ್ಲಿ ಶಾಂತತೆಯನ್ನು ಕಾಯ್ದಿದ್ದನು. ಐರ್ಲಂಡಿನಲ್ಲಿಯೂ ತನಗೆ ಸಾಹಾಯ್ಯವು ದೊರೆಯದೆಂದು ಕಂಡು ಪರಕೀನನು ಸ್ಕಾಟಲಂಡಿಗೆ ಹೋದನು. ಇತ್ತ ಸ್ಕಾಟಲಂಡಿನ

ಅರಸನಾದ ನಾಲ್ಕನೆಯ ಜೇವ್ಸ್ಸನು ಇಂಗ್ಲಂಡಿಗೆ ದಾಳಿಯಿಕ್ಕುವ ವಿಚಾರದಲ್ಲಿದ್ದನು. ಅವನು ಪರಕೀನನನ್ನು ಬಹು ಉತ್ಸಾಹಪೂರ್ವಕವಾಗಿ ಸ್ವಾಗತಿಸಿದನು. ಪರಕೀನನು ಸ್ಕಾಟಿಶ್ ಸೈನ್ಯದೊಡನೆ ಹೊರಟು ಇಂಗ್ಲಂಡಿನ ಉತ್ತರ ಭಾಗದ ಪರಗಣೆಯ ಮೇಲೆ ದಂಡೆತ್ತಿ ಹೋದನು (೧೪೯೬). ಆದರೆ ಅಲ್ಲಿ ಅವನು ಸೋತು ಸ್ಕಾಟ್ಲಲಂಡಿಗೆ ತಿರುಗಿ ಹೋಗಬೇಕಾಯ್ತು. ಹೀಗೆ ೮–೧೦ ವರ್ಷಗಳಿಂದ ರಾಜ್ಯದಲ್ಲಿ ಎಡೆಬಿಡದೆ ಬಂಡುಗಳು ನಡೆದುದರಿಂದ ಸೈನ್ಯದ ವೆಚ್ಚಕ್ಕೋಸುಗ ಹೆನ್ರಿ ಜನರ ಮೇಲೆ ಭಾರವಾದ ಕರಗಳನ್ನು ಕೂಡಿಸಬೇಕಾಯ್ತು. ಈ ಕರಗಳ ಕಾಟಕ್ಕೆ ಬೇಸತ್ತು ಕಾರ್ನವಾಲಿನಲ್ಲಿಯ ಜನರು ಬಂಡನ್ನು ಪ್ರಾರಂಭಿಸಿದರು. ಈ ಬಂಡಿನ ಲಾಭವನ್ನು ಪಡೆಯಲು ಪರಕೀನನು ಕಾರ್ನವಾಲಿಗೆ ಹೋದನು. ಆದರೆ ಹೆನ್ರಿಯ ಸೈನ್ಯವು ಆ ಬಂಡನ್ನು ಮುರಿದು ಪರಕೀನನನ್ನು ಸೆರೆಹಿಡಿಯಿತು (೧೪೯೭). ಪರಕೀನನು ತಾನು ನಿಜವಾಗಿಯೂ ಡ್ಯೂಕ್ ಆಫ್ ಯಾರ್ಕನಲ್ಲವೆಂದು ಎಲ್ಲರ ಮುಂದೆಯೂ ಒಪ್ಪಿಕೊಂಡನು. ಹೆನ್ರಿ ಆತನನ್ನು ಕೊಲ್ಲಿಸದೆ ಲಂಡನ್ನಿನ ಕಾರಾಗೃಹಕ್ಕೆ ಅಟ್ಟಿದನು. ಆದರೆ ಪರಕೀನನು ಎಡವರ್ಡ ಅರ್ಲ ಆಫ್ ವಾರವಿಕ್ ಇವನೊಡನೆ ಸಂಚುಮಾಡಿ ಕಾರಾಗೃಹದಿಂದ ಓಡಿಹೋಗಲು ಯತ್ನಿಸಿದುದರಿಂದ ಹೆನ್ರಿ ಇವನನ್ನೂ ಎಡವರ್ಡ ಅರ್ಲ ಆಫ್ ವಾರವಿಕನನ್ನೂ ಶೂಲಕ್ಕೇರಿಸಿದನು (೧೪೯೯).

**ಹೆನ್ರಿಯ ಮಂತ್ರಿಗಳೂ ಅವನ ಧನಲೋಭವೂ**–ರಾಜಸತ್ತೆಯನ್ನು ಪ್ರಬಲವಾಗಿಯೂ ಅನಿಯಂತ್ರಿತವಾಗಿಯೂ ಮಾಡುವುದೇ ಹೆನ್ರಿಯ ನೀತಿಯಾಗಿತ್ತು. ಈ ಕೆಲಸದಲ್ಲಿ ಅವನಿಗೆ **ಆರ್ಚಬಿಶಪ್ ಮಾರ್ಟನ, ಎಂಪಸನ್,** ಮತ್ತು ಡಡ್ಲೆ ಈ ಮಂತ್ರಿಗಳ ಸಾಹಾಯ್ಯವು ಬಹಳವಾಗಿತ್ತು. ಜನರಿಂದ ಅವನು ಕಾಣ್ಕೆಗಳನ್ನೂ ಒತ್ತಾಯದ ಸಾಲಗಳನ್ನೂ ತೆಗೆದುಕೊಳ್ಳುವ ಪ್ರಘಾತವನ್ನು ಕೈಕೊಂಡನು. ಸರದಾರರಿಂದ 'ಕಾಣ್ಕೆ'ಯ ರೂಪದಿಂದ ಧನವನ್ನು ಸಂಗ್ರಹಿಸುವ ಕಾರ್ಯದಲ್ಲಿ ಮಾರ್ಟನನು ಅತ್ಯಂತ ಕುಶಲನಾಗಿದ್ದನು. ವಿಲಾಸದಲ್ಲಿ ಆಯುಷ್ಯವನ್ನು ಕಳೆವ ಸರದಾರರನ್ನು ಕುರಿತು "ನೀವು ವಿಲಾಸಕ್ಕೋಸುಗ ಧನವನ್ನು ನೀರಿನಂತೆ ವ್ಯಯಮಾಡುತ್ತೀರಿ, ವಿಲಾಸವನ್ನು ಕಡಿಮೆಮಾಡಿ 'ಕಾಣ್ಕೆ'ಯೆಂದು ರಾಜನಿಗೆ ಸ್ವಲ್ಪ ಹಣವನ್ನು ಕೊಡುವುದು ನಿಮಗೆ ಭಾರವಾಗದು" ಎಂದು ಹೇಳುತ್ತಿದ್ದನು. ಕೈಯನ್ನು ಬಿಗಿಹಿಡಿದು ವೆಚ್ಚಮಾಡುವ ಸರದಾರರಿಗೆ, "ನೀವು ಕೈಯನ್ನು ಬಿಗಿಹಿಡಿದು ವೆಚ್ಚಮಾಡುವಿರಿ. ಇದರಿಂದ ನೀವು ಬಹಳ ಧನವನ್ನು ಸಂಗ್ರಹಿಸಿರಬಹುದು. ರಾಜರಿಗೆ 'ಕಾಣ್ಕೆ'ಯೆಂದು ಈ ಸಂಗ್ರಹದ ಕೆಲ

ವೊಂದು ಅಂಶವನ್ನು ನೀವು ಕೊಡುವುದು ಉಚಿತವು" ಎಂದು ಹೇಳುತ್ತಿದ್ದನು. ಮೊರ್ಟನನ ಈ ನೀತಿ '**ಮೊರ್ಟನನ ಮುಳ್ಳು**' (Morton's fork) ಎಂದು ಹೆಸರಾಯ್ತು, ಏಕೆಂದರೆ ಸರದಾರರು ಹೇಗೆ ಜೀವಿಸುತ್ತಿದ್ದರೂ ಈ ನೀತಿ ಅವ ರನ್ನು ಚುಚ್ಚದಿರುತ್ತಿರಲಿಲ್ಲ. ಮನ್ನೆಯರ (ಲಾರ್ಡರ) ಸತ್ತೆಯನ್ನೂ ವರ್ಚ ಸ್ಸನ್ನೂ ತಗ್ಗಿಸಿ ಅವರಿಂದ ಅಪರಾಧವೇನಾದರೂ ಆದರೆ ಅದಕ್ಕೋಸುಗ ಉಗ್ರ ವಾದ ದಂಡವನ್ನು ವಿಧಿಸುವುದು ಹೆನ್ರಿಯ ಮತ್ತು ಅವನ ಮಂತ್ರಿಗಳ ನೀತಿಯಿ ದ್ದುದರಿಂದ ಹೆನ್ರಿಗೆ ಸಾಮಾನ್ಯ ಜನರ ಸಹಾನುಭೂತಿ ದೊರೆಯಿತು. ಹೆನ್ರಿ ಮಿತವ್ಯಯಿಯೂ ಧನಲೋಭಿಯೂ ಆಗಿದ್ದುದರಿಂದ ಅವನು ಮೇಲೆ ಹೇಳಿದ ಮಾರ್ಗದಿಂದ ಬಹಳ ಧನವನ್ನು ಸಂಗ್ರಹಿಸಿದನು. ಆದುದರಿಂದ ಹಣಕ್ಕೋಸುಗ ಪಾರ್ಲಿಮೆಂಟ ಸಭೆಯನ್ನು ಅವಲಂಬಿಸಿರುವುದು ಅವನಿಗೆ ಅವಶ್ಯವಾಗಲಿಲ್ಲ.

**ಸ್ಟಾರ ಚೆಂಬರ ಕೋರ್ಟಿನ ಸ್ಥಾಪನೆ** (೧೪೮೭)—ಹೆನ್ರಿ ಪಟ್ಟಕ್ಕೆ ಬಂದು ಎರಡು ವರ್ಷಗಳಾದ ಬಳಿಕ ಮನ್ನೆಯರ ಮತ್ತು ಸರದಾರರ ಸತ್ತೆಯನ್ನು ತಗ್ಗಿ ಸಲು ಒಂದು ಹೊಸ ಕೋರ್ಟನ್ನು ಸ್ಥಾಪಿಸಿದನು. ಪ್ರಿವಿ ಕೌನ್ಸಿಲಿನಲ್ಲಿಯ (ರಾಜನಿಗೆ ಆಲೋಚನೆಯನ್ನು ಹೇಳುವ ಮಂಡಳ) ರಾಜನ ವಿಶ್ವಾಸಕ್ಕೆ ಪಾತ್ರ ರಾದ ಏಳು ಜನರು ಈ ನ್ಯಾಯಕೋರ್ಟಿನ ನ್ಯಾಯಾಧೀಶರಾಗಿರುತ್ತಿದ್ದರು. ಈ ಕೋರ್ಟು ನೆರೆವ ಕೋಣೆಯ ಗೋಡೆಗಳ ಮೇಲೆ ನಕ್ಷತ್ರಗಳ (Stars) ಚಿತ್ರಗಳಿದ್ದುದರಿಂದ ಈ ನ್ಯಾಯಾಸನಕ್ಕೆ **ಸ್ಟಾರ್ ಚೆಂಬರ ಕೋರ್ಟ್** ಎಂದು ಹೆಸರು ಬಂದಿತು. ಕೆಲವು ಮನ್ನೆಯರು ಮತ್ತು ಸರದಾರರು ತಮ್ಮ ಸ್ಥಾನಿಕ ಸತ್ತೆಯ ಮತ್ತು ವರ್ಚಸ್ಸಿನ ಬಲದಿಂದ ತಮ್ಮ ಪರಗಣೆಗಳಲ್ಲಿಯ ನ್ಯಾಯಾಸನಗಳ ಸತ್ತೆಯನ್ನು ಲೆಕ್ಕಿಸುತ್ತಿದ್ದಿಲ್ಲ, ಮತ್ತು ಹಲಕೆಲವು ಪ್ರಸಂಗ ಗಳಲ್ಲಿ ನ್ಯಾಯಾಧೀಶರನ್ನು ಹೆದರಿಸಿಕೊಂಡು ತಮ್ಮ ಇಷ್ಟವಾದ ನಿರ್ಣಯ ಗಳನ್ನು ಪಡೆಯುತ್ತಿದ್ದರು. ಮುಖ್ಯತಃ ಇಂತಹ ಸರದಾರರನ್ನು ಹಾದಿಗೆ ತರಲು ಹೆನ್ರಿ ಈ ಕೋರ್ಟನ್ನು ಸ್ಥಾಪಿಸಿದನು. ಉನ್ಮತ್ತರಾದ ಸರದಾರರ ಸತ್ತೆ ಯನ್ನು ತಗ್ಗಿಸಲು ಈ ಸ್ಟಾರ್ ಚೆಂಬರ ಕೋರ್ಟು ಬಹು ಅನುಕೂಲವಾಯ್ತು. ಆದರೆ ಮುಂದೆ ಮುಂದೆ ತಮ್ಮ ಇಚ್ಛೆಗೆ ವಿರುದ್ಧವಾಗಿ ವರ್ತಿಸಲು ಪ್ರಯತ್ನಿಸುವವ ರನ್ನು ಹತ್ತಿಕ್ಕಲು ರಾಜರು ಈ ನ್ಯಾಯಾಸನವನ್ನು ಉಪಯೋಗಿಸಲಾರಂಭಿಸಿ ದರು, ಮತ್ತು ನ್ಯಾಯಾಸನಗಳ ಇತರ ಕೆಲಸಗಳಲ್ಲಿಯೂ ಕೈಹಾಕತೊಡಗಿ ದರು. ಆದುದರಿಂದ ಈ ಸ್ಟಾರ್ ಚೆಂಬರ ಕೋರ್ಟನ್ನು ಲಾಂಗ ಪಾರ್ಲಿ ಮೆಂಟು ೧೬೪೧ರಲ್ಲಿ ಮುರಿಯಿತು.

**ಲಿವ್ಹರಿ ಮತ್ತು ಮೇಂಟಿನೆನ್ಸ ಇವುಗಳ ವಿಷಯದಲ್ಲಿ ಕಾಯ್ದೆಗಳ ಉಗ್ರವಾದ ಉಪಯೋಗವು**–ಸರದಾರರ ಸತ್ತೆ ಮತ್ತು ಮಹತ್ವವು ವಿಶೇಷ ವಾಗಿ ಬೆಳೆಯಲು ಇನ್ನೊಂದು ಮಾತು ಕಾರಣವಾಗಿತ್ತು. ಅವರು ತಮ್ಮ ಚಾಕರಿಗೆ ಅನೇಕ ಸಶಸ್ತ್ರ ಸಿಪಾಯಿಗಳನ್ನು ಇಟ್ಟುಕೊಳ್ಳುತ್ತಿದ್ದರು, ಮತ್ತು ಅವರಿಗೆ ತಮ್ಮ ವಂಶದ ವಿಶಿಷ್ಟವಾದ ಸಮವಸ್ತ್ರವನ್ನು (Uniform) ಕೊಟ್ಟು ತಮ್ಮ ಕಲಹಗಳಲ್ಲಿ ಅವರ ಸಾಹಾಯ್ಯವನ್ನು ಪಡೆಯುತ್ತಿದ್ದರು. ತಮ್ಮ ವಂಶದ ವಿಶಿಷ್ಟವಾದ ಸಮವಸ್ತ್ರವನ್ನು ಕೊಡುವ ಈ ಪದ್ಧತಿಗೆ '**ಲಿವ್ಹರಿ**' (ಸಮವಸ್ತ್ರವನ್ನು ಕೊಡುವುದು) ಎಂದು ಹೆಸರು. ಅದರಂತೆ ಮನ್ನೆಯರು ತಮ್ಮ ಚಾಕರಿಗಿದ್ದ ಸಿಪಾಯಿಗಳ ಮತ್ತು ತಮ್ಮ ರೈತರ ನ್ಯಾಯಗಳಲ್ಲಿ ಲಕ್ಷ್ಯವನ್ನು ಹಾಕಿ ನ್ಯಾಯಾಸನಗಳಲ್ಲಿಯೂ ಇತರತ್ರವೂ ಅವರಿಗೆ ಬೆಂಬಲವಿತ್ತು ಸಾಹಾಯ್ಯಮಾಡುತ್ತಿದ್ದರು. ಈ ಪ್ರಘಾತಕ್ಕೆ '**ಮೇಂಟಿನೆನ್ಸ**' ಎಂದು ಹೆಸರು. ಸರದಾರರ ಚಾಕರಿಯಲ್ಲಿ ಇಂತಹ ಸಶಸ್ತ್ರ ಸಿಪಾಯಿಗಳು ಬಹಳವಾಗಿ ಇರುತ್ತಿದ್ದುದರಿಂದ ಅವರ ಮಹತ್ವವು ಅತಿಶಯವಾಗಿ ಬೆಳೆಯುತ್ತಿತ್ತು, ಮತ್ತು ಬಂಡುಗಳನ್ನು ಹೂಡಲೂ ಕಲಹಗಳನ್ನು ಹುಟ್ಟಿಸಲೂ ಅವರಿಗೆ ಸ್ವಾಭಾವಿಕವಾಗಿ ಇಚ್ಛೆಯಾಗುತ್ತಿತ್ತು. ಆದುದರಿಂದ ಈ ಪದ್ಧತಿಯನ್ನು ಮುರಿದು ಸರದಾರರ ಸತ್ತೆಯನ್ನೂ ಅವರ ಸ್ಥಾನಿಕ ಮಹತ್ವವನ್ನೂ ತಗ್ಗಿಸುವ ಉದ್ದೇಶದಿಂದ ಹೆನ್ರಿ ಈ ಪ್ರಘಾತದ ವಿರುದ್ಧವಾಗಿ ಪಾರ್ಲಿಮೆಂಟ ಸಭೆಯಲ್ಲಿ ಮೊದಲು ಪಾಸಾದ (೧೪೯೦) ಕಾಯ್ದೆಗಳನ್ನು ಉಗ್ರವಾಗಿ ಉಪಯೋಗಿಸಬೇಕೆಂದು ನಿಶ್ಚಯಿಸಿದನು. ಕ್ಲಪ್ತವಾದ ಸಂಖ್ಯೆಗಿಂತ ಹೆಚ್ಚಾಗಿ ಸಿಪಾಯಿಗಳನ್ನು ಸರದಾರರು ಇಟ್ಟುಕೊಳ್ಳಲಾಗದೆಂದೂ ಇದಕ್ಕೆ ವಿರುದ್ಧವಾಗಿ ವರ್ತಿಸಿದವರಿಗೆ ಉಗ್ರವಾದ ದಂಡವು ವಿಧಿಸಲ್ಪಡುವುದೆಂದೂ ಆತನು ಪ್ರಕಟಿಸಿದನು.

ಒಮ್ಮೆ ಹೆನ್ರಿ ಆಕ್ಸಫರ್ಡಿನ ಮನ್ನೆಯನ (ಲಾರ್ಡನ) ಅತಿಥಿಯಾಗಿ ಹೋಗಿದ್ದನು. ಈ ಮನ್ನೆಯನು ಲ್ಯಾಂಕೆಸ್ಟರ ವಂಶದ ಪಕ್ಷದವನಿದ್ದು ಹೆನ್ರಿಗೆ ರಾಜ್ಯ ಪದವನ್ನು ಸಂಪಾದಿಸಿಕೊಡಲು ನೆರವಾಗಿದ್ದನು. ಆದುದರಿಂದ ಅವನು ಹೆನ್ರಿಯ ಪ್ರೇಮಪಾತ್ರವಾಗಿದ್ದನು. ಅವನು ಬಹು ವೈಭವದಿಂದ ಹೆನ್ರಿಗೆ ಆತಿಥ್ಯವನ್ನು ಮಾಡಿದನು, ಮತ್ತು ಹೆನ್ರಿ ತಿರುಗಿ ಹೊರಡುವ ಕಾಲದಲ್ಲಿ ತನ್ನ ವೈಭವವನ್ನು ಪ್ರದರ್ಶಿಸಲು ತನ್ನ ಸಿಪಾಯಿಗಳನ್ನು ಇಬ್ಬದಿಗಳಲ್ಲಿ ನಿಲಿಸಿದನು. ತನ್ನ ಆಜ್ಞೆಯನ್ನು ಉಲ್ಲಂಘಿಸಿ ಈ ಮನ್ನೆಯನು ಇಷ್ಟೊಂದು ಸಿಪಾಯಿಗಳನ್ನು ಇಟ್ಟುಕೊಂಡುದನ್ನು ಕಂಡು ಆಶ್ಚರ್ಯಗೊಂಡು ಹೆನ್ರಿ ಅವನಿಗೆ, "ನೀವು ಮಾಡಿದ ಆತಿಥ್ಯಕ್ಕೋಸುಗ

ನಾನು ನಿಮಗೆ ಕೃತಜ್ಞನಾಗಿರುವೆನು. ಆದರೆ ನೀವು ನನ್ನ ಆಜ್ಞೆಯನ್ನು ನನ್ನ ಮುಂದೆಯೇ ಮುರಿದುದನ್ನು ನಾನು ಸಹಿಸೆನು. ಇದನ್ನು ಕುರಿತು ನನ್ನ ಕಾರ್ಯದರ್ಶಿ ನಿಮ್ಮನ್ನು ಕಾಣಬಹುದು" ಎಂದು ನುಡಿದನು. ಹೆನ್ರಿಯ ಕಾರ್ಯದರ್ಶಿ ಆ ಮನ್ನೆಯನನ್ನು ಕಂಡು ಅವನಿಗೆ ೧೦ ಸಾವಿರ ಪೌಂಡುಗಳ ದಂಡವನ್ನು ವಿಧಿಸಿದನು.

**ಹೆನ್ರಿ ಮತ್ತು ಪಾರ್ಲಿಮೆಂಟು**–ಹೆನ್ರಿಯ ೨೪ ವರ್ಷಗಳ ಆಳ್ಕೆಯಲ್ಲಿ ಪಾರ್ಲಿಮೆಂಟ ಸಭೆ ಕೇವಲವಾಗಿ ಏಳು ಸಲ ಕರೆಯಲ್ಪಟ್ಟಿತು. ಆದರೆ ಪಾರ್ಲಿಮೆಂಟ ಸಭೆಯ ಅಧಿವೇಶನಗಳ ಸಂಖ್ಯೆ ಅಲ್ಪವಾಗಿದ್ದರೂ, ಹೆನ್ರಿ ವಿವಿಧ ಮಾರ್ಗಗಳಿಂದ ಜನರಿಂದ ಹಣವನ್ನು ಸಂಗ್ರಹಿಸುವ ಪದ್ಧತಿಯನ್ನು ಅನುಸರಿಸಿದನಾದುದರಿಂದ ಹಣಕ್ಕೋಸುಗ ಪಾರ್ಲಿಮೆಂಟಿನ ಮುಖವನ್ನು ನೋಡುವ ಆವಶ್ಯಕತೆ ಅವನಿಗೆ ಉಂಟಾಗಲಿಲ್ಲ. ರಾಜನ ವಶದಲ್ಲಿದ್ದ ಭೂಮಿಗಳು ಬಹಳವಾಗಿದ್ದುದಲ್ಲದೆ ಅವುಗಳಿಂದ ದೊರೆವ ಉತ್ಪನ್ನವೂ ಬಹಳವಾಗಿತ್ತು. ಇದಲ್ಲದೆ ರಾಜನ ಬಳಿಯಲ್ಲಿ ಶಾಶ್ವತ ಸೈನ್ಯವೂ (Standing army) ಇದ್ದಿಲ್ಲ, ಮತ್ತು ರಾಜ್ಯ ಕಾರಭಾರವನ್ನು ಸಾಗಿಸಲು ಅಧಿಕಾರಿಗಳಾದರೂ ಬಹಳವಾಗಿರಲಿಲ್ಲ. ಇದರಿಂದ ರಾಜ್ಯಕಾರಭಾರದ ವೆಚ್ಚವು ಬಹಳ ಅಲ್ಪವಾಗಿತ್ತು. ಅವನ ಆಳ್ಕೆಯ ಆರಂಭದಲ್ಲಿ ನೆರೆದ ಪಾರ್ಲಿಮೆಂಟು ಅವನಿಗೆ **ಟನೇಜ** ಮತ್ತು **ಪೌಂಡೇಜ** ಎಂಬ ಕರವನ್ನು ಕೂಡಿಸಲು ಅಧಿಕಾರವನ್ನು ಕೊಟ್ಟಿತ್ತು. ಆಯಾತ ವಸ್ತುಗಳಲ್ಲಿಯ ಮದ್ಯದ ಪ್ರತಿಯೊಂದು **ಟನ್ನಿನ** ಮೇಲಿನ ಕರಕ್ಕೆ **ಟನೇಜ** ಎಂದೂ ಇತರ ವಸ್ತುಗಳ ಪ್ರತಿಯೊಂದು **ಪೌಂಡಿನ** ಬೆಲೆಯ ಮೇಲಿನ ಕರಕ್ಕೆ **ಪೌಂಡೇಜ** ಎಂದೂ ಹೆಸರು. ಇದಲ್ಲದೆ ಅವನು ತನ್ನ ಸ್ವಂತದ ಅಧಿಕಾರದಿಂದ ೧೪೫೪ರ ತರುವಾಯದಲ್ಲಿ ರಾಜನ ವಶದಲ್ಲಿದ್ದ ಭೂಮಿಗಳ ಕೊಡುಕೊಳ್ಳುವ ವ್ಯವಹಾರವಾಗಿದ್ದರೆ ಅದು ಪೊಳ್ಳೆಂದು ನಿರ್ಣಯಿಸಿ ಅವನು ಅನೇಕ ದೊಡ್ಡದೊಡ್ಡ ಇಸ್ಟೇಟುಗಳನ್ನೂ ಭೂಮಿಗಳನ್ನೂ ತನ್ನ ವಶದಲ್ಲಿ ತಂದುಕೊಂಡನು. ಅದರಂತೆ ಒತ್ತಾಯದ ಸಾಲಗಳನ್ನು ತೆಗೆದುಕೊಂಡು ಮತ್ತು ಕಾಣ್ಕೆಗಳನ್ನು ಸ್ವೀಕರಿಸಿ ಅವನು ವಿಪುಲ ಧನವನ್ನು ಸಂಗ್ರಹಿಸಿದನು. ೧೪೯೨ರಲ್ಲಿ ಅವನು ತಾನು ಒತ್ತಾಯದಿಂದ ತೆಗೆದುಕೊಂಡ ಸಾಲಗಳಿಗೆ ಪಾರ್ಲಿಮೆಂಟಿನ ಮಾನ್ಯತೆಯನ್ನು ದೊರಕಿಸಿದನು. ೧೪೯೫ರಲ್ಲಿ ಪಾರ್ಲಿಮೆಂಟು ಒಂದು ಕಾಯ್ದೆಯನ್ನು ಮಾಡಿ ಆಳುತ್ತಿದ್ದ ತತ್ಕಾಲೀನ ರಾಜರ ಪಕ್ಷವನ್ನು ಯಾರಾದರೂ ವಹಿಸಿದರೆ ಅದಕ್ಕೋಸುಗ ಅವರಿಗೆ ಮುಂದಿನ ರಾಜ್ಯಕರ್ತರು ಯಾವ ಬಗೆಯ ಶಿಕ್ಷೆಯನ್ನೂ ವಿಧಿಸಲಾಗದೆಂದು ನಿರ್ಣಯಿಸಿತು.

**ವ್ಯಾಪಾರೋದ್ಯೋಗಗಳಿಗೆ ಹೆನ್ರಿಯ ಉತ್ತೇಜನವು**–ಫ್ಲ್ಯಾಂಡರ್ಸಿನ (ಈಗಿನ ಬೆಲ್ಜಿಯಮ್ ಮತ್ತು ಹಾಲಂಡ ಇವುಗಳ ದಕ್ಷಿಣಭಾಗವು) ರಾಜನಾದ ೪ನೆಯ ಫಿಲಿಪನೊಡನೆ ಹೆನ್ರಿ ೧೪೯೬ರಲ್ಲಿ 'ಮ್ಯಾಗ್ನಸ್ ಇಂಟರಕರ್ಸಸ' (ದೊಡ್ಡ ಒಪ್ಪಂದ) ಎಂಬ ವ್ಯಾಪಾರ ವಿಷಯವಾದ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದಿಂದ ಇಂಗ್ಲಂಡಿನ ಉಣ್ಣೆಯೂ ಇತರ ವಸ್ತುಗಳೂ ಫ್ಲಾಂಡರ್ಸಿನಲ್ಲಿ ಕರವಿಲ್ಲದೆ ಹೋಗಬಹುದೆಂದು ನಿರ್ಣಯಿಸಲ್ಪಟ್ಟಿತು.

ಇಂಗ್ಲಂಡಿಗೆ ಬಟ್ಟೆಗೋಸುಗ ಫ್ಲ್ಯಾಂಡರ್ಸದೇಶವನ್ನು ಅವಲಂಬಿಸುವ ಪ್ರಸಂಗವು ತಪ್ಪಬೇಕೆಂದು ಇಂಗ್ಲಂಡಿನಿಂದ ಪರದೇಶಗಳಿಗೆ ಹೋಗುವ ಉಣ್ಣೆಯ ಮೇಲೆ ಅವನು ಭಾರವಾದ ನಿರ್ಯಾತ ಕರವನ್ನು ಕೂಡಿಸಿದನು. ಇದರಿಂದ ಇಂಗ್ಲಂಡಿನಲ್ಲಿಯ ನೇಯ್ಗೆಯ ವ್ಯವಸಾಯಕ್ಕೆ ಬಹಳವಾಗಿ ಉತ್ತೇಜನವು ದೊರೆತಿತು.

ಅವನು ವ್ಯಾಪಾರೋಪಯೋಗದ ಹಡಗುಗಳನ್ನು ಕಟ್ಟಲು ಉತ್ತೇಜನ ವಿತ್ತನು, ಮತ್ತು ಇಂಗ್ಲಿಶ್ ನಾವಿಕರಿದ್ದ ಹಡಗುಗಳ ಮುಖಾಂತರವಾಗಿಯೆ ಪರದೇಶಗಳೊಡನೆ ವ್ಯಾಪಾರವನ್ನು ಮಾಡಬೇಕೆಂದು ಆಜ್ಞೆಯಿತ್ತನು. ಆ ಕಾಲದಲ್ಲಿ ಜರ್ಮನಿಯಲ್ಲಿಯ 'ಹ್ಯಾನ್ಸ ವ್ಯಾಪಾರಸ್ಥ ಸಂಘ'ದ ಮತ್ತು ಇಟಲಿಯಲ್ಲಿಯ ವೇನಿಸ್ ವ್ಯಾಪಾರಸ್ಥರ ಕೈಯಲ್ಲಿ ಇಂಗ್ಲಂಡಿನ ವ್ಯಾಪಾರದ ಬಹು ಭಾಗವಿದ್ದಿತು; ಆದರೆ ಹೆನ್ರಿಯ ಈ ನೀತಿಯಿಂದ ಅದು ಇಂಗ್ಲಿಶ್ ವ್ಯಾಪಾರ ಸ್ಥರ ಕೈಯಲ್ಲಿ ಬರತೊಡಗಿತು.

**೭ನೆಯ ಹೆನ್ರಿಯ ಪರರಾಷ್ಟ್ರೀಯ ನೀತಿ**—ಇಂಗ್ಲಂಡಿನಲ್ಲಿ ಶಾಂತತೆ ಯನ್ನು ನೆಲೆಗೊಳಿಸಿ ರಾಜಸತ್ತೆಯನ್ನು ಹೆಚ್ಚಿಸುತ್ತಿರುವಾಗ ಪರರಾಷ್ಟ್ರೀಯ ರಾಜ ಕಾರಣದಲ್ಲಿ ಕೈಹಾಕಿ ಇಂಗ್ಲಂಡಿನ ಮಹತ್ವವನ್ನು ಬೆಳೆಯಿಸಲು ಹೆನ್ರಿ ಪ್ರಯತ್ನಿ ಸಲು ಆರಂಭಿಸಿದನು. ಈ ಕಾಲದಲ್ಲಿ ಯುರೋಪದಲ್ಲಿ ಜರ್ಮನಿಯ ಸಾಮ್ರಾ ಜ್ಯವು (ಪವಿತ್ರ ರೋಮನ್* ಸಾಮ್ರಾಜ್ಯದ ಅವಶೇಷವು), ಫ್ರಾನ್ಸ್ ಮತ್ತು ಸ್ಪೇನ ಈ ರಾಷ್ಟ್ರಗಳು ಮಹತ್ವವುಳ್ಳವಾಗಿದ್ದು ಅವುಗಳಲ್ಲಿ ಪರಸ್ಪರ ಸ್ಪರ್ಧೆಯಿತ್ತು. ಈ ರಾಷ್ಟ್ರಗಳಲ್ಲಿ ಯಾವುದಾದರೊಂದಕ್ಕೆ ಪ್ರತ್ಯಕ್ಷವಾಗಿ ಸೈನ್ಯದ ಸಾಹಾಯ್ಯ ವನ್ನು ಕೊಡುವುದಕ್ಕಿಂತ ಬಲಾಢ್ಯವಾದ ರಾಷ್ಟ್ರದೊಡನೆ ಸ್ನೇಹವನ್ನು ಮಾಡಿ ಕೊಂಡು ಅದಕ್ಕೆ ಸಾಹಾಯ್ಯವೀವ ವಚನವನ್ನು ಕೊಟ್ಟು ಅದರಿಂದ ಹಣ

*ಪ್ರಾಚೀನ ಮತ್ತು ಮಧ್ಯಯುಗದಲ್ಲಿಯ ಇಂಗ್ಲಂಡು ಎಂಬ ಪ್ರಕರಣದಲ್ಲಿಯ "ಮಧ್ಯ ಯುಗವು" ಎಂಬ ಪ್ಯಾರಾಗ್ರಾಫನ್ನು ನೋಡಿರಿ (೭ನೆಯ ಪುಟ).

ವನ್ನು ತೆಗೆದುಕೊಳ್ಳುವುದು ಹೆನ್ರಿಗೆ ಹೆಚ್ಚಾಗಿ ಇಷ್ಟವಾಗಿತ್ತು. ಈ ಸಮಯದಲ್ಲಿ ಫ್ರಾನ್ಸಿನ ಲಕ್ಷ್ಯವು* ಇಟಲಿಯಲ್ಲಿಯ ಮಿಲನ ಮತ್ತು ನೇಪಲ್ಸ ಎಂಬ ಸಂಸ್ಥಾನಗಳ ಮೇಲಿತ್ತು. ಆದುದರಿಂದ ಸ್ಪೇನದ ಅರಸನಾದ ಫರ್ಡಿನ್ಯಾಂಡನು ಮತ್ತು ಜರ್ಮನಿಯ ಬಾದಶಹನು ಇವರಿಬ್ಬರೂ ಫ್ರಾನ್ಸಿನ ವಿರುದ್ಧವಾಗಿ ಹೆನ್ರಿಯ ಸಾಹಾಯ್ಯವನ್ನು ಕೇಳಿದರು. ಈ ಎರಡು ರಾಜ್ಯಗಳಲ್ಲಿ ಸ್ಪೇನದ ರಾಜ್ಯವು ಸಂಘಟಿತವೂ ಬಲಾಢ್ಯವೂ ಆಗಿದ್ದುದರಿಂದ ಹೆನ್ರಿ ಸ್ಪೇನದ ರಾಜನೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡನು, ಮತ್ತು ಈ ಸ್ನೇಹ ಸಂಬಂಧವನ್ನು ಹೆಚ್ಚಾಗಿ ದೃಢಗೊಳಿಸಲು ತನ್ನ ಹಿರಿಯ ಮಗನಾದ **ಆರ್ಥರನ** ಲಗ್ನವನ್ನು ಸ್ಪೇನದ ರಾಜನ ಮಗಳಾದ **ಕ್ಯಾಥರಿನ** ಇವಳೊಡನೆ ಮಾಡಿದನು (೧೫೦೧). ಆದರೆ ಲಗ್ನವಾಗಿ ಐದು ತಿಂಗಳುಗಳು ಕಳೆವುದರಲ್ಲಿಯೆ ಆರ್ಥರನು ಮರಣಹೊಂದಿದನು (೧೫೦೨). ಸ್ಪೇನದ ರಾಜನೊಡನೆ ಉಂಟಾದ ಸಂಬಂಧವು ಮುರಿಯಬಾರದೆಂದು ವಿಧವೆಯಾದ ಅತ್ತಿಗೆಯನ್ನು ಲಗ್ನವಾಗಲು ಧಾರ್ಮಿಕ ಪ್ರತಿಬಂಧವಿದ್ದರೂ ಪೋಪನ ಸಮ್ಮತಿಯನ್ನು ದೊರಕಿಸಿ ಹೆನ್ರಿ ತನ್ನ ಎರಡನೆಯ ಮಗನಾದ **ಹೆನ್ರಿಯ** ಲಗ್ನವನ್ನು **ಕ್ಯಾಥರಿನ** ಇವಳೊಡನೆ ಮಾಡುವುದನ್ನು ನಿಶ್ಚಯಿಸಿದನು. ಆ ಬಳಿಕ ಸ್ಕಾಟಲಂಡ್ ಮತ್ತು ಇಂಗ್ಲಂಡ್ ಈ ಎರಡು ರಾಷ್ಟ್ರಗಳಲ್ಲಿ ಪರಸ್ಪರ ಸ್ನೇಹವು ಉಳಿಯಬೇಕೆಂದು ಮತ್ತು ಫ್ರಾನ್ಸಿಗೆ ಸ್ಕಾಟಲಂಡಿನಿಂದ ಸಾಹಾಯ್ಯವು ದೊರೆಯಬಾರದೆಂದು ೧೫೦೨ರಲ್ಲಿ ಅವನು ತನ್ನ ಮಗಳಾದ **ಮಾರ್ಗಾರೆಟ** ಇವಳನ್ನು ಸ್ಕಾಟಲಂಡಿನ ಅರಸನಾದ **ನಾಲ್ಕನೆಯ ಜೇಮ್ಸನಿಗೆ**† ಕೊಟ್ಟು ಮದುವೆ ಮಾಡಿದನು.

**ಹೆನ್ರಿಯ ಸ್ವಭಾವವೂ ಅವನು ಮಾಡಿದ ಕಾರ್ಯವೂ**—ಹೆನ್ರಿ ಮಿತಭಾಷಿಯೂ, ಧನಲೋಭಿಯೂ, ಉಗ್ರಶಾಸಕನೂ, ತಂತ್ರಕುಶಲನೂ ಆಗಿದ್ದನು. ಅವನ ಆಳ್ಕೆಯ ಪ್ರಾರಂಭದ ಕಾಲದಲ್ಲಿ ಇಂಗ್ಲಂಡಿನಲ್ಲಿ ಅವ್ಯವಸ್ಥೆ ಇತ್ತು. ಆದರೆ ಹೆನ್ರಿ ತನ್ನ ಉಗ್ರನೀತಿಯಿಂದ ಸರದಾರರ ವರ್ಚಸ್ಸನ್ನು ತಗ್ಗಿಸಿ ಶಾಂತತೆಯನ್ನು ನೆಲೆಗೊಳಿಸಿದನು. ಹೆನ್ರಿ ಪಟ್ಟಕ್ಕೆ ಬರುವ ಮೊದಲು ಪರರಾಷ್ಟ್ರಗಳು ಇಂಗ್ಲಂಡಿಗೆ ಮಹತ್ವವನ್ನು ಕೊಡುತ್ತಿರಲಿಲ್ಲ. ಆದರೆ ಹೆನ್ರಿ ಬಲಾಢ್ಯವಾದ ಯುರೋಪಿ

*ಆಗ ಇಟಲಿ ಸಂಘಟಿತ ರಾಷ್ಟ್ರವಾಗಿರದೆ ಅಲ್ಲಿ ಬೇರೆಬೇರೆ ಸ್ವತಂತ್ರ ಸಂಸ್ಥಾನಗಳಿದ್ದುವು. ಇಟಲಿಯ ಏಕೀಕರಣವು ೧೮೭೧ರಲ್ಲಿ ಆಯ್ತು.

†ಇದೇ ಲಗ್ನಸಂಬಂಧದಿಂದ ೧೬೦೩ರಲ್ಲಿ ಇಂಗ್ಲಂಡ್ ಮತ್ತು ಸ್ಕಾಟಲಂಡ್ ಈ ರಾಷ್ಟ್ರಗಳಲ್ಲಿಯ ರಾಜವಂಶಗಳ ಏಕೀಕರಣವಾಯ್ತು.

ಯನ್ ರಾಷ್ಟ್ರಗಳೊಡನೆ ಸ್ನೇಹ ಸಂಬಂಧವನ್ನು ಮಾಡಿಕೊಂಡು ಯುರೋಪದ ರಾಜಕಾರಣದಲ್ಲಿ ಇಂಗ್ಲಂಡಿನ ವರ್ಚಸ್ಸನ್ನು ಹೆಚ್ಚಿಸಿದನು. ಅವನು ವ್ಯಾಪಾರೋದ್ಯಮಗಳನ್ನು ಬೆಳೆಯಿಸಲು ಪ್ರಯತ್ನಿಸಿದನು ಮತ್ತು ಸಮುದ್ರಪ್ರವಾಸವನ್ನು ಮಾಡಲು ಸಾಹಸಿಗಳಾದವರಿಗೆ ಉತ್ತೇಜನವಿತ್ತನು. ಹೆನ್ರಿ ೧೫೦೯ರಲ್ಲಿ ಮರಣಹೊಂದಿದನು. ಅವನ ಆಳ್ಕೆಯ ಆರಂಭದಲ್ಲಿ ಮಧ್ಯಯುಗವು ಮುಗಿದು ಅರ್ವಾಚೀನಯುಗದ ಪ್ರಾರಂಭವಾಯ್ತು.

**ಅರ್ವಾಚೀನಯುಗದ ಪ್ರಾರಂಭವು**—ಇ. ಸ. ೧೪೫೦ರಿಂದ ೧೫೫೦ರ ವರೆಗಿನ ಕಾಲವು ಯುರೋಪದ ಮತ್ತು ಇಂಗ್ಲಂಡಿನ ಇತಿಹಾಸದಲ್ಲಿ ಅರ್ವಾಚೀನಯುಗದ ಪ್ರಾರಂಭದ ಕಾಲವೆಂದು ತಿಳಿಯಲ್ಪಡುತ್ತದೆ. ಈ ಅವಧಿಯಲ್ಲಿ ಅಜ್ಞಾನದ ಕತ್ತಲೆಯಲ್ಲಿ ಮುಳುಗಿದ್ದ ಯುರೋಪದ ಜನರ ಕಣ್ಣಿಗೆ ಜ್ಞಾನದ ಪ್ರಕಾಶವು ತೋರಿತು. ಅವರ ದೃಷ್ಟಿ ವಿಕಾಸಗೊಂಡಿತು. ಮೊದಲಿನ ಕೂಪ ಮಂಡೂಕವೃತ್ತಿ ನಷ್ಟವಾಗಿ ವಿಶಾಲವೃತ್ತಿ ಅವರಲ್ಲಿ ಬಂದಿತು. ಅಂಧಶ್ರದ್ಧೆ ಅಳಿದು ಶಾಸ್ತ್ರೀಯ ಪದ್ಧತಿಯ ಚಿಕಿತ್ಸಾ ಬುದ್ಧಿ ಅವರಲ್ಲಿ ತಲೆದೋರಿತು. ಅದರಿಂದ ವಿವಿಧ ಶಾಸ್ತ್ರೀಯ ಶೋಧಗಳು, ಧರ್ಮಸುಧಾರಣೆಯ ಆಂದೋಲನವು, ಹೊಸ ಪ್ರದೇಶಗಳ ಶೋಧವು, ವ್ಯಾಪಾರವೃದ್ಧಿ, ಸಮುದ್ರದ ಮೇಲೆ ಸತ್ತೆಯ ಸ್ಥಾಪನೆ, ಸಮಾಜದಲ್ಲಿ ಉಚ್ಚ ನೀಚ ಭಾವನೆಯ ತಗ್ಗುವಿಕೆ ಮತ್ತು ರಾಷ್ಟ್ರೀಯ ಭಾವನೆಯ ಜಾಗೃತಿ ಮೊದಲಾದುವು ದೃಗ್ಗೋಚರವಾದುವು. ಈ ಎಲ್ಲ ಕಾರಣಗಳಿಂದ ಯುರೋಪಿಯನ್ ರಾಷ್ಟ್ರಗಳು ಸುಧಾರಿಸತೊಡಗಿದುವು. ಮೇಲೆ ಹೇಳಿದ್ದ ಸಂಗತಿಗಳು ಉಂಟಾಗಲು ಈ ಮುಂದಿನ ಮಾತುಗಳು ಕಾರಣವಾದುವು.

**ಕಾನ್‌ಸ್ಟಾಂಟಿನೋಪಲಿನ ಮಹತ್ವವು ನಷ್ಟವಾದುದು** (೧೪೫೩)—ಪ್ರಾಚೀನ ರೋಮನ್ ಸಾಮ್ರಾಜ್ಯದ ಪೂರ್ವಭಾಗದ ರಾಜಧಾನಿ ಕಾನ್‌ಸ್ಟಾಂಟಿನೋಪಲ್ ಪಟ್ಟಣವಾಗಿತ್ತು. ಈ ಪಟ್ಟಣವು ಪ್ರಾಚೀನಕಾಲದ ಗ್ರೀಕ ಮತ್ತು ರೋಮನ್ ಜನರ ವಿದ್ಯೆಯ ಮತ್ತು ಕಲೆಗಳ ಆಗರವಾಗಿತ್ತು. ಈ ಪಟ್ಟಣವನ್ನು ವಶಮಾಡಿಕೊಳ್ಳಲು ಇಸ್ಲಾಮಧರ್ಮದ ತುರ್ಕಿಜನರು ಅನೇಕ ವರ್ಷಗಳಿಂದ ಯತ್ನಿಸುತ್ತಿದ್ದರು. ಕೊನೆಗೆ ಅವರ ಪ್ರಯತ್ನಕ್ಕೆ ಯಶವು ಬಂದಿತು. ಅವರು ೧೪೫೩ರಲ್ಲಿ ಕಾನ್‌ಸ್ಟಾಂಟಿನೋಪಲನ್ನು ಗೆದ್ದು ಪೂರ್ವ ರೋಮನ್ ಸಾಮ್ರಾಜ್ಯವನ್ನು ನಾಶಗೊಳಿಸಿದರು. ಕಾನ್‌ಸ್ಟಾಂಟಿನೋಪಲ್ ಪಟ್ಟಣವು ತುರ್ಕರ ವಶದಲ್ಲಿ ಹೋದುದರಿಂದ ಅಲ್ಲಿ ವಾಸಿಸುತ್ತಿದ್ದ ವಿದ್ವಜ್ಜನರು ಪ್ರಾಚೀನ ಗ್ರೀಕ ಮತ್ತು ರೋಮನ್ ಜನರ ಎಲ್ಲ ಜ್ಞಾನಭಾಂಡಾರವನ್ನು ಹಸ್ತಲಿಖಿತ ಗ್ರಂಥಗಳನ್ನು

ತಮ್ಮೊಡನೆ ತೆಗೆದುಕೊಂಡು ಆಶ್ರಯವನ್ನು ಹುಡುಕುತ್ತ ಯುರೋಪದಲ್ಲಿಯ ಇಟಲಿ ಮೊದಲಾದ ದೇಶಗಳಿಗೆ ಹೋಗಿ ಅಲ್ಲಿ ವಾಸಮಾಡಿದರು. ತುರ್ಕರ ಸತ್ತೆ ಕಾನ್‌ಸ್ಟಾಂಟಿನೋಪಲ್ ಮತ್ತು ಭೂಮಧ್ಯಸಮುದ್ರದ ಪೂರ್ವಭಾಗ ಇವುಗಳ ಮೇಲೆ ಇದ್ದುದರಿಂದ ಯುರೋಪ ಮತ್ತು ಹಿಂದುಸ್ಥಾನ ಇವುಗಳ ನಡುವೆ ಭೂಮಧ್ಯಸಮುದ್ರ, ಸೀರಿಯಾ, ಕೆಂಪುಸಮುದ್ರ, ಈ ಮಾರ್ಗದಿಂದ ಪ್ರಾಚೀನ ಕಾಲದಿಂದ ನಡೆಯುತ್ತಿರುವ ವ್ಯಾಪಾರಕ್ಕೆ ಅಡ್ಡಿಯಾಯ್ತು. ಈ ಪೂರ್ವದ ಕಡೆಯ ವ್ಯಾಪಾರದಿಂದ ಮಧ್ಯಯುಗದಲ್ಲಿ ಸಂಪನ್ನವಾದ **ವೆನೀಸ್, ಜಿನೋವಾ** ಮೊದಲಾದ ಇಟಲಿಯಲ್ಲಿಯ ಸಂಸ್ಥಾನಗಳ ವ್ಯಾಪಾರವು ಕುಗ್ಗಿತು. ಹಿಂದುಸ್ಥಾನದೊಡನೆ ವ್ಯಾಪಾರವು ಮತ್ತೆ ಪ್ರಾರಂಭವಾಗಬೇಕಾದರೆ ಇನ್ನಾವುದಾದರೂ ಬೇರೊಂದು ಜಲಮಾರ್ಗವನ್ನು ಶೋಧಿಸುವುದವಶ್ಯವೆಂದು ಯುರೋಪದ ಜನರಿಗೆ ಎನಿಸಿತು.

**ಪ್ರಾಚೀನ ಕಲಾವಿದ್ಯೆಗಳ ಪುನರುಜ್ಜೀವನವು** (Renaissance) ಕಾನ್‌ಸ್ಟಾಂಟಿನೋಪಲಿನಿಂದ ವಿದ್ವಜ್ಜನರು ಪ್ರಾಚೀನಕಾಲದ ಜ್ಞಾನಭಾಂಡಾರವನ್ನು ಯುರೋಪದ ದೇಶಗಳಿಗೆ ತಮ್ಮೊಡನೆ ಒಯ್ದ ಬಳಿಕ ಅವರು ಅಲ್ಲಿಯ ಜನರಿಗೆ ಆ ಜ್ಞಾನವನ್ನು ಕೊಟ್ಟು ಉದರನಿರ್ವಾಹವನ್ನು ಮಾಡಲಾರಂಭಿಸಿದರು. ಅದರಿಂದ ಯುರೋಪದ ಜನರಲ್ಲಿ ಜ್ಞಾನಪ್ರಸಾರವು ಆಗತೊಡಗಿತು. ಇದೇ ಸಮಯದಲ್ಲಿ **ಜಾನ್ ಗಟೆನ್‌ಬರ್ಗ**ನೆಂಬ ಜರ್ಮನನು **ಮುದ್ರಣಕಲೆಯ ಶೋಧ**ವನ್ನು ಮಾಡಿದನು. ಇ. ಸ. ೧೪೭೭ರಲ್ಲಿ **ವಿಲಿಯಮ್ ಕ್ಯಾಕ್ಸಟನ್** ಎಂಬ ಇಂಗ್ಲಿಶ್ ಮನುಷ್ಯನು ಮುದ್ರಣಕಲೆಯನ್ನು ಮೊದಲು ಇಂಗ್ಲಂಡಿಗೆ ತಂದು ಒಂದು ಮುದ್ರಣಾಲಯವನ್ನು ಸ್ಥಾಪಿಸಿದನು. ಇಂಗ್ಲಂಡಿನಂತೆ ಇತರ ದೇಶಗಳಲ್ಲಿಯೂ ಮುದ್ರಣಾಲಯಗಳು ಆಗತೊಡಗಿದುವು. ಹಸ್ತಲಿಖಿತ ಗ್ರಂಥಗಳು ಮುದ್ರಿಸಲ್ಪಟ್ಟುವು. ಅದರಿಂದ ಗ್ರಂಥಗಳು ವಿಪುಲವಾಗಿಯೂ ಅಗ್ಗವಾಗಿಯೂ ದೊರೆಯಲಾರಂಭಿಸಿದುವು. ಈ ಕಾರಣದಿಂದ ಜ್ಞಾನದ ಪ್ರಸಾರವು ವೇಗದಿಂದ ಸಾಗಿತು. ಮಧ್ಯಯುಗದಲ್ಲಿ ಜ್ಞಾನಭಾಂಡಾರವು ಶ್ರೀಮಂತರ, ಮನ್ನೆಯರ ಮತ್ತು ಧರ್ಮಾಧಿಕಾರಿಗಳ ವಶವರ್ತಿಯಾಗಿತ್ತು. ಆ ಜ್ಞಾನಭಾಂಡಾರವು ಈಗ ಸಾಮಾನ್ಯಜನರ ಕೈಯಲ್ಲಿಯೂ ಬರತೊಡಗಿತು. ಇದರಿಂದ ಅವರ ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳಲ್ಲಿಯೂ ರಾಜಕೀಯ ಕಲ್ಪನೆಗಳಲ್ಲಿಯೂ ಪರಿವರ್ತನೆಯಾಗಿ ಅವರಲ್ಲಿ ಹೊಸ ವಿಚಾರಗಳು ಹಬ್ಬಿದುವು.

**ಬೌದ್ಧಿಕ ಸುಧಾರಣೆ**—ವಿದ್ಯೆಯ ಮತ್ತು ಕಲೆಗಳ ಅಭ್ಯಾಸವು ವೇಗ

ದಿಂದ ಸಾಗಿದುದರಿಂದ ಅಂಧಶ್ರದ್ಧೆ ಇಲ್ಲದಂತಾಗಿ ಜನರು ಚಿಕಿತ್ಸಕ ಬುದ್ಧಿಯಿಂದ ವಿಚಾರಮಾಡತೊಡಗಿದರು. ಯುರೋಪದಲ್ಲಿಯ ಬೇರೆಬೇರೆ ದೇಶಗಳಲ್ಲಿಯ ವಿದ್ವಾಂಸರು ಧಾರ್ಮಿಕ, ಶಿಕ್ಷಣವಿಷಯಕ ಮತ್ತು ರಾಜಕೀಯ ವಿಷಯದ ಗ್ರಂಥಗ್ಗಳನ್ನು ಬರೆಯಲಾರಂಭಿಸಿದರು.

**ಕಾಲೆಟ್** (Colet) ೧೪೬೭–೧೫೧೯.—ಆಗಿನ ಕಾಲದ ನೀರಸವೂ ವಿದ್ಯಾರ್ಥಿಗಳಿಗೆ ಬೇಸರನ್ನು ತರುವಂತಹದೂ ಮುಖಪಾಠವನ್ನೇ ಅವಲಂಬಿಸಿದುದೂ ಆದ ಶಿಕ್ಷಣಪದ್ಧತಿ ಕಾಲೆಟನೆಂಬ ಇಂಗ್ಲಿಶ್ ಮನುಷ್ಯನಿಗೆ ಸರಿದೋರಲಿಲ್ಲ. ಆತನು ವಿದ್ಯಾರ್ಥಿಗಳ ಮನೋರಂಜನವಾಗಿ ಅವರ ಜ್ಞಾನಪಿಪಾಸೆಯನ್ನು ಹೆಚ್ಚಿಸುವಂತಹ ಶಿಕ್ಷಣಪದ್ಧತಿಯನ್ನು ಪ್ರಚಾರದಲ್ಲಿ ತರಲು **'ಸೇಂಟ ಪಾಲ್'** ಎಂಬ ಶಾಲೆಯನ್ನು (Public School) ಲಂಡನಿನಲಿ ಸ್ಥಾಪಿಸಿದನು. ಪ್ರಾಚೀನ ಕಲಾವಿದ್ಯೆಗಳ ಜ್ಞಾನವುಂಟಾಗಬೇಕೆಂದು ಈ ಶಾಲೆಯಲ್ಲಿ ಲ್ಯಾಟಿನ್ ಮತ್ತು ಗ್ರೀಕ ಭಾಷೆಗಳ ಶಿಕ್ಷಣವು ಕೊಡಲ್ಪಡುತ್ತಿತ್ತು.

**ಇರ್ಯಾಸ್‌ಮಸ್** (Erasmus) ೧೪೬೭–೧೫೩೭.–ಇವನೊಬ್ಬ ಡಚ್ ವಿದ್ವಾಂಸನು. ಇವನು ಯುರೋಪದಲ್ಲಿ ಬಹಳವಾಗಿ ಪ್ರವಾಸಮಾಡಿದನು. ಮತ್ತು ಗ್ರೀಕಭಾಷೆಯ ಅಧ್ಯಯನವನ್ನು ಮಾಡಿ ಬೈಬಲನ್ನು ಲ್ಯಾಟಿನ್ ಭಾಷೆಗೆ ಪರಿವರ್ತಿಸಿದನು. ಆಗಿನ ಕಾಲದಲ್ಲಿ ಕೆಲವು ಧರ್ಮಾಧಿಕಾರಿಗಳ ಆಚರಣವು ಶುದ್ಧವಾಗಿರಲಿಲ್ಲ. ಎಷ್ಟೋ ಧರ್ಮಾಧಿಕಾರಿಗಳಿಗೆ ಲ್ಯಾಟಿನ್ ಭಾಷೆಯ ಜ್ಞಾನವು ಸಾಕಷ್ಟು ಇರಲಿಲ್ಲ. ಆ ಭಾಷೆಯಲ್ಲಿಯ ಬೈಬಲಿನ ಅರ್ಥವನ್ನು ಹೇಳುವ ಯೋಗ್ಯತೆಯೂ ಅವರಲ್ಲಿ ಇದ್ದಿಲ್ಲ. ಆದುದರಿಂದ ಧರ್ಮಾಧಿಕಾರಿಗಳು ಸುಧಾರಿಸಬೇಕೆಂದೂ ಅಜ್ಞಾನಿಗಳಾದ ಧರ್ಮಾಧಿಕಾರಿಗಳ ನಿಜವಾದ ಬೆಲೆ ಜನರಿಗೆ ಗೊತ್ತಾಗಬೇಕೆಂದೂ ಇರ್ಯಾಸ್‌ಮಸನು **'ಮೂರ್ಖಸ್ತುತಿ'** (Praise of Folly) ಎಂಬ ಪುಸ್ತಕವನ್ನು ಬರೆದನು.

**ಮಾರ್ಟಿನ್ ಲ್ಯೂಥರ್** (೧೪೮೩–೧೫೪೬), **ಝ್ವಿಂಗಲಿ** (೧೪೮೪–೧೫೩೧) ಮತ್ತು **ಕ್ಯಾಲ್‌ವಿನ್** (೧೫೦೯–೧೫೬೪)–ಜರ್ಮನಿಯಲ್ಲಿಯ ಮತ್ತು ಸ್ವಿಝರ್ಲಂಡಿನಲ್ಲಿಯ ಈ ವಿದ್ವಾಂಸರು ಪೋಪನ ಮತ್ತು ಇತರ ಧರ್ಮಾಧಿಕಾರಿಗಳ ಧರ್ಮವಿರುದ್ಧವಾದ ವರ್ತನವನ್ನು ಬೈಲಿಗೆಳೆದರು, ಮತ್ತು ಧಾರ್ಮಿಕ ವಿಷಯದಲ್ಲಿ ಸುಧಾರಣೆಯಾಗಬೇಕೆಂದು ಪೋಪನ ಧಾರ್ಮಿಕ ವರ್ಚಸ್ಸನ್ನು ಒಪ್ಪದಂತಾದರು. ಅದರಿಂದ ಪೋಪನ ಧಾರ್ಮಿಕ ಸತ್ತೆಯನ್ನು ವಿರೋಧಿಸುವ **ಪ್ರಾಟೆಸ್ಟಂಟ** ಪಂಥದ ಸ್ಥಾಪನೆಯಾಯ್ತು.

**ಸರ ಥಾಮಸ್ ಮೋರ (೧೪೭೮—೧೫೩೫)**—ಈ ಇಂಗ್ಲಿಶ್ ಮನುಷ್ಯನು ಆ ಕಾಲದ ರಾಜ್ಯಪದ್ಧತಿಯಲ್ಲಿ ದೋಷಗಳನ್ನು ಕಂಡು ಅನುಕರಣೀಯವಾದ ರಾಜ್ಯಪದ್ಧತಿ ಹೇಗಿರಬೇಕೆಂಬುದನ್ನು ತೋರಿಸುವ ಉದ್ದೇಶದಿಂದ **ಯುಟೋಪಿಯಾ** ಎಂಬ ಗ್ರಂಥವನ್ನು ಬರೆದನು.

ಮೇಲೆ ಹೇಳಿದ ವಿದ್ವಾಂಸರಂತೆ ಬೇರೆ ವಿಚಾರವಂತರೂ ಎಲ್ಲ ಮಾತುಗಳನ್ನು ಚಿಕಿತ್ಸಕ ಪದ್ಧತಿಯಿಂದ ಪರ್ಯಾಲೋಚಿಸಿ ಗ್ರಂಥಗಳನ್ನೂ ಪ್ರಬಂಧಗಳನ್ನೂ ಬರೆಯಲಾರಂಭಿಸಿದರು.

**ಹೊಸ ಶಾಸ್ತ್ರೀಯ ಶೋಧಗಳು**—ಈ ಕಾಲದಲ್ಲಿ ಹೊಸ ಶಾಸ್ತ್ರೀಯ ಶೋಧಗಳು ಗೊತ್ತಾದುದರಿಂದ ಯುರೋಪದ ರಾಷ್ಟ್ರಗಳು ಪ್ರಗತಿಯ ಮಾರ್ಗದಲ್ಲಿ ಭರದಿಂದ ಮುಂದುವರಿದುವು. ಹೋಕಾಯಂತ್ರದಲ್ಲಿ ಮತ್ತು ದುರ್ಬೀನಿನಲ್ಲಿ ಮಹತ್ವದ ಸುಧಾರಣೆಗಳಾದುದರಿಂದ ನೌಕಾನಯನ ಶಾಸ್ತ್ರದಲ್ಲಿ ಪ್ರಗತಿಯಾಯ್ತು. ಯುದ್ಧದಲ್ಲಿ ಬಂದೂಕಿನ ಮದ್ದು ಉಪಯೋಗವಾಗಲು ಆರಂಭವಾದುದರಿಂದ ಚಿಲಕತ್ತಿನ ಅಶ್ವಾರೋಹಿಗಳ, ಮತ್ತು ಕೋಟೆಕೊತ್ತಳಗಳ ಮೊದಲಿನ ಮಹತ್ವವು ಕಡಿಮೆಯಾಯ್ತು. ಮುದ್ರಣಕಲೆಯ ಶೋಧವಾದುದರಿಂದ ಸಾಕ್ಷರತೆಯ ಮತ್ತು ಜ್ಞಾನದ ಪ್ರಸಾರವು ಆಗಲಾರಂಭಿಸಿತು. ಪೋಲಂಡಿನಲ್ಲಿಯ ಕೋಪರ್ನಿಕಸನೆಂಬ ಜ್ಯೋತಿಃಶಾಸ್ತ್ರಜ್ಞನು (೧೪೭೩—೧೫೪೩) ಸೂರ್ಯನು ಪೃಥ್ವಿಯ ಸುತ್ತಲು ತಿರುಗದೆ ಪೃಥ್ವಿ ಸೂರ್ಯನ ಸುತ್ತಲು ತಿರುಗುತ್ತದೆಂದೂ ಸೂರ್ಯನು ಗ್ರಹಮಾಲೆಯ ಮಧ್ಯನಾಗಿರುವನೆಂದೂ ತನ್ನ ಮತವನ್ನು ಪ್ರಸಿದ್ಧಿಸಿದನು. ಈ ಮತವು ಆಗಿನ ಜನರಿಗೆ ಭ್ರಮಪೂರ್ಣವಾದುದಾಗಿ ತೋರಿತು, ಮತ್ತು ಪೋಪನೂ ಇತರ ಧರ್ಮಾಧಿಕಾರಿಗಳೂ ಈ ಮತವು ನಾಸ್ತಿಕತೆಯ ದ್ಯೋತಕವೆಂದು ಅಭಿಪ್ರಾಯಪಿತ್ತರು.



ಕೋಲಂಬಸನು

**ಹೊಸ ಪ್ರದೇಶಗಳ ಶೋಧವು**—ಭೂಮಧ್ಯಸಮುದ್ರದ ಪೂರ್ವದ ಕಡೆಯ ದೇಶಗಳಲ್ಲಿ ತುರ್ಕರ ವರ್ಚಸ್ಸು ಉಂಟಾದುದರಿಂದ ಯುರೋಪ-ಹಿಂದುಸ್ಥಾನಗಳ ವ್ಯಾಪಾರಕ್ಕೆ ತೊಂದರೆಯಾಯ್ತು. ಆದುದರಿಂದ ಹಿಂದುಸ್ಥಾನಕ್ಕೆ ಹೋಗುವ ಬೇರೊಂದು ಜಲಮಾರ್ಗವನ್ನು ಶೋಧಿಸಿ ತಮ್ಮ ರಾಷ್ಟ್ರದ ವ್ಯಾಪಾರವನ್ನು ಬೆಳೆಯಿಸುವ ಉದ್ದೇಶದಿಂದ ಯುರೋಪದಲ್ಲಿಯ ಅನೇಕ ಸಾಹಸಿಗಳು ಪ್ರಯತ್ನಿಸತೊಡಗಿದರು. ಜಿನೋವಾಸಂಸ್ಥಾನದ **ಕೋಲಂಬಸನೆಂಬ** ಗೃಹಸ್ಥನು ಸ್ಪೇನದ ರಾಜನ ಸಾಹಾಯ್ಯವನ್ನು ಪಡೆದು ಹಿಂದುಸ್ಥಾನಕ್ಕೆ ಹೋಗುವ ಹೊಸ ಜಲಮಾರ್ಗವನ್ನು ಶೋಧಿಸಲು ಸಮುದ್ರಪ್ರವಾಸವನ್ನು ಆರಂಭಿಸಿದನು. ಪೃಥ್ವಿ ದುಂಡಾಗಿರುವುದರಿಂದ ಪಶ್ಚಿಮದ ಕಡೆಗೆ ನಡೆದರೂ ತನಗೆ ಹಿಂದುಸ್ಥಾನವು ದೊರೆಯಬಹುದೆಂದು ಆತನು ಎಣಿಸಿದನು. ಆದರೆ ಎಷ್ಟೋ ತಿಂಗಳುಗಳ ವರೆಗೆ ಪ್ರವಾಸಮಾಡಿದ ಬಳಿಕ ಅವನು ಹೊಸದೊಂದು ಖಂಡವನ್ನು (**ಅಮೇರಿಕಾ ಖಂಡವನ್ನು**) ಕಂಡನು. ಇಂಗ್ಲಂಡಿನ **ಜಾನ್ ಕ್ಯಾಬಟನೆಂಬವನೂ** ಅವನ ಮಗನಾದ **ಸೆಬ್ಯಾಸ್ಟಿಯನ್ ಕ್ಯಾಬಟನೂ** ೧೪೯೭ರಲ್ಲಿ **ನ್ಯೂ ಫೌಂಡಲಂಡ ನಡುಗಡ್ಡೆಯನ್ನು** ಮತ್ತು **ಉತ್ತರ ಅಮೇರಿಕೆಯನ್ನು** ಶೋಧಿಸಿದರು.

ಪೋರ್ತುಗಾಲದ **ವಾಸ್ಕೊ-ಡಿ-ಗಾಮಾ** ಎಂಬವನು ೧೪೯೮ರಲ್ಲಿ ಆಫ್ರಿಕಾಖಂಡವನ್ನು ಸುತ್ತಿಕೊಂಡು ಬಂದು ಹಿಂದುಸ್ಥಾನದ ಕಾಲಿಕತ್ತ ಬಂದರದಲ್ಲಿ ಇಳಿದನು. ಹಿಂದುಸ್ಥಾನಕ್ಕೆ ಹೋಗುವ ಈ ಹೊಸ ಜಲಮಾರ್ಗದ ಶೋಧವಾದುದರಿಂದ ಭೂಮಧ್ಯಸಮುದ್ರಕ್ಕೆ ಈವರೆಗಿದ್ದ ಮಹತ್ವವು ಇಲ್ಲದಂತಾಗಿ ಅಟಲಾಂಟಿಕ ಮಹಾಸಾಗರಕ್ಕೆ ಮಹತ್ವವು ಬಂದಿತು. ಆದುದರಿಂದ ಭೂಮಧ್ಯಸಮುದ್ರದ ಸುತ್ತಲಿರುವ ರಾಷ್ಟ್ರಗಳಲ್ಲಿ ವ್ಯಾಪಾರವಿಷಯಕವಾದ ಸ್ಪರ್ಧೆ ದಿನದಿನಕ್ಕೆ ಕಡಿಮೆಯಾಗಿ ಅಟಲಾಂಟಿಕ ಮಹಾಸಾಗರದ ತೀರದಲ್ಲಿಯ ಪೋರ್ತುಗಾಲ, ಸ್ಪೇನ, ಇಂಗ್ಲಂಡ್, ಹಾಲಂಡ ಮತ್ತು ಫ್ರಾನ್ಸ ಈ ರಾಷ್ಟ್ರಗಳಲ್ಲಿ ಸ್ಪರ್ಧೆ ಪ್ರಾರಂಭವಾಯ್ತು, ಮತ್ತು ಸಮುದ್ರದ ಮೇಲೆ ತಮ್ಮ ಸತ್ತೆಯನ್ನು ಪ್ರಸ್ಥಾಪಿಸಲು ಅವು ಯತ್ನಿಸತೊಡಗಿದುವು.

---

## ಸಾರಾಂಶ

### ಏಳನೆಯ ಹೆನ್ರಿ ೧೪೮೫—೧೫೦೯.

ಅವನ ನೀತಿ:—

(ಅ) ರಾಜಸತ್ತೆಯನ್ನು ಪ್ರಬಲವಾಗಿಯೂ ಅನಿಯಂತ್ರಿತವಾಗಿಯೂ ಮಾಡುವುದು.

(ಆ) ಇಂಗ್ಲಂಡಿನ ವೈಭವವನ್ನೂ ಪರರಾಷ್ಟ್ರಗಳಲ್ಲಿ ಅದರ ಮಹತ್ವವನ್ನೂ ಹೆಚ್ಚಿಸುವುದು.

(ಅ) ರಾಜಸತ್ತೆಯನ್ನು ಪ್ರಬಲವಾಗಿಯೂ ಅನಿಯಂತ್ರಿತವಾಗಿಯೂ ಮಾಡಲು ಹೆನ್ರಿ ಕೆಳಗೆ ಹೇಳಿದ ಕೆಲಸಗಳನ್ನು ಮಾಡಿದನು.

(೧) ಇಂಗ್ಲಂಡಿನ ಪಟ್ಟಕ್ಕೆ ತಮ್ಮ ಅಧಿಕಾರವಿರುತ್ತದೆಂದು ಹೇಳಿ ಬಂಡನ್ನು ಹೂಡಿದ ಅನಧಿಕಾರಿಗಳನ್ನು ಮುರಿದುದು. ಲ್ಯಾಂಬರ್ಟ ಸಿಮ್‌ನೆಲ್ ೧೪೮೬—೮೭. ಪರಕೀನ ವಾರಬೆಕ್ ೧೪೯೨—೯೭.

(೨) ಸರದಾರರ ಸತ್ತೆಯನ್ನು ತಗ್ಗಿಸಲು

(೧) ಸ್ಟಾರ ಚೆಂಬರ ಕೋರ್ಟಿನ ಸ್ಥಾಪನೆ ೧೪೮೭.

(೨) ಲಿವ್ಹರಿ ಮತ್ತು ಮೇಂಟಿನೆನ್ಸ ಇವುಗಳ ವಿಷಯದಲ್ಲಿ ಕಾಯ್ದೆಗಳ ಉಗ್ರವಾದ ಉಪಯೋಗವು.

(೩) ಪಾರ್ಲಿಮೆಂಟಿನ ಸಭೆಯನ್ನು ಕರೆಯದೆ ರಾಜ್ಯಕಾರಭಾರಕ್ಕೆ ಬೇಕಾಗುವ ಹಣವನ್ನು ಕೆಳಗೆ ಹೇಳಿದಂತೆ ಸಂಗ್ರಹಿಸುವ ಪ್ರಘಾತವು.

(೧) ಉನ್ಮತ್ತರಾದ ಸರದಾರರಿಗೆ ಸ್ಟಾರ ಚೆಂಬರ ಕೋರ್ಟಿನಿಂದ ಉಗ್ರವಾದ ದಂಡವನ್ನು ವಿಧಿಸುವುದು.

(೨) ಸರಂಜಾಮಿ ಪದ್ಧತಿಯಂತೆ ಸರಂಜಾಮಿ ಜಹಾಗೀರದಾರರಿಂದ ಹಣದ ಸಾಹಾಯ್ಯವನ್ನು ತೆಗೆದುಕೊಳ್ಳುವುದು.

(೩) ಒತ್ತಾಯದಿಂದ ಸಾಲವನ್ನೂ ಕಾಣ್ಕೆಗಳನ್ನೂ ತೆಗೆದುಕೊಳ್ಳುವುದು. ಈ ಕೆಲಸಕ್ಕೆ ಮಾರ್ಟಿನ್, ಎಂಪಸನ್ ಮತ್ತು ಡಡ್ಲೆ ಈ ಮಂತ್ರಿಗಳ ಸಾಹಾಯ್ಯವು.

(೪) ರಾಜನ ಸ್ವಾಮಿತ್ವದಲ್ಲಿಯ ಭೂಮಿಗಳ ಉತ್ಪನ್ನವು.

(ಆ) ಇಂಗ್ಲಂಡಿನ ವೈಭವವನ್ನೂ ಪರರಾಷ್ಟ್ರಗಳಲ್ಲಿ ಅದರ ಮಹತ್ವವನ್ನೂ ಹೆಚ್ಚಿಸಲು ಕೆಳಗಿನ ಸಂಗತಿಗಳು ಉಪಯೋಗವಾದುವು.

(೧) ಪರರಾಷ್ಟ್ರೀಯ ರಾಜಕಾರಣದಲ್ಲಿ ಕೈಹಾಕಿ ಪ್ರಬಲರಾಷ್ಟ್ರದೊಡನೆ ಸ್ನೇಹವನ್ನು ಮಾಡುವುದು, ಮತ್ತು ಅದಕ್ಕೆ ಸಾಹಾಯ್ಯವೀಯುವ ವಚನವನ್ನು ಕೊಟ್ಟು ಇಂಗ್ಲಂಡಿನ ಮಹತ್ವವನ್ನು ಬೆಳೆಯಿಸುವುದು.

(೨) ಹೆನ್ರಿಯ ಹಿರಿಯಮಗನಾದ ಆರ್ಥರನ ಲಗ್ನವು ಸ್ಪೇನದ ರಾಜಕನ್ಯೆಯಾದ ಕ್ಯಾಥರಿನ ಇವಳೊಡನೆ (೧೫೦೧). ಆರ್ಥರನು ೧೫೦೨ರಲ್ಲಿ ಸಾಯಲು ಕ್ಯಾಥರಿನ್ ಇವಳೊಡನೆ ಅವನ ಚಿಕ್ಕ ಮಗನಾದ ಹೆನ್ರಿಯ ಲಗ್ನದ ನಿಶ್ಚಯವು. ಸ್ಪೇನವು ಆಗ ಯುರೋಪಖಂಡದಲ್ಲಿ ಬಲಾಢ್ಯ ರಾಷ್ಟ್ರವೆಂದು ಗಣಿಸಲ್ಪಟ್ಟಿತ್ತು.

(೩) ಹೆನ್ರಿಯ ಮಗಳಾದ ಮಾರ್ಗಾರೆಟ ಇವಳ ಲಗ್ನವು ಸ್ಕಾಟಲಂಡಿನ ಅರಸನಾದ ೪ನೆಯ ಜೇಮ್ಸನೊಡನೆ (೧೫೦೨). ಈ ಲಗ್ನಸಂಬಂಧದಿಂದಲೆ ಮುಂದೆ ಸ್ಕಾಟಲಂಡಿನ ಅರಸನಾದ ಜೇಮ್ಸನಿಗೆ ಇಂಗ್ಲಂಡಿನ ರಾಜಪದವು ದೊರೆತಿತು.

(೪) ಫ್ಲ್ಯಾಂಡರ್ಸ ಮತ್ತು ಇಂಗ್ಲಂಡ್ ಈ ರಾಷ್ಟ್ರಗಳ ನಡುವೆ 'ಮ್ಯಾಗ್ನಸ್ ಇಂಟರ್‌ಕರ್ಸಸ್' ಎಂಬ ವ್ಯಾಪಾರವಿಷಯಕ ಒಪ್ಪಂದವು. ಉಣ್ಣೆಯ ವ್ಯಾಪಾರಕ್ಕೆ ಉತ್ತೇಜನವು.

(೫) ಇಂಗ್ಲಂಡಿನ ಜಾನ್ ಕ್ಯಾಬಟ್ ಮತ್ತು ಸೆಬ್ಯಾಸ್ಟಿಯನ್ ಕ್ಯಾಬಟ್ ಇವರು ೧೪೯೭ರಲ್ಲಿ ಉತ್ತರ ಅಮೇರಿಕೆಯ ಶೋಧವನ್ನು ಮಾಡಿದುದು.

(೬) ಪಾಯನಿಂಗ್ಸನೆಂಬ ಗವರ್ನರನು ಐರ್ಲಂಡಿನಲ್ಲಿ ಶಾಂತತೆಯನ್ನು ನೆಲೆಗೊಳಿಸಿದುದು.

ಏಳನೆಯ ಹೆನ್ರಿಯ ಆಳ್ಕೆಯಲ್ಲಿಯ ಪ್ರಸಿದ್ಧ ಪುರುಷರು:—

ರಾಜನ ಮಂತ್ರಿಗಳು:—ಮಾರ್ಟನ್, ಎಂಪ್ಸನ್, ಡಡ್ಲೆ.

ಐರ್ಲಂಡಿನ ಗವರ್ನರನು:—ಸರ ಎಡ್‌ವರ್ಡ ಪಾಯನಿಂಗ್ಸ.

ಸಾಹಸಿಗಳಾದ ನಾವಿಕರು:—ಜಾನ್ ಮತ್ತು ಸೆಬ್ಯಾಸ್ಟಿಯನ್ ಕ್ಯಾಬಟ್

ಅರ್ವಾಚೀನ ಯುಗದ ಆರಂಭವು:—

(೧) ತುರ್ಕರು ೧೪೫೩ರಲ್ಲಿ ಕಾನ್‌ಸ್ಟಾಂಟಿನೋಪಲನ್ನು ತಮ್ಮ ವಶದಲ್ಲಿ ತೆಗೆದುಕೊಂಡರು. ಆದರಿಂದ ಹಿಂದುಸ್ಥಾನ ಯುರೋಪಗಳ ವ್ಯಾಪಾರಕ್ಕೆ ತಡೆಯಾಯಿತು. ಗ್ರೀಕ ಮತ್ತು ರೋಮನ್ ಜನರ ಪ್ರಾಚೀನ ಗ್ರಂಥಗಳನ್ನು ವಿದ್ವಜ್ಜನರು ಕಾನ್‌ಸ್ಟಾಂಟಿನೋಪಲಿನಿಂದ ತಮ್ಮೊಡನೆ ಯುರೋಪಕ್ಕೆ ಒಯ್ದರು. ಅವರ ಶಿಕ್ಷಣದಿಂದ ಪ್ರಾಚೀನ ವಿದ್ಯೆಯ ಮತ್ತು ಕಲೆಗಳ ಅಭ್ಯಾಸವು ಪ್ರಾರಂಭವಾಗಿ ಯುರೋಪದ ಜನರ ಆಚಾರವಿಚಾರಗಳಲ್ಲಿ ಪರಿವರ್ತನೆಯಾಯಿತು.

(೨) ಬೌದ್ಧಿಕ ಸುಧಾರಣೆ:—

ಕಾಲೆಟನ ಹೊಸ ಬಗೆಯ 'ಸೇಂಟ ಪಾಲ್' ಶಾಲೆ.

ಇರ್ಯಾಸ್‌ಮಸನ 'ಮೂರ್ಖಸ್ತುತಿ' (Praise of Folly) ಎಂಬ ಗ್ರಂಥವು. ಮಾರ್ಟಿನ್ ಲ್ಯೂಥರ, ಝ್ವಿಂಗಲಿ, ಮತ್ತು ಕ್ಯಾಲ್‌ವಿನ್ ಇವರು ಪೋಪನ ಧಾರ್ಮಿಕ ಸತ್ತೆಯನ್ನು ಒಪ್ಪದಿರುವುದು.

ಸರ ಥೊಮಸ್ ಮೋರನ ಅನುಕರಣೀಯ ರಾಜ್ಯಪದ್ಧತಿಯನ್ನು ತೋರಿಸುವ 'ಯುಟೋಪಿಯಾ' ಎಂಬ ಗ್ರಂಥವು.

(೩) ಹೊಸ ಶೋಧಗಳು:—

ಸೂರ್ಯನು ಪೃಥ್ವಿಯ ಸುತ್ತಲು ತಿರುಗದೆ ಪೃಥ್ವಿ ಸೂರ್ಯನ ಸುತ್ತಲು ತಿರುಗುತ್ತದೆಂದು ಕೋಪರ್ನಿಕಸನು ಶೋಧಿಸಿದನು.

ದುರ್ಬೀನು ಮತ್ತು ಹೋರಾಯಂತ್ರಗಳಲ್ಲಿ ಸುಧಾರಣೆ. ಯುದ್ಧದಲ್ಲಿ ಬಂದೂಕಿನ ಮದ್ದಿನ ಉಪಯೋಗವು. ಇಂಗ್ಲಂಡಿನಲ್ಲಿ ಕ್ಯಾಕ್ಸಟನನ ಮೊದಲನೆಯ ಮುದ್ರಣಾಲಯವು.

(೪) ಹೊಸ ಪ್ರದೇಶಗಳ ಶೋಧವು:—

ಕೋಲಂಬಸನು (ಸ್ಪೇನ) ಅಮೇರಿಕೆಯ ಶೋಧವನ್ನು ಮಾಡಿದನು (೧೪೯೨). ಜಾನ್ ಮತ್ತು ಸೆಬ್ಯಾಸ್ಟಿಯನ್ ಕ್ಯಾಬಟ್ ಇವರು (ಇಂಗ್ಲಂಡ) ನ್ಯೂ ಫೌಂಡಲಂಡ್ ಮತ್ತು ಉತ್ತರ ಅಮೇರಿಕೆ ಇವುಗಳ ಶೋಧವನ್ನು ಮಾಡಿದರು (೧೪೯೭). ವಾಸ್ಕೊ-ಡಿ-ಗಾಮಾ (ಪೋರ್ತುಗಾಲ) ಇವನು ಹಿಂದುಸ್ಥಾನಕ್ಕೆ ಹೋಗುವ ಹೊಸ ಜಲಮಾರ್ಗವನ್ನು ಕಂಡನು (೧೪೯೮).

ಪೂರ್ವಕಾಲದಲ್ಲಿ ಭೂಮಧ್ಯಸಮುದ್ರವು ವ್ಯಾಪಾರದ ಕೇಂದ್ರವಾಗಿತ್ತು. ಮತ್ತು ಅದರ ಸುತ್ತಲಿರುವ ದೇಶಗಳಲ್ಲಿ ವ್ಯಾಪಾರ ವಿಷಯಕ ಸ್ಪರ್ಧೆಯಿತ್ತು. ಹೊಸ ಜಲಮಾರ್ಗದ ಶೋಧದಿಂದ ಅಟಲಾಂಟಿಕ ಮಹಾಸಾಗರವು ವ್ಯಾಪಾರದ ಕೇಂದ್ರವಾಯ್ತು, ಮತ್ತು ಅದರ ತೀರದಲ್ಲಿಯ ಪೋರ್ತುಗಾಲ, ಸ್ಪೇನ, ಇಂಗ್ಲಂಡ್, ಹಾಲಂಡ್ ಮತ್ತು ಫ್ರಾನ್ಸ ಈ ರಾಷ್ಟ್ರಗಳಲ್ಲಿ ವ್ಯಾಪಾರ ಮತ್ತು ಸಮುದ್ರದ ಮೇಲಿನ ಸತ್ತೆ, ಈ ವಿಷಯದಲ್ಲಿ ಸ್ಪರ್ಧೆಹುಟ್ಟಿತು.

---

# ೩ನೆಯ ಪ್ರಕರಣವು

## ಎಂಟನೆಯ ಹೆನ್ರಿ

ಜನ್ಮವು ೧೪೯೧; ರಾಜ್ಯಾರೋಹಣವು (೧೮ನೆಯ ವರ್ಷದಲ್ಲಿ) ೧೫೦೯;

ಮೃತ್ಯು ೧೫೪೭.

೧೫೦೯—೧೫೪೭.

### ತತ್ಕಾಲೀನ ರಾಜ್ಯಕರ್ತರು.

| ಸ್ಕಾಟಲಂಡ್ | ಫ್ರಾನ್ಸ | ಸ್ಪೇನ |
|---|---|---|
| ೪ನೆಯ ಜೇಮ್ಸನು ೧೫೧೩ರ ವರೆಗೆ. | ೧೨ನೆಯ ಲುಯಿ ೧೫೧೫ರ ವರೆಗೆ. | ಫರ್ಡಿನಂಡ ೧೫೧೬ರ ವರೆಗೆ. |
| ೫ನೆಯ ಜೇಮ್ಸನು ೧೫೪೨ರ ವರೆಗೆ. | ೧ನೆಯ ಫ್ರಾನ್ಸಿಸ್ ೧೫೪೭ರ ವರೆಗೆ. | ೧ನೆಯ ಚಾರ್ಲಸ್ (ಬಾದಶಹ ೫ನೆಯ ಚಾರ್ಲಸ್). |
| ಸ್ಕಾಟಲಂಡಿನ ಮೇರಿ ರಾಣಿ. | | |

### ಮಹತ್ವದ ಇಸ್ವಿಗಳು.

೧೫೦೯ ಎಂಟನೆಯ ಹೆನ್ರಿ ಮತ್ತು ಕ್ಯಾಥರಿನ್ ಇವರ ಲಗ್ನವು.
೧೫೨೭ ಕ್ಯಾಥರಿನ್ ಇವಳ ವಿವಾಹವಿಚ್ಛೇದದ ಪ್ರಕರಣದ ಪ್ರಾರಂಭವು.
೧೫೨೯ ವೂಲ್ಸೆಯ ಅಧಃಪಾತವು.
೧೫೩೪ ಅಕ್ಟ ಅಫ್ ಸುಪ್ರಿಮಸಿ.

**೮ನೆಯ ಹೆನ್ರಿಯ ಸ್ವಭಾವವು**—೭ನೆಯ ಹೆನ್ರಿಯ ತರುವಾಯದಲ್ಲಿ ಅವನ ಮಗನಾದ ೮ನೆಯ ಹೆನ್ರಿ ತನ್ನ ವಯಸ್ಸಿನ ೧೮ನೆಯ ವರ್ಷದಲ್ಲಿ ಪಟ್ಟಕ್ಕೆ ಬಂದನು. ಪಟ್ಟಕ್ಕೆ ಬಂದ ಬಳಿಕ ಅವನು ಮೊದಲು ನಿಶ್ಚಿತವಾದಂತೆ ವಿಧವೆಯಾದ **ಕ್ಯಾಥರಿನ್** ಎಂಬ ತನ್ನ ಅತ್ತಿಗೆಯನ್ನು (ಸ್ಪೇನದ ರಾಜನಾದ ಫರ್ಡಿನಂಡನ ಮಗಳನ್ನು) ಮದುವೆಯಾದನು (೧೫೦೯). ಹೆನ್ರಿ ಸುಂದರನೂ, ಕುಶಾಗ್ರಬುದ್ಧಿಯೂ, ತೇಜಸ್ವಿಯೂ, ವಿದ್ಯಾವ್ಯಾಸಂಗಿಯೂ ಆಗಿದ್ದುದರಿಂದ ಅವನ ವಿಷಯದಲ್ಲಿ ಇಂಗ್ಲಿಶ್ ಜನತೆಗೆ ಪ್ರೇಮವೂ ಅಭಿಮಾನವೂ ಎನಿಸಿ ಅವನ ಆಳ್ಕೆಯಿಂದ ಇಂಗ್ಲಂಡು ವೈಭವಶಾಲಿಯಾಗಬಹುದೆಂದು ಎಲ್ಲರೂ ಆಶಿಸಿದರು.*

---

*ಇಂಗ್ಲಂಡಿನಲ್ಲಿದ್ದ ವೆನಿಸದ ವಕೀಲನು ೧೫೧೯ರಲ್ಲಿ ತನ್ನ ದೇಶಕ್ಕೆ ಕಳಿಹಿದ ಪತ್ರದಲ್ಲಿ ೮ನೆಯ ಹೆನ್ರಿಯನ್ನು ಕುರಿತು ಕೆಳಗಿನಂತೆ ಬರೆದಿರುವನು:—

ಹೆನ್ರಿ ವಿಲಾಸಿಯೂ, ಸ್ವಾರ್ಥಿಯೂ ಆಗಿದ್ದರೂ, ಅವನು ಮುತ್ಸದ್ದಿಯಾಗಿದ್ದುದರಿಂದ ತನ್ನ ಮೇಲೆ ಬಂದ ಸಂಕಟಗಳನ್ನು ಹೇಗೆ ನೀಗಿಸಬೇಕೆಂಬುದನ್ನು ಮತ್ತು ತನ್ನ ಕೈಕೆಳಗಿನ ಅಧಿಕಾರಿಗಳಿಂದ ಕೆಲಸಗಳನ್ನು ಹೇಗೆ ಮಾಡಿಸಿಕೊಳ್ಳಬೇಕೆಂಬದನ್ನು ಅವನು ಚೆನ್ನಾಗಿ ಬಲ್ಲವನಾಗಿದ್ದನು. ಅವನು ತನ್ನ ಮಂತ್ರಿಗಳನ್ನು ಆರಿಸುವುದರಲ್ಲಿ ಬಹಳೇ ಧೂರ್ತನಾಗಿದ್ದನು, ಮತ್ತು ಅವರಿಂದ ತನ್ನ ಇಚ್ಛೆಯಂತೆ ಕೆಲಸವಾದ ಒಳಿಕ ಅವರ ನಾಶವನ್ನು ಮಾಡಲು ಹಿಂದೆಮುಂದೆ ನೋಡುತ್ತಿರಲಿಲ್ಲ. ತನಗೆ ಬೇಕಾದ ಮಾತನ್ನು ಕೈಗೂಡಿಸಲು ಎಂತಹ ಬಿಕ್ಕಟ್ಟಿನೊಳಗಿಂದಲೂ ಅವನು ಮಾರ್ಗವನ್ನು ಹುಡುಕುತ್ತಿದ್ದನು ಮತ್ತು ತನ್ನ ಇಷ್ಟವನ್ನು* ಸಾಧಿಸುತ್ತಿದ್ದನು. ಅವನು ಮಹತ್ವಾಕಾಂಕ್ಷಿಯಾಗಿದ್ದರೂ ಶಕ್ಯವಾವುದು ಅಶಕ್ಯವಾವುದು ಎಂಬುದನ್ನು ಸಂಪೂರ್ಣವಾಗಿ ಅರಿತವನಾಗಿದ್ದನು. ಆದುದರಿಂದ ಎಲ್ಲರ ಮೇಲೂ ವರ್ಚಸ್ಸನ್ನು ಕೂಡಿಸಲು ಅವನಿಗೆ

"—ಇಂಗ್ಲಂಡಿನ ಈಗಿನ ರಾಜನು ೨೮ ವರ್ಷದವನಿದ್ದು ಅತ್ಯಂತ ಸುಂದರನಿರುವನು. ಇವನಷ್ಟು ಸುಂದರನಾದ ರಾಜಪುರುಷನು ಇಡಿಯ ಯುರೋಪದಲ್ಲಿ ದೊರೆಯನು. ಫ್ರಾನ್ಸಿನ ಅರಸನಾದ ಮೊದಲನೆಯ ಫ್ರಾನ್ಸಿಸನು ಗಡ್ಡವನ್ನು ಬೆಳೆಯಿಸಿರುವನೆಂದು ಕೇಳಿ ಇವನೂ ಗಡ್ಡವನ್ನು ಬೆಳೆಯಿಸಿರುವನು. ಅವನು ಎಲ್ಲ ಲಲಿತಕಲೆಗಳಲ್ಲಿ ಪಾರಂಗತನಿರುವನು. ಅವನು ಚೆನ್ನಾಗಿ ಹಾಡಬಲ್ಲನು ಮತ್ತು ಪದ್ಯಗಳನ್ನು ರಚಿಸಬಲ್ಲನು. ಅವನು ವಿನೋದಿಯಾಗಿರುವನು ಮತ್ತು ಶಬ್ದಗಳ ಮೇಲೆ ಕೋಟಿಗಳನ್ನೂ ಮಾಡುವನು. ಆಹನಿಗೆ ಫ್ರೆಂಚ, ಲ್ಯಾಟಿನ್ ಮತ್ತು ಸ್ಪ್ಯಾನಿಶ್ ಭಾಷೆಗಳ ಜ್ಞಾನವು ಸಾಕಷ್ಟಿರುವುದು. ಅವನು ಬಹು ಧಾರ್ಮಿಕನಿರುವನು. ಪ್ರತಿದಿನ ಮೂರು ಸಲ ಪ್ರಾರ್ಥನೆಯನ್ನು ಮಾಡುವನು. ಕುದುರೆಯ ಮೇಲೆ ಕೂಡುವುದರಲ್ಲಿ ಅವನು ಬಹು ಚತುರನಿರುವನು.

*ಥಾಮಸ್ ವೂಲ್ಸೆ ಮತ್ತು ಸರ ಥಾಮಸ್ ಮೋರ ಇವರೊಡನೆ ಹೆನ್ರಿಯ ಸಂಬಂಧವು ಅತ್ಯಂತ ನಿಕಟವಾಗಿತ್ತು. ಅವರು ಹೆನ್ರಿಯ ಸ್ವಭಾವದ ವಿಷಯದಲ್ಲಿ ಕೆಳಗಿನಂತೆ ನುಡಿದಿರುವರು.

ವೂಲ್ಸೆ:—ಹೆನ್ರಿ ಬಹು ಉದಾರಾಂತಃಕರಣಿಯೂ, ಸಾಹಸಿಯೂ ನಿಶ್ಚಯಿಯೂ ಇರುವನು. ಏನಾದರೂ ಒಂದು ಮಾತು ತನ್ನ ಇಚ್ಛೆಯ ವಿರುದ್ಧ ಆಗುವುದಕ್ಕಿಂತ ತನ್ನ ಅರ್ಧ ರಾಜ್ಯವು ಹೋದರೂ ಲೇಸೆಂದು ಅವನು ಬಗೆವನು.

ಮೋರನು ವಿದ್ವಾಂಸನಾಗಿದ್ದನು. ಅವನ ವಿಷಯದಲ್ಲಿ ಹೆನ್ರಿಗೆ ಪ್ರೇಮವಿತ್ತು. ಒಮ್ಮೆ ಹೆನ್ರಿ ಮತ್ತು ಮೋರನು ತೋಟದಲ್ಲಿ ಮಾತಾಡುತ್ತ ಕುಳಿತಾಗ ಮೋರನ ವಿಷಯದಲ್ಲಿ ತನಗೆ ಬಹು ಪ್ರೇಮವು ಇರುವುದೆಂದು ಹೇಳುವ ಭರದಲ್ಲಿ ಹೆನ್ರಿ ಅವನ ಕೊರಳಾಣೆಯನ್ನು ಮಾಡಿದನು. ಆಗ ಮೋರನು, "ಈ ಮಾತನ್ನು ಕುರಿತು ನನಗೆ ಅಷ್ಟು ಅಭಿಮಾನವೆನಿಸುವುದಿಲ್ಲ; ಏಕೆಂದರೆ ನನ್ನ ತಲೆ ಹೋಗುವುದರಿಂದ ನಿಮಗೆ ಫ್ರಾನ್ಸಿನಲ್ಲಿಯ ಒಂದು ಕೋಟೆ ಬರುವಂತಿದ್ದರೆ ನೀವು ನನ್ನ ತಲೆಯನ್ನು ಕೊಡಲು ಹಿಂದೆಮುಂದೆ ನೋಡಲಾರಿರಿ" ಎಂದು ನುಡಿದನು.

ಅನುಕೂಲವಾಗಿತ್ತು. ಅವನು ತನ್ನ ಆಳ್ಕೆಯಲ್ಲಿ ಕಾಯ್ದೆಯ ವಿರುದ್ಧವಾದ, ಅನ್ಯಾಯದ ಮತ್ತು ಒತ್ತಾಯದ ಅನೇಕ ಕೃತ್ಯಗಳನ್ನು ಮಾಡಿದರೂ ಅವುಗಳ ಪರಿಣಾಮವು ಬಹುಶಃ ಜನತೆಗೆ ಅಪ್ರಿಯರಾದವರಿಗೇ ಅನಿಷ್ಟಕರವಾದುದರಿಂದ ಸಾಮಾನ್ಯಜನತೆಗೆ ಅವನು ಅಪ್ರಿಯನಾಗಲಿಲ್ಲ.

**ಎಂಪಸನ್ ಮತ್ತು ಡಡ್ಲೆ ಇವರಿಗೆ ಶಿಕ್ಷೆ**—ತನ್ನ ತಂದೆಯ ಕಾಲದಲ್ಲಿ ಇಂಗ್ಲಿಶ್ ಜನತೆಯ ಮೇಲೆ ಅಸಹ್ಯವಾದ ಕರಗಳನ್ನು ಹೇರಿ ಅತ್ಯಂತ ಅಪ್ರಿಯ ರಾಗಿದ್ದ ಎಂಪಸನ್ ಮತ್ತು ಡಡ್ಲೆ ಇವರನ್ನು ಕಾರಾಗೃಹದಲ್ಲಿ ನೂಕಿದರೆ ತಾನು ಲೋಕಪ್ರಿಯನಾಗಬಹುದೆಂದು ಬಗೆದು ಹೆನ್ರಿ ಅವರನ್ನು ಕಾರಾಗೃಹಕ್ಕೆ ಅಟ್ಟಿ ದನು. ಬಳಿಕ ಅವರ ಮೇಲೆ ರಾಜದ್ರೋಹದ ಆರೋಪವನ್ನು ಹೊರಿಸಿ ಅವರನ್ನು ಶೂಲಕ್ಕೇರಿಸಿದನು (೧೫೧೦).

**ಫ್ರಾನ್ಸಿನೊಡನೆ ಯುದ್ಧವು (೧೫೧೩)**—ಆ ಬಳಿಕ ಹೆನ್ರಿ ತನ್ನ ತಂದೆಯ ಕಾಲದಲ್ಲಿದ್ದ ಮಂತ್ರಿಗಳನ್ನೆ ತನ್ನ ಮಂತ್ರಿಗಳಾಗಿ ಮಾಡಿಕೊಂಡನು. ಆದರೆ ಪರರಾಷ್ಟ್ರೀಯ ರಾಜಕಾರಣದಲ್ಲಿ ಪ್ರತ್ಯಕ್ಷವಾಗಿ ಕೈಹಾಕದಿರುವ ತನ್ನ ತಂದೆಯ ಕಾಲದ ನೀತಿಯನ್ನು ಅವನು ಅನುಸರಿಸದೆ ಯುರೋಪಿಯನ್ ರಾಜಕಾರಣದಲ್ಲಿ ಬಹಿರಂಗವಾಗಿ ಭಾಗವಹಿಸಲಾರಂಭಿಸಿದನು. ೭ನೆಯ ಹೆನ್ರಿ ಮಿತವ್ಯಯಿಯಾ ಗಿದ್ದು ಬೊಕ್ಕಸವನ್ನು ತುಂಬಿಟ್ಟಿದ್ದನಾದುದರಿಂದ ೮ನೆಯ ಹೆನ್ರಿಗೆ ದುಡ್ಡಿನ ಕೊರತೆ ಯಾಗಲಿಲ್ಲ. ಫ್ರಾನ್ಸಿನ ರಾಜನು ಇಟಲಿಯಲ್ಲಿಯ ಪೋಪನ ವಶದಲ್ಲಿದ್ದ ಕೆಲವು ಪ್ರದೇಶಗಳನ್ನು ಆಕ್ರಮಿಸಿದ್ದನು. ಆ ಪ್ರದೇಶಗಳನ್ನು ಪೋಪನಿಗೆ ತಿರುಗಿ ಕೊಡಿಸಲು ಜರ್ಮನಿಯ ಬಾದಶಹನಾದ ಮಾಕ್ಷಿಮಿಲನನೂ ಸ್ಪೇನದ ರಾಜನಾದ ಫರ್ಡಿನಂಡನೂ (ಹೆನ್ರಿಯ ಮಾವನು) ಪೋಪನ ನೇತೃತ್ವದಲ್ಲಿ **ಹೋಲಿ ಲೀಗ***  ಎಂಬ ಸಂಘವನ್ನು ಸ್ಥಾಪಿಸಿದರು (೧೫೧೧) ಮತ್ತು ಆ ಸಂಘದಲ್ಲಿ ಸೇರಲು ಹೆನ್ರಿಯನ್ನು ಬಿನ್ನವಿಸಿದರು. ಹೆನ್ರಿ ಅವರ ಬಿನ್ನಹವನ್ನು ಮನ್ನಿಸಿ ೨೫,೦೦೦ ಸೈನಿಕ ರೊಡನೆ ಫ್ರಾನ್ಸಿಗೆ ಹೋಗಿ ೧೫೧೩ರಲ್ಲಿ ಕ್ಯಾಲೆಯ ಬಳಿಯಲ್ಲಿ ಗಿನ್‌ಗಾಟ ಎಂಬಲ್ಲಿ ಫ್ರೆಂಚ ಸೈನ್ಯವನ್ನು ಸೋಲಿಸಿದನು. ಈ ಯುದ್ಧದಲ್ಲಿ ಫ್ರೆಂಚರು ತಮ್ಮ ಶಸ್ತ್ರಾಸ್ತ್ರಗಳನ್ನು ಉಪಯೋಗಿಸದೆ ಕುದುರೆಗಳನ್ನು ಹಿಮ್ಮಡಿ ಮುಳ್ಳುಗಳಿಂದ ಚುಚ್ಚಿ ಓಡಿಸುತ್ತ ರಣಭೂಮಿಯಿಂದ ಓಡಿಹೋದುದರಿಂದ ಈ ಯುದ್ಧಕ್ಕೆ ಹಿಮ್ಮಡಿ ಮುಳ್ಳಿನ ಕಾಳೆಗ (Battle of Spurs) ಎಂದು ಉಪಹಾಸದ ಹೆಸರು

*ಪೋಪನ ನೇತೃತ್ವದಲ್ಲಿ ಈ ಸಂಘವು ಸ್ಥಾಪಿಸಲ್ಪಟ್ಟುದರಿಂದ ಅದಕ್ಕೆ ಹೋಲಿ ಲೀಗ ಎಂದು ಹೆಸರು ಬಂದಿತು.



೮ನೆಯ ಹೆನ್ರಿ ಮತ್ತು ವೂಲ್ಸೆ

ಬಂದಿತು. ಫ್ರಾನ್ಸಿನ ರಾಜನಾದ ೧೨ನೆಯ ಲುಯಿ ಹೆನ್ರಿಯೊಡನೆ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದಿಂದ ಹೆನ್ರಿಗೆ ಹಣವು ದೊರೆತುದಲ್ಲದೆ ಆತನ ತಂಗಿಯಾದ ಮೇರಿಯನ್ನು ಲಗ್ನವಾಗಲು ಲುಯಿ ಒಪ್ಪಿಕೊಂಡನು.*

*ಈ ಲಗ್ನವು ೧೫೧೪ರಲ್ಲಿ ಆಯ್ತು. ಆದರೆ ಲಗ್ನವಾಗಿ ಮೂರು ತಿಂಗಳುಗಳಲ್ಲಿಯೆ ೧೨ನೆಯ ಲುಯಿ ಮರಣಹೊಂದಿದನು. ಆ ಬಳಿಕ ಮೇರಿ ಸಫಕದ ಡ್ಯೂಕನಾದ ಚಾರ್ಲಸ್ ಬ್ರ್ಯಾಂಡನ್ ಎಂಬವನೊಡನೆ ಪುನರ್ವಿವಾಹವನ್ನು ಮಾಡಿಕೊಂಡಳು.

**ಸ್ಕಾಟ್‌ಲಂಡಿನೊಡನೆ ಯುದ್ಧವು (೧೫೧೩)**—ಸ್ಕಾಟಲಂಡ್ ಮತ್ತು ಫ್ರಾನ್ಸ ಇವುಗಳ ನಡುವೆ ಸಖ್ಯವಿದ್ದುದರಿಂದ ಇಂಗ್ಲಿಶ್ ಸೈನ್ಯವು ಫ್ರಾನ್ಸಿನೊಡನೆ ಯುದ್ಧಮಾಡಲು ಹೋದುದನ್ನು ಕಂಡು ಸ್ಕಾಟಲಂಡಿನ ಅರಸನಾದ ೪ನೆಯ ಜೇಮ್ಸನು ಇಂಗ್ಲಂಡಿಗೆ ದಾಳಿಯಿಕ್ಕಿದನು. ಆಗ ಹೆನ್ರಿ ಇಂಗ್ಲಂಡಿನಲ್ಲಿ ಇಲ್ಲದುದರಿಂದ ಕ್ಯಾಥರಿನ್ ರಾಣಿ ನಾರ್ಫಾಕ್ ಎಂಬ ಸರದಾರನ ನೇತೃತ್ವದಲ್ಲಿ ದೊಡ್ಡದೊಂದು ಸೈನ್ಯವನ್ನು, ಸ್ಕಾಟಿಶ್ ಸೈನ್ಯವನ್ನು ಇದಿರಿಸಲು ಕಳುಹಿದಳು. ಫ್ಲಾಡನ್ ಫೀಲ್ಡಿನ ಬಳಿಯಲ್ಲಿ ಯುದ್ಧವಾಯ್ತು. ಸ್ಕಾಟಿಶ್ ಸೈನ್ಯವು ಸಂಪೂರ್ಣವಾಗಿ ಸೋತಿತು (೧೫೧೩). ಈ ಯುದ್ಧದಲ್ಲಿ ೪ನೆಯ ಜೇಮ್ಸನೂ ಆತನ ೯೦೦೦ ಸೈನಿಕರೂ ಮಡಿದರು. ಈ ಸೋಲಿನಿಂದ ಸ್ಕಾಟಲಂಡಿನ ವೈಭವವು ಕುಗ್ಗತೊಡಗಿತು.

**ಥಾಮಸ್ ವೂಲ್ಸೆ**—೧೫೧೫ರಲ್ಲಿ ಹೆನ್ರಿಗೆ ಆಲೋಚನೆಯನ್ನು ಹೇಳುವ ಮುಖ್ಯ ಮಂತ್ರಿ **ಥಾಮಸ್ ವೂಲ್ಸೆ** ಎಂಬವನಿದ್ದನು. ವೂಲ್ಸೆ ಕರ್ತೃತ್ವಶಾಲಿಯೂ ಕುಶಾಗ್ರಮತಿಯೂ ಆಗಿದ್ದನು. ಆದುದರಿಂದ ಮುಂದಿನ ೧೫ ವರ್ಷಗಳ ವರೆಗೆ ರಾಜ್ಯದಲ್ಲಿ ಆತನ ವರ್ಚಸ್ಸು ಇದ್ದಿತು. ವೂಲ್ಸೆ ೧೪೭೧ರಲ್ಲಿ ಇಪ್ಸವಿಚ್ ಎಂಬಲ್ಲಿ ಒಂದು ಕೀಳು ಕುಲದಲ್ಲಿ ಹುಟ್ಟಿದನು. ಅವನು ತನ್ನ ಕರ್ತೃತ್ವ ಶಕ್ತಿಯಿಂದಲೂ ಕುಶಾಗ್ರಬುದ್ಧಿಯಿಂದಲೂ ಈ ಮಹಾ ಪದವಿಯನ್ನು ಸಂಪಾದಿಸಿದನು. ಹೆನ್ರಿ ಅವನನ್ನು ಮೊದಲು ಟೂರ್ನೆಯ ಬಿಶಪನಾಗಿಯೂ ಬಳಿಕ ಯಾರ್ಕದ ಆರ್ಚ ಬಿಶಪನಾಗಿಯೂ ಕೊನೆಯಲ್ಲಿ ಚಾನ್ಸೆಲರನಾಗಿಯೂ ನಿಯೋಜಿಸಿದನು.* ವೂಲ್ಸೆಯ ವರ್ಚಸ್ಸು ಇಂಗ್ಲಂಡಿನಲ್ಲಿ ಅತಿಶಯವಾಗಿ ಬೆಳೆಯಿತು. ಆದುದರಿಂದ ಪೋಪನು ಅವನನ್ನು ೧೫೧೫ರಲ್ಲಿ ಕಾರ್ಡಿನಲ†ನಾಗಿಯೂ ಬಳಿಕ ಇಂಗ್ಲಂಡಿನಲ್ಲಿ ತನ್ನ ಪ್ರತಿನಿಧಿಯಾಗಿಯೂ (ಲಿಗೇಟ) ನಿಯೋಜಿಸಿದನು. ಈ ಬಗೆಯಾಗಿ ವೂಲ್ಸೆಯ‡ ವೈಭವವು ಬೆಳೆದು ಅವನ ಉತ್ಕರ್ಷವು§ ವೇಗದಿಂದ

---

* ಚಾನ್ಸೆಲರ ಪದದಲ್ಲಿದ್ದವನು ಪ್ರಿವಿ ಕೌನ್ಸಿಲಿನ ಸಭಾಸದನಾಗಿರುವನಲ್ಲದೆ ಮನ್ನೆಯರ ಸಭೆಯ (House of Lords) ಅಧ್ಯಕ್ಷನೂ ಇರುವನು. ಇವನು ರಾಜನ ಮುಖ್ಯಮಂತ್ರಿಯೂ ವಿಶ್ವಾಸದ ಮನುಷ್ಯನೂ ಆಗಿರುವನು. ರಾಜಮುದ್ರೆ ಇವನ ವಶದಲ್ಲಿಯೇ ಇರುವುದು.

† ಈ ಧಾರ್ಮಿಕ ಅಧಿಕಾರಿಗೆ ರೋಮದಲ್ಲಿಯ ಪೋಪನ ಚುನಾವಣೆಯಲ್ಲಿ ಮತವನ್ನು ಕೊಡಲು ಅಧಿಕಾರವಿರುತ್ತದೆ.

‡ ಅವನು ಹೊರಗೆ ಹೊರಟನೆಂದರೆ ಬಹು ವೈಭವವು ಇರುತ್ತಿತ್ತು. ಬೆಲೆಯುಳ್ಳ ಜರದ ವಸ್ತ್ರಗಳನ್ನು ಧರಿಸಿದ ಸಾವಿರ ಜನರು ಅವನ ಹಿಂದಿನಿಂದ ಮೂರುಮೂರು ಜನರ ಸಾಲುಗಳಾಗಿ ನಡೆಯುತ್ತಿದ್ದರು.

§ ಚಾನ್ಸೆಲರನೆಂದು ಅವನಿಗೆ ರಾಷ್ಟ್ರದಲ್ಲಿಯ ಪ್ರಮುಖತ್ವದ ಮಾನವು ದೊರೆತಿತು. ಮತ್ತು ಪೋಪನ ಪ್ರತಿನಿಧಿಯೆಂದು (ಲಿಗೇಟ) ಅವನಿಗೆ ಧಾರ್ಮಿಕ ವಿಷಯದಲ್ಲಿ ಮುಖ್ಯ ಅಧಿಕಾರವು ದೊರೆತಿತು.

ಮುಂದಡಿಯಿಕ್ಕಿತು. ಆದರಿಂದ ತಾನೇ ರೋಮದ ಪೋಪನೆಂದು ಅವನಿಗೆ ಎನಿಸ ಲಾರಂಭಿಸಿತು. ವೂಲ್ಸೆ ಕುಶಾಗ್ರಮತಿಯೂ ಕರ್ತೃತ್ವಶಾಲಿಯೂ ಆಗಿದ್ದು ಯಾವ ಕೆಲಸವನ್ನಾದರೂ ಸತತ ಪ್ರಯತ್ನದಿಂದಲೂ ದೃಢನಿಶ್ಚಯದಿಂದಲೂ ನೆರ ವೇರಿಸುತ್ತಿದ್ದನಾದುದರಿಂದ ಹೆನ್ರಿ ರಾಜ್ಯಕಾರಭಾರದ ಅತ್ಯಂತ ಮಹತ್ವದ ಕೆಲಸ ಗಳನ್ನು ಆತನಿಗೆ ಒಪ್ಪಿಸುತ್ತಿದ್ದನು. ಈ ಕಾರಣದಿಂದ ಅಂತಃಸ್ಥರಾಜ್ಯಕಾರಭಾರ ದಲ್ಲಿಯೂ ಪರರಾಷ್ಟ್ರೀಯ ನೀತಿಯಲ್ಲಿಯೂ ಆತನು ಅತ್ಯಂತ ಕುಶಲನಾದನು.

**ಹೆನ್ರಿಯ ಪರರಾಷ್ಟ್ರೀಯ ನೀತಿ**—ಯುರೋಪದಲ್ಲಿ ಫ್ರಾನ್ಸಿನ ರಾಜ ನಾದ ೧೨ನೆಯ ಲುಯಿ ೧೫೧೫ರಲ್ಲಿ, ಸ್ಪೇನದ ರಾಜನಾದ ಫರ್ಡಿನಂಡನು ೧೫೧೬ರಲ್ಲಿ ಮತ್ತು ಜರ್ಮನಿಯ ಬಾದಶಹನಾದ ಮ್ಯಾಕ್ಷಿಮಿಲನನು ೧೫೧೯ ರಲ್ಲಿ, ಹೀಗೆ ಮೂವರು ಪ್ರಮುಖರಾಜರು ಮಡಿದರು. ಬಳಿಕ ಫ್ರಾನ್ಸಿನಲ್ಲಿ ಫ್ರಾನ್ಸಿ ಸನು ರಾಜನಾದನು, ಮತ್ತು ಸ್ಪೇನದ ರಾಜಪದವು ಫರ್ಡಿನಂಡನ ಮೊಮ್ಮಗನಾದ ಚಾರ್ಲಸನಿಗೆ* ದೊರೆತಿತು. ಮುಂದೆ ೧೫೧೯ರಲ್ಲಿ ಚಾರ್ಲಸನಿಗೆ **ಜರ್ಮನ್**

---

* ಸ್ಪೇನದ ರಾಜನೂ ಜರ್ಮನಿಯ ಬಾದಶಹನೂ ಆದ ೫ನೆಯ ಚಾರ್ಲಸ್ ಮತ್ತು ಇಂಗ್ಲಂಡಿನ ರಾಣಿಯಾದ ಕ್ಯಾಥರಿನ್ ಇವರ ಆಪ್ತತ್ವವನ್ನು ತೋರಿಸುವ ವಂಶವೃಕ್ಷವು:—



ಸಾಮ್ರಾಜ್ಯದ (ಪವಿತ್ರ ರೋಮನ್ ಸಾಮ್ರಾಜ್ಯದ) ಬಾದಶಹ ಪದವೂ ಪ್ರಾಪ್ತವಾಯ್ತು. ಈ ಕಾರಣದಿಂದ ಫ್ರಾನ್ಸಿನ ರಾಜನಾದ ಫ್ರಾನ್ಸಿಸ್ ಮತ್ತು ಸ್ಪೇನದ ರಾಜನೂ ಜರ್ಮನ್ ಸಾಮ್ರಾಜ್ಯದ ಬಾದಶಹನೂ ಆದ ಚಾರ್ಲ್ಸ್ ಇವರಲ್ಲಿ ಯುರೋಪದಲ್ಲಿಯ ವರ್ಚಸ್ಸಿನ ವಿಷಯದಲ್ಲಿ ಸ್ಪರ್ಧೆಯುಂಟಾಯಿತು. ಅವರಿಬ್ಬರೂ ಹೆನ್ರಿಯ ಸಾಹಾಯ್ಯವನ್ನು ಕೋರಿದರು. ಅವರಲ್ಲಿ ಯಾರ ಪಕ್ಷವನ್ನು ಸ್ವೀಕರಿಸಬೇಕೆಂಬುದು ಹೆನ್ರಿಗೆ ಮಹತ್ವದ ಪ್ರಶ್ನೆಯಾಯ್ತು. ಸ್ಪೇನದ ರಾಜನಾದ ಚಾರ್ಲಸನಿಗೆ ಬಾದಶಹ ಪದವು ಪ್ರಾಪ್ತವಾಗಿ ಅವನ ಸಾಮ್ರಾಜ್ಯವು ನೆದರ್ಲಂಡ ಆಸ್ಟ್ರಿಯಾ ವೊದಲಾದ ವಿಸ್ತೃತ ಪ್ರದೇಶಗಳನ್ನು ಒಳಗೊಂಡುದರಿಂದ ಯುರೋಪದ ರಾಜಕಾರಣದಲ್ಲಿ ಅವನಿಗೆ ಬಹು ಮಹತ್ವವು ಉಂಟಾಗಿತ್ತು. ಹೆನ್ರಿ ಸತ್ತೆಯ ಸಮತೂಕವನ್ನು (Balance of Power) ಕಾಯಲು ಯಾವ ರಾಷ್ಟ್ರಕ್ಕೂ ವಿಶೇಷವಾಗಿ ಪ್ರಬಲವಾಗಗೊಡದಿರುವ ನೀತಿಯನ್ನು ಸ್ವೀಕರಿಸುವುದು ಯೋಗ್ಯವೆಂದು ಬಗೆದನು. ೧೫೨೦ರಲ್ಲಿ ಫ್ರಾನ್ಸಿಸನು ಹೆನ್ರಿಯನ್ನು ಫ್ರಾನ್ಸಿಗೆ ಕರೆಕಳಿಹಿ




ದನು. ಹೆನ್ರಿ ತನ್ನ ಪರಿವಾರದೊಡನೆ ಹೋದನು. ಕ್ಯಾಲೆಯ ಬಳಿಯಲ್ಲಿ ಒಂದು ಭವ್ಯವಾದ ಮಂಡಪದಲ್ಲಿ ಈ ರಾಜರಿಬ್ಬರ ಭೆಟ್ಟಿಯ ಸಮಾರಂಭವು

ಬಹು ವೈಭವದಿಂದ ನೆರವೇರಿತು. ಇಬ್ಬರೂ ಈ ಸಮಾರಂಭಕ್ಕೋಸ್ಕರ ಹಣವನ್ನು ನೀರಿನಂತೆ ವೆಚ್ಚಮಾಡಿದರು. ಈ ಕಾರಣದಿಂದ ಈ ಸಮಾರಂಭದ ಭೂಮಿಗೆ **ಸುವರ್ಣವಸ್ತ್ರ ಭೂಮಿ** (Field of the Cloth of Gold) ಎಂದು ಹೆಸರು ಬಂದಿತು. ಆದರೆ ಈ ಭೆಟ್ಟಿಯಿಂದ ಇಂಗ್ಲೆಂಡ್ ಮತ್ತು ಫ್ರಾನ್ಸ್ ಇವುಗಳಲ್ಲಿ ಸಖ್ಯವು ಉಂಟಾಗಲಿಲ್ಲ. ಈ ಸಮಾರಂಭವಾದ ಒಂದು ತಿಂಗಳಲ್ಲಿಯೇ ಹೆನ್ರಿ ಫ್ರಾನ್ಸಿನ ಪ್ರತಿಸ್ಪರ್ಧಿಯಾದ ಚಾರ್ಲಸನನ್ನೂ ಕಂಡು ಆತನೊಡನೆ ಗುಪ್ತವಾಗಿ ಒಪ್ಪಂದವನ್ನು ಮಾಡಿಕೊಂಡನು. ೧೫೨೧ರಲ್ಲಿ ಫ್ರಾನ್ಸ್ ಮತ್ತು ಸ್ಪೇನ ಇವುಗಳ ನಡುವೆ ಯುದ್ಧವು ಪ್ರಾರಂಭವಾಯ್ತು. ಹೆನ್ರಿ ಸ್ಪೇನದ ಪಕ್ಷವನ್ನು ಸ್ವೀಕರಿಸಿ ಫ್ರಾನ್ಸಿನೊಡನೆ ಯುದ್ಧ ಮಾಡಲು ಸೈನ್ಯವನ್ನು ಕಳಿಹಿದನು (೧೫೨೨–೨೩), ಆದರೆ ಈ ಯುದ್ಧದಲ್ಲಿ ಆತನಿಗೆ ಹೇಳಿಕೊಳ್ಳುವಂತಹ ಯಶವು ದೊರೆಯಲಿಲ್ಲ. ಚಾರ್ಲಸನು ಮಾತ್ರ ಫ್ರಾನ್ಸಿಸನನ್ನು ಸೋಲಿಸಿ ತನ್ನ ಸತ್ತೆಯನ್ನು ಬಹಳವಾಗಿ ಹೆಚ್ಚಿಸಿದನು.

ಪರರಾಷ್ಟ್ರೀಯ ರಾಜಕಾರಣದಲ್ಲಿ ಪ್ರವೇಶಿಸಿ ಹೆನ್ರಿ ಆಗಾಗ ಯುದ್ಧದಲ್ಲಿ ತೊಡಗುತ್ತಿದ್ದನು. ಅದಕ್ಕೋಸ್ಕರ ಅವನಿಗೆ ಹಣದ ಕೊರತೆಯಾಗುತ್ತಿತ್ತು. ತನ್ನ ತಂದೆ ಸಂಗ್ರಹಿಸಿದ ಸಂಪತ್ತನ್ನು ವೆಚ್ಚಮಾಡಿದ ಬಳಿಕ ಅವನು ಜನರ ಮೇಲೆ ಭಾರವಾದ ಕರಗಳನ್ನು ಹೇರಿದನು, ಇದಲ್ಲದೆ ಒತ್ತಾಯದಿಂದ ಕಾಣ್ಕೆಗಳನ್ನೂ ಸ್ವೀಕರಿಸತೊಡಗಿದನು. ಈ ಕಾರಣದಿಂದ ಸ್ವಾಭಾವಿಕವಾಗಿ ಜನರಲ್ಲಿ ಅಸಂತೋಷವು ತಲೆದೋರಿತು.

**ಧರ್ಮಸುಧಾರಣೆಯ ಆಂದೋಲನವು**—೧೫೧೭ರಲ್ಲಿ ಧರ್ಮಸುಧಾರಣೆಯ ಆಂದೋಲನವು ಜರ್ಮನಿಯಲ್ಲಿ ಪ್ರಾರಂಭವಾಗಿ ಯುರೋಪದ ಇತರ ದೇಶಗಳಲ್ಲಿ ಹಬ್ಬತೊಡಗಿತು. ಈ ಆಂದೋಲನವು ಪ್ರಾರಂಭವಾಗಲು ಯಾವ ಕಾರಣಗಳಾದುವು ಮತ್ತು ಅದು ಹೇಗೆ ಪ್ರಾರಂಭವಾಯ್ತು ಎಂಬುದನ್ನು ನೋಡುವ.

**ರೋಮದ ಪೋಪನು**—ರೋಮನಗರವು ರೋಮನ್ ಸಾಮ್ರಾಜ್ಯದ ರಾಜಧಾನಿಯ ಸ್ಥಳವಾಗಿದ್ದುದರಿಂದ ರೋಮದಲ್ಲಿಯ ಬಿಶಪನಿಗೆ (ಧರ್ಮಾಧಿಕಾರಿ) ಮಧ್ಯಯುಗದಲ್ಲಿ ಬಹು ಮಹತ್ವವು ಬಂದಿತ್ತು.* ಯುರೋಪದಲ್ಲಿ ಕ್ರೈಸ್ತ

---

*ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿಯ ಇಂಗ್ಲಂಡು ಈ ಪ್ರಕರಣದಲ್ಲಿಯ ಕ್ರೈಸ್ತಧರ್ಮದ ಸ್ಥಾಪನೆ ಮತ್ತು ಪ್ರಸಾರ ಈ ಭಾಗವನ್ನು ನೋಡಿರಿ. (ಪೃ. ೪೯–೫೪).

ಧರ್ಮದ ಪ್ರಸಾರವು ರೋಮದ ಬಿಶಪನಿಂದ ಆಗಿತ್ತು. ಆದುದರಿಂದ ಬೇರೆಬೇರೆ ದೇಶಗಳಲ್ಲಿ ಧರ್ಮಾಧಿಕಾರಿಗಳನ್ನು ನಿಯೋಜಿಸುವುದು, ಧಾರ್ಮಿಕ ವಿಷಯಗಳ ವ್ಯವಸ್ಥೆಯನ್ನು ನೋಡುವುದು, ಧಾರ್ಮಿಕ ಪ್ರಶ್ನೆಗಳನ್ನು ಕುರಿತು ಅಭಿಪ್ರಾಯ ವನ್ನು ಕೊಡುವುದು ಇವೇ ಮೊದಲಾದ ಕಾರ್ಯಗಳು ಅವನಿಂದ ಜರಗುತ್ತಿದ್ದುವು. ಅದರಿಂದ ಅವನ ಸತ್ತೆ ಬೆಳೆಯಿತು ಮತ್ತು ಜನರು ಅವನನ್ನು ಕ್ರೈಸ್ತ ಜಗದ್ಗುರು ವೆಂದು ತಿಳಿದರು. ಈ ಕಾರಣದಿಂದ ಅವನಿಗೆ **ಪೋಪ**ನೆಂದು ಹೆಸರು ಬಂದಿತು. ಮುಂದೆ ಮುಂದೆ ಧಾರ್ಮಿಕ ವಿಷಯಗಳಲ್ಲಿ ಹೇಗೊ ಹಾಗೆಯೇ ರಾಜಕೀಯ ವಿಷಯಗಳಲ್ಲಿಯೂ ಪೋಪನು ಸರ್ವ ಶ್ರೇಷ್ಠನೆಂದು ಜನರಲ್ಲಿ ಅಭಿಪ್ರಾಯ ವಾಯ್ತು.

**ಧರ್ಮಸುಧಾರಣೆಯ ಆವಶ್ಯಕತೆ**—ಮೊದಮೊದಲು ಪೋಪಪದಕ್ಕೆ ಬರುವ ಬಿಶಪರು ಮತ್ತು ಬೇರೆ ಬೇರೆ ದೇಶಗಳಲ್ಲಿಯ ಬಿಶಪರು, ಗ್ರಾಮೋಪಾ ಧ್ಯಾಯರು, ಸಾಧುಗಳು ಇವರೆಲ್ಲರು ವಿದ್ವಾಂಸರೂ, ಸದಾಚಾರಿಗಳೂ ಧಾರ್ಮಿಕ ವೃತ್ತಿಯವರೂ ಆಗಿರುತ್ತಿದ್ದರು. ಈ ಕಾರಣದಿಂದ ಜನರ ಮೇಲೆ ಅವರ ವರ್ಚಸ್ಸು ಇರುತ್ತಿತ್ತು. ಆ ಕಾಲದಲ್ಲಿ ಸಾಮಾನ್ಯ ಜನರು ಹುಂಬರೂ ಅಶಿಕ್ಷಿತರೂ ಆಗಿದ್ದರು. ಸುಶಿಕ್ಷಿತರೂ ಓದುಬರೆಹವನ್ನು ಬಲ್ಲವರೂ ಎಂದರೆ ಧರ್ಮಾಧಿಕಾರಿಗಳೇ ಆಗಿದ್ದರು. ಆದುದರಿಂದ ಇವರೆಂದುದನ್ನು ಜನರು ನಂಬು ತ್ತಿದ್ದರು. ಭಾವಿಕ ಮತ್ತು ಧಾರ್ಮಿಕ ವೃತ್ತಿಯ ಜನರಿಗೆ ಅವರ ವಿಷಯದಲ್ಲಿ ಪೂಜ್ಯಬುದ್ಧಿಯಿರುತ್ತಿತ್ತು ಭಾವಿಕರು ಅವರಿಗೆ ಭೂಮಿಗಳನ್ನೂ, ಕಾಣ್ಕೆಗಳ ನ್ನೂ, ಊರ ಉತ್ಪನ್ನದಲ್ಲಿ ಕೆಲವೊಂದು ಭಾಗವನ್ನೂ ಕೊಡುತ್ತಿದ್ದರು. ರೋಮದ ಪೋಪನಿಗೂ ಬೇರೆ ಬೇರೆ ದೇಶಗಳಿಂದ ಕಾಣ್ಕೆಗಳು ಬರುತ್ತಿದ್ದುವು ಮತ್ತು ಉತ್ಪನ್ನದ ಭಾಗಗಳೂ ದೊರೆಯುತ್ತಿದ್ದುವು. ಇದರಿಂದ ಪೋಪನ ಐಶ್ವರ್ಯವೂ ವೈಭವವೂ ಬೆಳೆದುವು ಮತ್ತು ಅವನು ತನ್ನದೊಂದು ಸಂಸ್ಥಾನವನ್ನು ನಿರ್ಮಿಸಿದನು. ಆದರೆ ಐಶ್ವರ್ಯದ ಹೆಚ್ಚುಗೆಯಿಂದ ಪೋಪನು ಮತ್ತು ಇತರ ಧರ್ಮಾಧಿಕಾರಿಗಳು ಸೋಮಾರಿಗಳೂ ವ್ಯಸನಾಧೀನರೂ ಆದರು ಮತ್ತು ಧಾರ್ಮಿಕ ವಿಷಯಗಳಲ್ಲಿ ಮನಸ್ಸಿಡುವುದನ್ನು ಬಿಟ್ಟು ಐಹಿಕ ವಿಷಯಗಳಲ್ಲಿ ಮನಸ್ಸನ್ನು ತೊಡಗಿಸಿದರು. ಆದುದರಿಂದ ಧರ್ಮಾಧಿಕಾರಿಗಳ ವ್ಯವಸಾಯ ವೆಂದರೆ ಕೆಲಸ ಮಾಡದೆ ವಿಲಾಸದಲ್ಲಿ ಕಾಲಕಳೆವುದು ಎಂದು ಜನತೆಯ ಅಭಿ ಪ್ರಾಯವಾಯ್ತು. ಅಯೋಗ್ಯರೂ ದುರಾಚಾರಿಗಳೂ ಅಕ್ಷರಶೂನ್ಯರೂ ಆದ ಎಷ್ಟೋ ಜನರು ಈ ವ್ಯವಸಾಯದಲ್ಲಿ ಸೇರಲಾರಂಭಿಸಿದರು. ಇವರಲ್ಲಿ ಅನೇಕರು

ಲ್ಯಾಟಿನ್ ಭಾಷೆಯಲ್ಲಿಯ ಬೈಬಲಿನಲ್ಲಿ ಏನಿದೆಂಬುದನ್ನು ಹೇಳಲೂ ಅರಿಯರು. ತಮ್ಮ ಅಜ್ಞಾನವು ಜನರಿಗೆ ಗೊತ್ತಾಗಬಾರದೆಂದು ಬೈಬಲನ್ನು ಇಂಗ್ಲಿಶ್, ಜರ್ಮನ್, ಫ್ರೆಂಚ ಮೊದಲಾದ ಭಾಷೆಗಳಿಗೆ ಪರಿವರ್ತಿಸುವುದು ಪಾಪವೆಂದು ಜನರಲ್ಲಿ ಅಭಿಪ್ರಾಯವನ್ನು ಹುಟ್ಟಿಸಿದರು. ಬೈಬಲಿಗೆ ಸಮ್ಮತವಿಲ್ಲದ ಅನೇಕ ಸಂಗತಿಗಳು ಧರ್ಮದ ಹೆಸರಿನಲ್ಲಿ ಆಗತೊಡಗಿದುವು. ಹೀಗೆ ಪೋಪನ ಮತ್ತು ಧರ್ಮಾಧಿಕಾರಿಗಳ ಸ್ವಾರ್ಥಪೂರ್ಣವೂ ಬೈಬಲಿಗೆ ಅಸಮ್ಮತವೂ ಆದ ಆಚರಣ ವನ್ನು ಕಂಡು ವಿವೇಕಿಗಳಾದವರು ಅವರಲ್ಲಿ ಸುಧಾರಣೆಯುಂಟಾಗಲು ಪ್ರಯ ತ್ನಿಸತೊಡಗಿದ್ದರು. ೧೩ನೆಯ ಶತಕದಲ್ಲಿ ಇಟಲಿಯಲ್ಲಿ ಫ್ರಾನ್ಸಿಸ್ ಸಾಧು ಮತ್ತು ಸ್ಪೇನದಲ್ಲಿ ಡಾಮಿನಿಕ್ ಸಾಧು ಎರಡು ಪಂಥಗಳನ್ನು ಸ್ಥಾಪಿಸಿ ಧರ್ಮಕಾರ್ಯ ದಲ್ಲಿ ತೊಡಗುವವರು ಸರಲಜೀವನವನ್ನೂ ಉಚ್ಚವಿಚಾರಸರಣಿಯನ್ನೂ ತಮ್ಮ ಧ್ಯೇಯವಾಗಿ ಇಟ್ಟುಕೊಂಡಿರಬೇಕೆಂದು ಉಪದೇಶಿಸಿದರು. ೧೪ನೆಯ ಶತಕದಲ್ಲಿ ಇಂಗ್ಲಂಡಿನಲ್ಲಿ **ವಿಕ್ಲಿಫನು** ಮತ್ತು ಆತನ ಅನುಯಾಯಿಗಳಾದ **ಲೋಲರ್ಡರು** ಧರ್ಮಸುಧಾರಣೆಯನ್ನು ಮಾಡಲು ಹವಣಿಸಿದರು. ಆದರೆ ಆ ಕಾಲದಲ್ಲಿ ಸಾಮಾನ್ಯ ಜನರು ಹುಂಬರೂ ಅಕ್ಷರಶತ್ರುಗಳೂ ಆಗಿದ್ದುದರಿಂದ ಮತ್ತು ರಾಜ ನಿಂದ ವಿಕ್ಲಿಫನಿಗೂ ಆತನ ಅನುಯಾಯಿಗಳಿಗೂ ವಿರೋಧವು ಆದುದರಿಂದ ಅವರ ಪ್ರಯತ್ನವು ಯಶಸ್ವಿಯಾಗಲಿಲ್ಲ.

**ಪ್ರಾಚೀನ ವಿದ್ಯೆಯ ಮತ್ತು ಕಲೆಗಳ ಅಭ್ಯಾಸವು**—೧೫ನೆಯ ಶತ ಕದ ಕೊನೆಯ ಭಾಗದಲ್ಲಿ ಪ್ರಾಚೀನ ಗ್ರೀಕ ಮತ್ತು ರೋಮನ ಜನರ ಜ್ಞಾನದ ಅಭ್ಯಾಸವು ಆಗತೊಡಗಿತು, ಮತ್ತು ಮುದ್ರಣಕಲೆಯ ಶೋಧವಾದುದರಿಂದ ಪುಸ್ತಕಗಳ ಸಂಖ್ಯೆ ಹೆಚ್ಚಿತು ಮತ್ತು ಅವು ಅಲ್ಪ ಬೆಲೆಯಲ್ಲಿ ದೊರೆಯಲು ಅನು ಕೂಲವಾಯ್ತು. ಅದರಿಂದ ಜ್ಞಾನಪ್ರಸಾರವು ಬಹಳವಾಯ್ತು ಮತ್ತು ಜನರು ಅಂಧಶ್ರದ್ಧೆಯನ್ನು ತೊರೆದು ಸ್ವತಂತ್ರ ರೀತಿಯಿಂದಲೂ ಚಿಕಿತ್ಸಕ ಬುದ್ಧಿಯಿಂದಲೂ ವಿಚಾರ ಮಾಡಲಾರಂಭಿಸಿದರು. ಯೇಸು ಕ್ರಿಸ್ತನ ಮತ್ತು ಅವನ ಪ್ರಮುಖ ಶಿಷ್ಯರ ಪವಿತ್ರವೂ ಉದಾತ್ತವೂ ಆದ ಆಚರಣೆಯೊಡನೆ ಮಧ್ಯಯುಗದಲ್ಲಿಯ ಪೋಪ, ಆರ್ಚಬಿಶಪ್, ಬಿಶಪ್ ಮೊದಲಾದ ಅಧಿಕಾರಿಗಳ ವಿಲಾಸಪೂರ್ಣವೂ ಸ್ವಾರ್ಥಮಯವೂ ಆದ ಆಚರಣೆಯನ್ನು ಜನರು ತುಲನೆಮಾಡತೊಡಗಿದರು. ಕ್ರಿಸ್ತನ ಉಪದೇಶಕ್ಕೆ ಈ ಧರ್ಮಾಧಿಕಾರಿಗಳ ವರ್ತನವು ಎಷ್ಟು ವಿಸಂಗತವಾಗಿ ದೆಂಬುದು ಜನರಿಗೆ ಗೊತ್ತಾಯ್ತು. ಇರ್ಯಾಸಮಸ ಎಂಬ ಡಚ್ ವಿದ್ವಾಂಸನು ಗ್ರೀಕ ಭಾಷೆಯ ಅಭ್ಯಾಸವನ್ನು ಮಾಡಿ ಗ್ರೀಕ ಭಾಷೆಯಲ್ಲಿಯ ಬೈಬಲನ್ನು

ಲ್ಯಾಟಿನ್ ಭಾಷೆಗೆ ಪರಿವರ್ತಿಸಿದನು. ಅವನು ಆ ಕಾಲದ ಸೋಮಾರಿಗಳೂ ನಿರುದ್ಯೋಗಿಗಳೂ, ದುರಾಚಾರಿಗಳೂ, ಅಹಂಮನ್ಯರೂ ಆದ ಧರ್ಮಾಧಿಕಾರಿಗಳ ನಿಜವಾದ ಸ್ವರೂಪವನ್ನು ಬೈಲಿಗೆಳೆಯಲು 'ಮೂರ್ಖಸ್ತುತಿ' (Praise of Folly) ಎಂಬ ಗ್ರಂಥವನ್ನು ಬರೆದನು. ಈ ಎಲ್ಲ ಕಾರಣಗಳಿಂದ ಜನರಲ್ಲಿ ಅಂಧಶ್ರದ್ಧೆಯಿಲ್ಲದಾಗಿ ಸ್ವತಂತ್ರವಾಗಿ ವಿಚಾರಮಾಡುವ ಪ್ರವೃತ್ತಿ ಉಂಟಾಯ್ತು.

**ಪಾಪದಿಂದ ಮುಕ್ತಗೊಳಿಸುವ ಪತ್ರಿಕೆಗಳು ಮತ್ತು ಮಾರ್ಟಿನ್ ಲೂಥರನು**—೧೫೧೭ರಲ್ಲಿ **ಜಾನ್ ಟಿಟಝೆಲ್** ಎಂಬ ಧರ್ಮಾಧಿಕಾರಿ ರೋಮದ ಪೋಪನಿಂದ 'ಪಾಪದಿಂದ ಮುಕ್ತಗೊಳಿಸುವ ಪತ್ರಿಕೆ'ಗಳನ್ನು (Indulgences) ಜರ್ಮನಿಯಲ್ಲಿ ಮಾರಲು ತಂದನು. ಈ ಪತ್ರಿಕೆಯಲ್ಲಿ ಬೈಬಲಿನಲ್ಲಿಯ ಕೆಲವು ವಾಕ್ಯಗಳು ಬರೆಯಲ್ಪಟ್ಟಿದ್ದುವು ಮತ್ತು ಈ ಪತ್ರಿಕೆಯನ್ನು ಕೊಂಡವರ 'ಪಾಪಗಳು ಯೇಸು ಕ್ರಿಸ್ತನ ಮತ್ತು ಪೋಪನ ಆಶೀರ್ವಾದದಿಂದ ನಿರ್ಮೂಲವಾಗಿ ಅಳಿದು ಅವರಿಗೋಸ್ಕರ ಸ್ವರ್ಗದ ಬಾಗಿಲು ತೆರೆದಿರುವುದೆಂದು ಬರೆಯಲ್ಪಟ್ಟಿತ್ತು. ಈ ಪತ್ರಿಕೆಗಳ ವಿಕ್ರಯದಿಂದ ಬಂದ ಹಣದ ಉಪಯೋಗವು ಆಗ ರೋಮದಲ್ಲಿ ಕಟ್ಟಲ್ಪಡುತ್ತಲಿದ್ದ ಪೀಟರ ಸಾಧುವಿನ ಚರ್ಚಿಗೋಸ್ಕರ ಆಗುವುದಿದ್ದಿತು. ಆದರೆ ಎಷ್ಟೋ ಸಲ ಅದು ಪೋಪನ ವಿಲಾಸದ ಸಾಧನಗಳನ್ನು ಸಂಗ್ರಹಿಸುವುದಕ್ಕೂ ರೋಮದಲ್ಲಿ ದೊಡ್ಡ ದೊಡ್ಡ ಮಂದಿರಗಳನ್ನು ಕಟ್ಟಲಿಕ್ಕೂ ಉಪಯೋಗಿಸಲ್ಪಡುತ್ತಿತ್ತು. ಈ ಪತ್ರಿಕೆಗಳನ್ನು ಜರ್ಮನಿಗೆ ತಂದ ಜಾನ್ ಟಿಟಝೆಲ್‌ನನ್ನು ಮಾರ್ಟಿನ್ ಲೂಥರನು ಬಲವಾಗಿ ವಿರೋಧಿಸಿದನು. ಮಾರ್ಟಿನ್ ಲೂಥರನು ಜರ್ಮನಿಯಲ್ಲಿ ಟ್ಯೂರಿಜಿಯಾ ಪ್ರಾಂತದಲ್ಲಿ ಹುಟ್ಟಿದನು. ಆತನ ಮನೆಯವರು ಬಡವರು. ಆತನ ತಂದೆ ಕಣಿಯಲ್ಲಿ ಕೆಲಸ ಮಾಡುವ ಕೂಲಿಕಾರನಾಗಿದ್ದನು. ಹೀಗಿದ್ದರೂ ಅವನು ತನ್ನ ಮಗನು ವಕೀಲಿಯ ವ್ಯವಸಾಯವನ್ನು ಕೈಕೊಳ್ಳಬೇಕೆಂದು ಅವನನ್ನು ಶಿಕ್ಷಣಕ್ಕೋಸ್ಕರ ವಿಶ್ವವಿದ್ಯಾಲಯಕ್ಕೆ ಕಳಿಹಿದನು. ಆದರೆ ಮಾರ್ಟಿನನ ಒಲವು ವಕೀಲಿಯ ವ್ಯವಸಾಯದ ಕಡೆಗೆ ಇರಲಿಲ್ಲ. ಅವನು ೧೫೧೦ರಲ್ಲಿ ಧಾರ್ಮಿಕ ವಿಷಯಗಳ ಅಭ್ಯಾಸಕ್ಕೋಸ್ಕರ ರೋಮ ನಗರಕ್ಕೆ ಹೋದನು. ಅಲ್ಲಿ ಅವನು ಪೋಪನ ವಿಲಾಸಪೂರ್ಣವಾದ ಜೀವನವನ್ನು ಪ್ರತ್ಯಕ್ಷವಾಗಿ ಕಂಡನು. ಅವನು ಜರ್ಮನಿಗೆ ತಿರುಗಿ ಬಂದ ಬಳಿಕ ವಿಟನ್‌ಬರ್ಗ ವಿಶ್ವವಿದ್ಯಾಲಯದಲ್ಲಿ ತತ್ವಜ್ಞಾನದ ಪ್ರೊಫೆಸರನಾದನು. ಈ ಸಮಯದಲ್ಲಿ ಜಾನ್ ಟಿಜಝೆಲನು ವಿಟನ್‌ಬರ್ಗಕ್ಕೆ ಬಂದು, 'ಪಾಪದಿಂದ ಮುಕ್ತಗೊಳಿಸುವ ಪತ್ರಿಕೆಗಳನ್ನು ಕೊಂಡು ಸ್ವರ್ಗದ

ಬಾಗಿಲನ್ನು ತೆರೆದಿಟ್ಟುಕೊಳ್ಳಿರಿ', ಎಂದು ಉಪದೇಶಿಸತೊಡಗಿದನು. ತತ್ವಜ್ಞಾನದ ಪ್ರೊಫೆಸರನಾದ ಮಾರ್ಟಿನ ಲೂಥರನಿಗೆ ಇದನ್ನು ಕೇಳಿ ಸುಮ್ಮನಿರುವುದಾಗಲಿಲ್ಲ. ಆಗ ಅವನು, "ಇಂತಹ ಪತ್ರಿಕೆಗಳನ್ನು ಕೊಳ್ಳುವುದರಿಂದ ಸ್ವರ್ಗದ ಬಾಗಿಲು ತೆರೆಯುತ್ತದೆಂದು ಬೈಬಲಿನಲ್ಲಿ ಎಲ್ಲಿಯೂ ಹೇಳಿಲ್ಲ. ಜನರ ಅಜ್ಞಾನದ ಮತ್ತು ಅಂಧಶ್ರದ್ಧೆಯ ಲಾಭವನ್ನು ಪಡೆದು ಪೋಪನು ಬೈಬಲಿಗೆ ಸಮ್ಮತವಿರದ ಮಾತುಗಳನ್ನು ಮಾಡುತ್ತಾನೆ" ಎಂದು ಮೊದಲಾದ ೯೫ ಮಾತುಗಳನ್ನೊಳಗೊಂಡ ಪತ್ರಿಕೆಯೊಂದನ್ನು ವಿಟನ್‌ಬರ್ಗದ ಚರ್ಚಿನ ಬಾಗಿಲ ಮೇಲೆ ಅಂಟಿಸಿದನು (೧೫೧೭); ಮತ್ತು ಟೆಟಝೆಲನಿಗೆ ತನ್ನ ಪತ್ರಿಕೆಯನ್ನು ಸಮರ್ಥಿಸಲು ಆಹ್ವಾನ ವಿತ್ತನು. ಲೂಥರನ ಈ ಕೃತಿಯಿಂದ ಜರ್ಮನಿಯಲ್ಲಿಯ ಎಲ್ಲರ ಲಕ್ಷ್ಯವು ಆತನ ಕಡೆಗೆ ಹೋಯ್ತು. ಮತ್ತು ಆತನ ಪತ್ರಿಕೆಯಲ್ಲಿ ಹೇಳಲ್ಪಟ್ಟ ೯೫ ಮಾತುಗಳ ಪ್ರಸಾರವು ಎಲ್ಲೆಲ್ಲಿಯೂ ಆಯ್ತು. ಪೋಪನ ಕೃತ್ಯವನ್ನು ಸಮರ್ಥಿಸುವ ಜನರೂ ಅನೇಕರಿದ್ದರು. ಆದುದರಿಂದ ಈ ವಿಷಯವನ್ನು ಕುರಿತು ಜರ್ಮನಿಯಲ್ಲಿ ಬಲವಾದ ವಾದವಿವಾದವು ಪ್ರಾರಂಭವಾಯ್ತು.

ಪ್ರಾಟೆಸ್ಟಂಟ ಪಂಥದ ಸ್ಥಾಪನೆ—'ಪಾಪದಿಂದ ಮುಕ್ತಗೊಳಿಸುವ ಪತ್ರಿಕೆ'ಗಳ ವಿರುದ್ಧವಾಗಿ ಲೂಥರನು ತನ್ನ ಪತ್ರಿಕೆಯನ್ನು ಪ್ರಕಟಗೊಳಿಸುವಾಗ ಹೊಸದೊಂದು ಧರ್ಮಪಂಥವನ್ನು ಸ್ಥಾಪಿಸಬೇಕೆಂದು ಅವನ ಮನಸ್ಸಿನಲ್ಲಿ ಇರಲಿಲ್ಲ. ಆದರೆ ಪೋಪನ ಕೃತ್ಯವನ್ನು ಸಮರ್ಥಿಸುವ ಜನರು ಅವನ ವಿರುದ್ಧವಾಗಿ ಗೊಂದಲವನ್ನು ಹೂಡಲು, ಧಾರ್ಮಿಕ ವಿಷಯಗಳನ್ನು ಕೂಲಂಕಷವಾಗಿ ಅರಿತುಕೊಳ್ಳಲು ಅವನು ಧರ್ಮ ಪುಸ್ತಕಗಳನ್ನು ಸೂಕ್ಷ್ಮವಾಗಿ ಓದತೊಡಗಿದನು. ಪೋಪನಿಗೆ ಕ್ರೈಸ್ತಧರ್ಮದ ಜಗದ್ಗುರುತ್ವದ ಅಧಿಕಾರವನ್ನು ಯಾರೂ ಕೊಟ್ಟಿರದೆ ಅದನ್ನು ಅವನೇ ಹುಟ್ಟಿಸಿಕೊಂಡಿರುವನೆಂದು ಲೂಥರನಿಗೆ ತೋರಿತು. ಬೈಬಲಿಗೆ ಸಮ್ಮತವಿಲ್ಲದ ಅನೇಕ ಆಚಾರಗಳನ್ನೂ ಸಂಗತಿಗಳನ್ನೂ ಪೋಪನು ತನ್ನ ಅಧಿಕಾರದಿಂದಲೆ ಕ್ರೈಸ್ತಧರ್ಮದಲ್ಲಿ ಹೊಗಿಸಿರುವನೆಂಬುದನ್ನು ಅವನು ಮನಗಂಡನು. ಪೋಪನ ವರ್ತನವೇ ಧರ್ಮವಿರುದ್ಧವಾಗಿದ್ದುದರಿಂದ ಅವನ ಮಾತನ್ನು ಪ್ರಮಾಣವಾಗಿ ಸ್ವೀಕರಿಸದೆ ಬೈಬಲನ್ನೇ ಪ್ರಮಾಣವಾಗಿ ಇಟ್ಟುಕೊಂಡು ಅದರಲ್ಲಿ ಹೇಳಿದುದು ಏನೆಂಬುದನ್ನು ತಿಳಿದುಕೊಳ್ಳುವುದು ಕರ್ತವ್ಯವೆಂದು ಅವನಿಗೆ ತೋರಿತು. ತನ್ನ ಅಭಿಪ್ರಾಯಗಳನ್ನು ಜನತೆಯ ಮುಂದಿಡಲು ಲೂಥರನು ೧೫೨೦ರಲ್ಲಿ ಒಂದು ಪುಸ್ತಕವನ್ನು ಪ್ರಸಿದ್ಧಿಸಿದನು. ೧೦ನೆಯ ಪೋಪನಾದ ಲಿಓ ಇವನು ಇವೆಲ್ಲವನ್ನು ಕಂಡು ಮಾರ್ಟಿನ್ ಲೂಥರನು ಪಾಖಂಡಮತದ ಪ್ರಸಾರಕನಾಗಿರು

ವುದರಿಂದ ಆತನು ಧರ್ಮಬಹಿಷ್ಕೃತನಾಗಿರುವನೆಂದು ಬಹಿಷ್ಕಾರ ಪತ್ರಿಕೆಯನ್ನು ಪ್ರಕಟಿಸಿದನು. ಲೂಥರನು ಈ ಬಹಿಷ್ಕಾರ ಪತ್ರಿಕೆಯನ್ನು ಸುಟ್ಟುದಲ್ಲದೆ ಪೋಪನ ಸತ್ತೆ ತನಗೆ ಮಾನ್ಯವಿಲ್ಲೆಂದು ಸಾರಿದನು. ಲೂಥರನ ಅಭಿಪ್ರಾಯವು ಸರಿಯಾದುದೆಂದು ಅನೇಕರಿಗೆ ತೋರಿ ಅವರು ಅವನ ಅನುಯಾಯಿಗಳಾದರು. ಈ ಧರ್ಮಸುಧಾರಣೆಯ ಆಂದೋಲನವು ಜರ್ಮನಿಯಲ್ಲಷ್ಟೆ ಉಳಿಯದೆ ಯುರೋಪದಲ್ಲಿಯ ಇತರ ರಾಷ್ಟ್ರಗಳಲ್ಲಿಯೂ ಹಬ್ಬತೊಡಗಿತು. ಈ ಆಂದೋಲನವು ಪೋಪನ ಧಾರ್ಮಿಕ ಸತ್ತೆಗೂ ವರ್ಚಸ್ಸಿಗೂ ವಿರುದ್ಧವಾದುದರಿಂದ ಮಾರ್ಟಿನ್ ಲೂಥರನಿಗೂ ಆತನ ಅನುಯಾಯಿಗಳಿಗೂ ಮಾರ್ಟಿನ್ ಲೂಥರನಂತೆ ಪೋಪನ ಸತ್ತೆಯನ್ನು ಮನ್ನಿಸುವವರಿಗೂ 'ಪ್ರಾಟೆಸ್ಟಂಟ್ಸ' ಎಂದರೆ **'ವಿರೋಧಕರು'** ಎಂದು ಹೆಸರು ಬಂದಿತು. ಮತ್ತು ಅವರ ಪಂಥವು **ಪ್ರಾಟೆಸ್ಟಂಟ ಪಂಥ'**ವೆಂದು ಪ್ರಸಿದ್ಧವಾಯ್ತು. ಇತ್ತ ಪೋಪನ ಧಾರ್ಮಿಕ ಸತ್ತೆಯನ್ನು ಮನ್ನಿಸುವವರಿಗೆ **ರೋಮನ್ ಕ್ಯಾಥಲಿಕ್ಸ** ಅಥವಾ 'ಪೇಪಿಸ್ಟ' ಎಂದು ಹೆಸರು ಬಂದಿತು; ಮತ್ತು ಅವರ ಪಂಥವು **'ರೋಮನ್ ಕ್ಯಾಥಲಿಕ್ ಪಂಥ'**ವೆಂದು ಪ್ರಸಿದ್ಧವಾಯ್ತು.

**ಪ್ರಾಟೆಸ್ಟಂಟ ಪಂಥದಲ್ಲಿಯ ಉಪಪಂಥಗಳು**—ಮಾರ್ಟಿನ್ ಲೂಥರನಂತೆ ಸ್ವಿಝರ್ಲಂಡಿನಲ್ಲಿ **ಝ್ವಿಂಗಲಿ** (೧೪೮೪—೧೫೩೧), **ಕಲ್ವಿನ್** (೧೫೦೯—೧೫೬೪) ಮತ್ತು ಸ್ಕಾಟ್‌ಲಂಡಿನಲ್ಲಿ **ಜಾನ್ ನಾಕ್ಸ** (೧೫೦೫—೧೫೭೨) ಎಂಬ ವಿಚಾರವಂತರಾದ ವಿದ್ವಾಂಸರು ಧಾರ್ಮಿಕಸುಧಾರಣೆಯ ಆಂದೋಲನವನ್ನು ಪ್ರಾರಂಭಿಸಿದ್ದರು. ಇವರೆಲ್ಲರೂ ಪೋಪನ ಸತ್ತೆಯ ವಿರೋಧಕರಾದುದರಿಂದ ಅವರಿಗೂ **ಪ್ರಾಟೆಸ್ಟಂಟ್ಸ** ಎಂಬ ಹೆಸರುಬಂದಿತು. ಪ್ರತಿಯೊಂದು ರಾಷ್ಟ್ರದ ರಾಜ್ಯಕರ್ತರು ಬೈಬಲನ್ನೇ ಪ್ರಮಾಣವಾಗಿಟ್ಟುಕೊಂಡು ಧಾರ್ಮಿಕ ವಿಷಯಗಳ ವ್ಯವಸ್ಥೆಯನ್ನು ಮಾಡುವುದು ಯೋಗ್ಯವೆಂದು **ಲೂಥರನಿಗೆ** ತೋರಿತು. ಜರ್ಮನಿಯಲ್ಲಿ ಅವನ ನವಮತದ ಪ್ರಸಾರವು ಬಹಳವಾಯ್ತು. **ಝ್ವಿಂಗಲಿ** 'ಪಾಪದಿಂದ ಮುಕ್ತಗೊಳಿಸುವ ಪತ್ರಿಕೆ'ಯನ್ನು ಕಟುವಾಗಿ ಟೀಕಿಸಿದನು. ಈತನಿಗೂ ಪೋಪನ ಸತ್ತೆ ಮಾನ್ಯವಿದ್ದಿಲ್ಲ. ಧಾರ್ಮಿಕ ವಿಷಯದಲ್ಲಿ ಬೈಬಲ್ ಗ್ರಂಥವೇ ಪ್ರಮಾಣವೆಂದು ಅವನದೂ ಮತವು. ಪ್ರಾರ್ಥನೆಯ ಕಾಲದಲ್ಲಿ ಪಾವಿತ್ರ್ಯವೂ ಸರಲತೆಯೂ ಇರತಕ್ಕುದು; ಚರ್ಚುಗಳಲ್ಲಿ ಭಾವಚಿತ್ರಗಳನ್ನು ಇಡಬಾರದು, ಏಕೆಂದರೆ ಮೂರ್ತಿಪೂಜೆಯ ಕಡೆಗೆ ಜನರ ಪ್ರವೃತ್ತಿಯಾಗುವುದು ಎಂದು ಅವನು ವಾದಿಸಿದನು. ವಿವಾಹದ ಕಾಲದಲ್ಲಿ ವಧೂವರರು ಒಬ್ಬರಿಗೊಬ್ಬರು ಉಂಗುರ

ಗಳನ್ನು ಕೊಡುವುದು ಉಚಿತವಲ್ಲವೆಂದು ಅವನ ಮತವು. ಧಾರ್ಮಿಕ ವಿಷಯಗಳಲ್ಲಿ ಧರ್ಮಾಧಿಕಾರಿಗಳ ಆವಶ್ಯಕತೆಯಿಲ್ಲವೆಂದೂ ಎಲ್ಲರಿಗೂ ಮಧ್ಯಸ್ಥನಿಲ್ಲದೆ ಧಾರ್ಮಿಕ ವಿಧಿಗಳನ್ನು ನೆರವೇರಿಸಲು ಬರುವುದೆಂದೂ ಅವನ ಅಭಿಪ್ರಾಯವು. ಇವನ ಪಂಥದ ಪ್ರಸಾರವು ಸ್ವಿಝರ್ಲ್ಯಾಂಡ್ ಮತ್ತು ಹಾಲಂಡ್ ದೇಶಗಳಲ್ಲಿ, ಫ್ರಾನ್ಸಿನ ಕೆಲವು ಭಾಗಗಳಲ್ಲಿ, ಮತ್ತು ಸ್ಕಾಟಲಂಡಿನಲ್ಲಿ ಬಹಳವಾಯ್ತು. ಅವನ ಅನುಯಾಯಿಗಳು 'ಕ್ಯಾಲ್ವಿನಿಸ್ಟ್ಸ', 'ಪ್ಯುರಿಟನ್ಸ', ಮತ್ತು 'ಪ್ರೆಸ್‌ಬಿಟೇರಿಯನ್ಸ' (Calvinists, Puritans, Presbyterians) ಎಂದು ಕರೆಯಲ್ಪಟ್ಟರು. ಜಾನ್ ನಾಕ್ಸನು ಕ್ಯಾಲ್ವಿನನ ಅನುಯಾಯಿಯಾಗಿದ್ದನು. ಸ್ಕಾಟಲಂಡಿನಲ್ಲಿ ಅವನೇ ಕ್ಯಾಲ್ವಿನನ ಪಂಥದ ಪ್ರಸಾರವನ್ನು ಮಾಡಿದನು. ಸ್ಕಾಟಲಂಡಿನ ಜನರು ತಮ್ಮ ಧಾರ್ಮಿಕ ವಿಧಿಗಳಿಗೋಸುಗ ಮತ್ತು ಪ್ರಾರ್ಥನೆಗೋಸುಗ ಧರ್ಮಾಧಿಕಾರಿಗಳನ್ನು ನಿಯೋಜಿಸದೆ ತಮ್ಮೊಳಗಿನ ವಯಸ್ಕರಾದ ಶಿಷ್ಟರನ್ನು ನಿಯೋಜಿಸುತ್ತಿದ್ದರು. ಆದುದರಿಂದ ಅವರ ಧರ್ಮಪಂಥಕ್ಕೆ 'ಪ್ರೆಸ್ಬಿಟೇರಿಯನ್ ಪಂಥ'ವೆಂದು (ಪ್ರೆಸ್ಬಿಟರ ಎಂದರೆ ವಯಸ್ಕನು) ಹೆಸರು ಬಂದಿತು. ಫ್ರಾನ್ಸಿನಲ್ಲಿಯ ಕ್ಯಾಲ್ವಿನನ ಅನುಯಾಯಿಗಳು ಹ್ಯೂಗೆನಾಟ್ಸ ಎಂದು ಪ್ರಸಿದ್ಧರಾದರು.

**ಎಂಟನೆಯ ಹೆನ್ರಿಯೂ ಧರ್ಮಸುಧಾರಣೆಯ ಆಂದೋಲನವೂ.**— ಜರ್ಮನಿಯಲ್ಲಿ ಹುಟ್ಟಿದ ಈ ಧರ್ಮಸುಧಾರಣೆಯ ಆಂದೋಲನವು ಇಂಗ್ಲಂಡಿನಲ್ಲಿಯೂ ಹಬ್ಬಿತು. ಆದರೆ ಮೊದಮೊದಲು ಇಂಗ್ಲಂಡಿನ ಮೇಲೆ ಈ ಆಂದೋಲನದ ಪರಿಣಾಮವು ಬಹಳವಾಗಲಿಲ್ಲ. ಇಂಗ್ಲಂಡಿನಲ್ಲಿಯ ಧರ್ಮಾಧಿಕಾರಿಗಳು ಯುರೋಪದ ಇತರ ದೇಶಗಳ ಧರ್ಮಾಧಿಕಾರಿಗಳಂತೆ ವಿಲಾಸಿಗಳಾಗಿರಲಿಲ್ಲ. ಆದುದರಿಂದ ಅವರ ವಿಷಯದಲ್ಲಿ ಸಾಮಾನ್ಯ ಜನತೆಗೆ ತಿರಸ್ಕಾರವಿರಲಿಲ್ಲ. ಜರ್ಮನಿಯಲ್ಲಿ ಲೂಥರನು ಪ್ರಾರಂಭಿಸಿದ ಧರ್ಮಸುಧಾರಣೆಯ ಆಂದೋಲನದ ವಿರುದ್ಧವಾಗಿ ಎಂಟನೆಯ ಹೆನ್ರಿ ಒಂದು ಪುಸ್ತಕವನ್ನು ಬರೆದು ಪೋಪನನ್ನು ಸಮರ್ಥಿಸಿದನು. ಆದುದರಿಂದ ಪೋಪನು (೧೦ನೆಯ ಲಿಓ) ಅವನಿಗೆ 'ಧರ್ಮರಕ್ಷಕ'ನೆಂಬ (Defender of the Faith) ಬಿರುದನ್ನಿತ್ತನು. ಲೂಥರನ ಆಂದೋಲನದ ವಿಷಯದಲ್ಲಿ ಇಂಗ್ಲಂಡಿನ ರಾಜನಿಗಾಗಲಿ ಜನತೆಗಾಗಲಿ ಸಹಾನುಭೂತಿಯಿರಲಿಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಆದರೆ ಈ ಸಮಯದಲ್ಲಿ ಕೆಲವೊಂದು ಕಾರಣದಿಂದ ಪೋಪ ಮತ್ತು ಹೆನ್ರಿ ಇವರಲ್ಲಿ ವಿತುಷ್ಟತೆ ಉಂಟಾಯ್ತು. ಆದುದರಿಂದ ಪೋಪನಿಗೆ ಹೆನ್ರಿಯ ಬೆಂಬಲವು

ತಪ್ಪಿತು; ಮುಂದಂತು ಇಂಗ್ಲಂಡಿನ ಜನರು ಪ್ರಾಟೆಸ್ಟಂಟ ಪಂಥವನ್ನೇ ಸ್ವೀಕರಿಸಿದರು.

**ಎಂಟನೆಯ ಹೆನ್ರಿಯ ವಿವಾಹವಿಚ್ಛೇದದ ಪ್ರಕರಣವು**—೭ನೆಯ ಹೆನ್ರಿ ತನ್ನ ಹಿರಿಯ ಮಗನಾದ ಆರ್ಥರನ ಲಗ್ನವನ್ನು ಸ್ಪೇನದ ರಾಜನ ಮಗಳಾದ ಕ್ಯಾಥರಿನ್ ಇವಳೊಡನೆ ಮಾಡಿದ್ದನು (೧೫೦೧). ಆದರೆ ಲಗ್ನವಾದ ಬಳಿಕ ಕೆಲವು ದಿನಗಳಲ್ಲಿಯೇ ಆರ್ಥರನು ಮಡಿದನು. ಆಗ ೭ನೆಯ ಹೆನ್ರಿ ಸ್ಪೇನದೊಡನೆ ಉಂಟಾಗಿದ್ದ ಆಪ್ತತ್ವದ ಸಂಬಂಧವು ತಪ್ಪಬಾರದೆಂದು ತನ್ನ ಎರಡನೆಯ ಮಗನಾದ ೮ನೆಯ ಹೆನ್ರಿಯೊಡನೆ ಕ್ಯಾಥರಿನ ಇವಳ ಪುನರ್ವಿವಾಹವನ್ನು ಮಾಡಲು ಪೋಪನ ಸಮ್ಮತಿಯನ್ನು ಪಡೆದಿದ್ದನು. ಆದರೆ ಅವನು ಬದುಕಿರುವಾಗ ಈ ವಿವಾಹವು ಆಗದೆ ೮ನೆಯ ಹೆನ್ರಿ ಪಟ್ಟಕ್ಕೆ ಬಂದಬಳಿಕ ಆಯ್ತು (೧೫೦೯). ಕ್ರೈಸ್ತ ಧರ್ಮದಂತೆ ಅಣ್ಣನ ವಿಧವೆಯನ್ನು ಲಗ್ನವಾಗುವುದು ನಿಷಿದ್ಧವಾಗಿದ್ದರೂ ಪೋಪನ ಅಪ್ಪಣೆಯಿಂದ ಈ ಲಗ್ನಕಾರ್ಯವು ನೆರವೇರಿತು. ಆದರೆ ಈ ಲಗ್ನದಿಂದ ಗಂಡಹೆಂಡಿರಿಬ್ಬರಿಗೂ ಸುಖವಾಗಲಿಲ್ಲ. ಹೆನ್ರಿಯ ಸ್ವಭಾವವು ವಿಲಾಸಿಯಾಗಿದ್ದಿತು. ಆದರೆ ಕ್ಯಾಥರಿನ ಇವಳ ಸ್ವಭಾವವು ಇದಕ್ಕೆ ವಿರುದ್ಧವಾಗಿದ್ದಿತು. ಅವಳು ಧರ್ಮಶೀಲೆಯಾಗಿದ್ದಳು, ವಿಲಾಸವೂ ಒನಪು-ಒಯ್ಯಾರವೂ ಅವಳಿಗೆ ಎಳ್ಳಷ್ಟು ಸೇರುತ್ತಿರಲಿಲ್ಲ. ಆದುದರಿಂದ ಅವಳ ವಿಷಯದಲ್ಲಿ ಹೆನ್ರಿಗೆ ಪ್ರೇಮವಿರಲಿಲ್ಲ. ಅವಳಿಗಾದ ಮಕ್ಕಳು ಮೃತ್ಯುವಿಗೆ ತುತ್ತಾದರು. ಮೇರಿ ಎಂಬವಳೊಬ್ಬಳು ಬದುಕಿದ್ದಳು. ತನಗೆ ಕ್ಯಾಥರಿನ್ ಇವಳಿಂದ ಪುತ್ರಸಂತಾನವಾಗುವ ಸಂಭವವಿಲ್ಲವೆಂದು ಹೆನ್ರಿಗೆ ತೋರಿದುದರಿಂದ ಅವಳೊಡನೆ ವಿವಾಹವಿಚ್ಛೇದವನ್ನು ಮಾಡಿಕೊಳ್ಳಲು ಆತನು ಸಂಧಿಯನ್ನು ಹುಡುಕಲಾರಂಭಿಸಿದನು. ಈ ವಿಚಾರದಲ್ಲಿ ಅವನಿದ್ದಾಗ ಕ್ಯಾಥರಿನ್ ಇವಳ ಚಾಕರಿಯಲ್ಲಿದ್ದ ಅನ್ ಬುಲೀನ್ ಎಂಬ ಸೌಂದರ್ಯವತಿಯಾದ ದಾಸಿಯಲ್ಲಿ ಅವನಿಗೆ ಪ್ರೇಮವುಂಟಾಯ್ತು. ಆದರೆ ಅವಳನ್ನು ಲಗ್ನವಾಗಲು ಬರುವಂತಿದ್ದಿಲ್ಲ. ಒಬ್ಬ ಹೆಂಡತಿ ಬದುಕಿರುವಾಗ ಇನ್ನೊಬ್ಬಳನ್ನು ಲಗ್ನವಾಗುವುದು ಕ್ರೈಸ್ತಧರ್ಮದಲ್ಲಿ ನಿಷಿದ್ಧವಾಗಿರುವುದು. ಆದುದರಿಂದ ಕ್ಯಾಥರಿನ್ ಇವಳೊಡನೆ ವಿವಾಹವಿಚ್ಛೇದವನ್ನು ಮಾಡಿಕೊಳ್ಳಬೇಕೆಂದು ಅವನು ನಿಶ್ಚಯಿಸಿದನು. ಆದರೆ ಈ ವಿಷಯದಲ್ಲಿ ಪೋಪನ ಸಮ್ಮತಿ ಅವಶ್ಯವಾಗಿತ್ತು. ಅದನ್ನು ದೊರಕಿಸುವ ಕೆಲಸವನ್ನು ಹೆನ್ರಿ ವೂಲ್ಸೆಗೆ ಒಪ್ಪಿಸಿದನು.

**ಪೋಪನ ವಿಚಿತ್ರ ಪರಿಸ್ಥಿತಿ**—ಈ ಸಮಯದಲ್ಲಿ ೭ನೆಯ ಕ್ಲೆಮೆಂಟ ಎಂಬವನು ಪೋಪನಾಗಿದ್ದನು. ಈ ಘಟಸ್ಫೋಟದ ಪ್ರಕರಣದಲ್ಲಿ ಆತನ ಸ್ಥಿತಿ ಬಹು

ವಿಚಿತ್ರವಾಯ್ತು. ಕ್ಯಾಥರಿನ್ ಇವಳು ಸ್ಪೇನದ ರಾಜನೂ ಜರ್ಮನಿಯ ಬಾದಶಹನೂ ಆದ ೫ನೆಯ ಚಾರ್ಲಸನ* ಮಾತೃಭಗಿನಿಯಾಗಿದ್ದಳು. ಹೆನ್ರಿಗೆ ವಿವಾಹ ವಿಚ್ಛೇದವನ್ನು ಮಾಡಿಕೊಳ್ಳಲು ಅಪ್ಪಣೆಯನ್ನಿತ್ತರೆ ಚಾರ್ಲಸನಿಗೆ ಅಸಮಾಧಾನ ವಾಗುವುದು, ಅಪ್ಪಣೆಯನ್ನೀಯದಿದ್ದರೆ ಹೆನ್ರಿ ಅಸಂತುಷ್ಟನಾಗಿ ಅವನಿಂದ ತನಗೆ ಯಾವ ಬಗೆಯ ಸಾಹಾಯ್ಯವೂ ದೊರೆಯದು ಎಂದು ಪೋಪನಿಗೆ ಸಂಕಟವು. ಇದೇ ಸಮಯದಲ್ಲಿ ಚಾರ್ಲಸ ಬಾದಶಹನು ರೋಮ ನಗರಕ್ಕೆ ದಾಳಿಯಿಕ್ಕಿ ಅದನ್ನು ತನ್ನ ವಶದಲ್ಲಿ ತೆಗೆದುಕೊಂಡಿದ್ದನು. ಆದುದರಿಂದ ಚಾರ್ಲಸನ ವಿರುದ್ಧ ವಾಗಿ ಯಾವ ಮಾತನ್ನು ಮಾಡಲೂ ಪೋಪನಿಗೆ ಧೈರ್ಯವಿರಲಿಲ್ಲ. ಇಂತಹ ವಿಚಿತ್ರವಾದ ಪರಿಸ್ಥಿತಿಯಲ್ಲಿ ಹೇಗಾದರೂ ಮಾಡಿ ಪ್ರಸಂಗವನ್ನು ದಾಟಿಸಬೇ ಕೆಂದು ಪೋಪನು ನಿಶ್ಚಯಿಸಿ ಈ ಘಟಸ್ಫೋಟದ ಪ್ರಶ್ನೆಯ ವಿಚಾರಣೆಗೋಸುಗ **ಕಾಂಪೇಜಿಓ** ಎಂಬ ಇಟಾಲಿಯನ್ ಬಿಶಪನನ್ನೂ ಇಂಗ್ಲಂಡಿನಲ್ಲಿಯ ತನ್ನ ಲಿಗೇಟ ನಾದ **ವೂಲ್ಸೆಯನ್ನೂ** ತನ್ನ ಪ್ರತಿನಿಧಿಗಳಾಗಿ ಕೆಲಸಮಾಡಲು ನಿಯೋಜಿಸಿದನು. ಈ ಪ್ರಶ್ನೆಯನ್ನು ಆದಷ್ಟು ಬೇಗನೆ ನಿರ್ಣಯಿಸಲು ಹೆನ್ರಿ ಮತ್ತು ವೂಲ್ಸೆ ಇವರಿಬ್ಬರೂ ಪ್ರಯತ್ನಿಸಿದರು. ಆದರೆ ಪೋಪನ ಹೇಳಿಕೆಯಿಂದ ಕಾಂಪೇಜಿಓ ಇವನು ಉದ್ದೇಶಪೂರ್ವಕವಾಗಿ ಕಾಲಹರಣಮಾಡಲು ಯತ್ನಿಸಿದನು. ಇದರಿಂದ ಬೇಗನೆ ಯಾವ ನಿರ್ಣಯವೂ ಆಗಲಿಲ್ಲ. ಕೊನೆಗೆ ಪೋಪನು ಕಾಂಪೇಜಿಓ ಇವನನ್ನು ರೋಮಕ್ಕೆ ತಿರುಗಿ ಕರೆಯಿಸಿದನು, ಮತ್ತು ಆ ಪ್ರಶ್ನೆಯನ್ನು ತಾನೇ ವಿಚಾರಿಸಿ ನಿರ್ಣಯವನ್ನು ಕೊಡುವೆನೆಂದು ಸಾರಿ ಕಾಗದಪತ್ರಗಳನ್ನು ರೋಮಕ್ಕೆ ತರಲು ಹೆನ್ರಿಗೆ ಅಪ್ಪಣೆಮಾಡಿದನು (೧೫೨೮).

**ವೂಲ್ಸೆಯ ಅಧಃಪಾತವು** — ಪೋಪನು ಉದ್ದೇಶಪೂರ್ವಕವಾಗಿ ಈ ಪ್ರಕರಣದ ವಿಚಾರಣೆಯನ್ನು ಮುಂದೆ ದೂಡುತ್ತಿದ್ದನಾದುದರಿಂದ ಅಸಂತುಷ್ಟನಾದ ಹೆನ್ರಿ ವೂಲ್ಸೆಯ ಕೈಯೂ ಇದರಲ್ಲಿ ಇರಬಹುದೆಂಬ ಸಂಶಯದಿಂದ ಆತನನ್ನು ಚ್ಯಾನ್ಸೆಲರ ಪದದಿಂದ ದೂರಮಾಡಿದನು. ವೂಲ್ಸೆ ಹೆನ್ರಿಯ ಪ್ರೇಮವನ್ನು ಕಳೆದುಕೊಂಡುದನ್ನು ಕಂಡು ಜನರೂ ಅವನನ್ನು ತಿರಸ್ಕರಿಸಲಾರಂಭಿಸಿದರು. ಅವನ ಸೊಕ್ಕಿನ ವರ್ತನವು, ಅವನ ಐಶ್ವರ್ಯಪೂರ್ಣವಾದ ಜೀವನವು, ಅವನು ಜನರ ಮೇಲೆ ಹೇರಿದ ಅಸಹ್ಯವಾದ ಕರಗಳ ಭಾರವು ಮತ್ತು ಒತ್ತಾಯದ ಸಾಲದಿಂದ ಸಂಗ್ರಹಿಸಿದ ಹಲವು ಇವೇ ಮೊದಲಾದುವುಗಳಿಂದ ಅವನು ಎಲ್ಲರಿಗೂ

---

*೮೭ನೆಯ ಪುಟದಲ್ಲಿಯ ವಂಶವೃಕ್ಷವನ್ನು ನೋಡಿರಿ.

ಅಪ್ರಿಯನಾಗಿದ್ದನು. ಹೆನ್ರಿಯ ಅಪ್ರೀತಿ ಅಷ್ಟಕ್ಕೇ ನಿಲ್ಲಲಿಲ್ಲ. ವೂಲ್ಸೆ ತನ್ನ ಸಮ್ಮತಿಯಿಲ್ಲದೆ ಪೋಪನ ಲಿಗೇಟನಾದನೆಂದೂ, ಪೋಪನ ಕಟ್ಟಪ್ಪಣೆಗಳನ್ನು ಇಂಗ್ಲಂಡಿಗೆ ತಂದನೆಂದೂ, ತನ್ನ ವಿವಾಹವಿಚ್ಛೇದದ ನ್ಯಾಯವನ್ನು ಪೋಪನ ಕೋರ್ಟಿಗೆ ಒಯ್ದನೆಂದೂ ಆರೋಪಗಳನ್ನು ಹೆನ್ರಿ ಅವನ ಮೇಲೆ ಹೊರಿಸಿದನು. ೨ನೆಯ ರಿಚರ್ಡನ ಆಳ್ಕೆಯಲ್ಲಿ **ಸ್ಟ್ಯಾಚೂಟ ಆಫ್ ಪ್ರೀಮ್ಯುನರಿ** ಎಂಬ ಕಾಯ್ದೆಯಾಗಿತ್ತು. ಈ ಕಾಯ್ದೆಯಂತೆ ಮೇಲೆ ಹೇಳಿದ ಮಾತುಗಳನ್ನು ಮಾಡುವುದು ಅಪರಾಧವಾಗಿತ್ತು. ಈ ಕಾಯ್ದೆಯ ವಿರುದ್ಧವಾಗಿ ನಡೆದನೆಂಬ ಆರೋಪವನ್ನು ವೂಲ್ಸೆಯ ಮೇಲೆ ಹೊರಿಸಿ ಹೆನ್ರಿ ಅವನ ಎಲ್ಲ ಆಸ್ತಿಯನ್ನು ಜಪ್ತಮಾಡಿದನು. ಅನಂತರದಲ್ಲಿ ಒಂದು ವರ್ಷವಾದ ಬಳಿಕ ಇನ್ನೂ ಅವನ ಅಧಃಪಾತವನ್ನು ಮಾಡಬೇಕೆಂದು ನಿಶ್ಚಯಿಸಿ ಹೆನ್ರಿ ಅವನ ಮೇಲೆ ರಾಜದ್ರೋಹದ ಆರೋಪವನ್ನಿಟ್ಟು ಈ ಆರೋಪದ ವಿಚಾರಣೆಗೋಸುಗ ಲಂಡನಿಗೆ ಬರಬೇಕೆಂದು ಅವನಿಗೆ ಅಪ್ಪಣೆಮಾಡಿದನು. ಆದರೆ ವೂಲ್ಸೆ ಲಂಡನಿಗೆ ಬರುವಾಗ ಹಾದಿಯಲ್ಲಿಯೇ ಲೀಸ್ಟರ ಎಂಬಲ್ಲಿ ಮರಣಹೊಂದಿದನು (೧೫೩೦). ವೂಲ್ಸೆ ಮಹತ್ವಾಕಾಂಕ್ಷಿಯಾಗಿದ್ದನು. ತನ್ನ ಕೈಯಲ್ಲಿ ರಾಜ್ಯಕಾರಭಾರವಿದ್ದಾಗ ಅವನು ಬಲು ಸೊಕ್ಕಿನವನೂ ಕಠೋರವೃತ್ತಿಯವನೂ ಆಗಿದ್ದನಾದುದರಿಂದ ಜನರ ದ್ವೇಷಕ್ಕೆ ಅವನು ಗುರಿಯಾಗಿದ್ದನು. ಆದರೆ ಅವನು ತನ್ನ ಒಡೆಯನ ಸೇವೆಯನ್ನು ಏಕನಿಷ್ಠೆಯಿಂದ ಮಾಡಲು ಯಾವಾಗಲೂ ಹಿಂದೆಗೆಯಲಿಲ್ಲ*. ಆತನ ಮೇಲೆ ಹೆನ್ರಿ ರಾಜದ್ರೋಹದ ಆರೋಪವನ್ನು ಹೊರಿಸಿದುದು ಯೋಗ್ಯವಾಗಿರಲಿಲ್ಲ.

**ಹೆನ್ರಿಯ ಮಂತ್ರಿಗಳು ಮತ್ತು ಆತನಿಗೆ ಆಲೋಚನೆಹೇಳುವವರು—ಸರ ಥಾಮಸ್ ಮೋರ, ಥಾಮಸ್ ಕ್ರಾಮವೆಲ್** ಮತ್ತು **ಕ್ರನ್ಮರ**—ವೂಲ್ಸೆಯನ್ನು ಚ್ಯಾನ್ಸೆಲರ ಪದದಿಂದ ದೂರಮಾಡಿದ ಬಳಿಕ ಹೆನ್ರಿ **ಸರ ಥಾಮಸ್ ಮೋರ** (೧೪೭೮—೧೫೩೫) ಎಂಬ ವಿದ್ವಾಂಸನೂ ವಾಙ್ಮಯಭಕ್ತನೂ ಆದ ಗೃಹಸ್ಥನನ್ನು ತನ್ನ ಚ್ಯಾನ್ಸೆಲರನಾಗಿ ನಿಯೋಜಿಸಿದನು. ಅದರಂತೆ **ಥಾಮಸ್ ಕ್ರಾಮವೆಲ್** (೧೪೮೫—೧೫೪೦) ಎಂಬವನನ್ನು ತನ್ನ ಮಂತ್ರಿಯಾಗಿ ನಿಯೋಜಿಸಿದನು. ಕ್ರಾಮವೆಲನು ಕೀಳು ಕುಲದಲ್ಲಿ ಹುಟ್ಟಿ

---

* ಸಾಯುವ ಮೊದಲು ಥಾಮಸ್ ಕ್ರಾಮವೆಲನಿಗೆ ಬರೆದ ಪತ್ರದಲ್ಲಿ ವೂಲ್ಸೆ ಹೀಗೆಂದಿರುವನು, "ಕ್ರಾಮವೆಲನೆ, ರಾಜನ ಸೇವೆಯನ್ನು ನಾನು ಏಕನಿಷ್ಠೆಯಿಂದ ಮಾಡಿದೆನು. ಅದೇ ಬಗೆಯಾಗಿ ನಾನು ಈಶ್ವರನ ಸೇವೆಯನ್ನು ಮಾಡಿದ್ದರೆ ಮುಪ್ಪಿನಲ್ಲಿ ಆವನು ನನ್ನನ್ನು ಕಷ್ಟಕ್ಕೆ ಗುರಿಮಾಡುತ್ತಿರಲಿಲ್ಲ".

ದವನು. ಆದರೆ ಅವನು ತನ್ನ ಕುಶಾಗ್ರಬುದ್ಧಿಯ ಪ್ರಭಾವದಿಂದ ಮುಂದೆ ಬಂದನು. ಅವನು ವೂಲ್ಸೆಯ ಕಾರ್ಯದರ್ಶಿಯಾಗಿ ಕೆಲಸಮಾಡಿದ್ದನು. ಹೆನ್ರಿ ೧೫೩೩ರಲ್ಲಿ ಕ್ರನ್ಮರ್ ಎಂಬವನನ್ನು ಕ್ಯಾಂಟರಬರಿಯ ಆರ್ಚಬಿಶಪನಾಗಿ ಮಾಡಿದನು. ಕ್ರನ್ಮರನ ಒಲವು ಧರ್ಮಸುಧಾರಣೆಯ ಕಡೆಗಿದ್ದಿತು; ಆದರೆ ಅವನು ತನ್ನ ಧಾರ್ಮಿಕ ಮತಗಳನ್ನು ಗುಪ್ತವಾಗಿ ಇಟ್ಟುಕೊಂಡಿದ್ದನು. ವಿವಾಹವಿಚ್ಛೇದದ ವಿಷಯದಲ್ಲಿ ಪೋಪನಿಂದ ಅನುಕೂಲವಾದ ನಿರ್ಣಯವು ಬೇಗನೆ ದೊರೆವ ಸಂಭವವಿಲ್ಲದುದನ್ನು ಕಂಡು ಮುಂದೇನೆಂಬ ವಿಚಾರದಲ್ಲಿ ಹೆನ್ರಿ ಇರುವಾಗ ಕ್ರನ್ಮರನು ಅವನಿಗೆ ಇಂತು ಹೇಳಿದನು. "ವಿಧವೆಯಾದ ಅತ್ತಿಗೆಯನ್ನು ಲಗ್ನವಾಗಲು ಕ್ರೈಸ್ತಧರ್ಮದಲ್ಲಿ ಪ್ರತಿಬಂಧವಿದ್ದುದರಿಂದ ಅಂತಹ ಲಗ್ನಕ್ಕೆ ಸಮ್ಮತಿಯನ್ನು ಕೊಡಲು ಪೋಪನಿಗೆ ಅಧಿಕಾರವಿರಲಿಲ್ಲ. ಆದ್ದುದರಿಂದ ಕ್ಯಾಥರಿನ್ ಇವಳೊಡನೆ ಆದ ಲಗ್ನವು ಶಾಸ್ತ್ರವಿರುದ್ಧವಾದುದು." ಕ್ರನ್ಮರನ ಈ ಆಲೋಚನೆ ಹೆನ್ರಿಗೆ ಸರಿದೋರಿತು. ಆತನ ಸೂಚನೆಯಂತೆ ಅವನು ಈ ಪ್ರಶ್ನದ ವಿಷಯದಲ್ಲಿ ಯುರೋಪದಲ್ಲಿಯ ಬೇರೆ ಬೇರೆ ವಿಶ್ವವಿದ್ಯಾಲಯಗಳಿಂದ ಅಭಿಪ್ರಾಯಗಳನ್ನು ತರಿಸಿದನು. ಅನೇಕ ವಿಶ್ವವಿದ್ಯಾಲಯಗಳು, "ಈ ಲಗ್ನವು ಶಾಸ್ತ್ರಸಮ್ಮತವಲ್ಲ"ವೆಂದು ಅಭಿಪ್ರಾಯವಿತ್ತುವು. ಹೆನ್ರಿಗೆ ಅದು ಬೇಕಾದ ಮಾತು. ಮುಂದಿನ ಕೆಲಸವನ್ನು ಕೈಕೊಳ್ಳಲು ಅವನು ನಿಶ್ಚಯಿಸಿದನು.

ಇದಾದ ಬಳಿಕ ಹೆನ್ರಿ ಇಂಗ್ಲಂಡಿನಲ್ಲಿಯ ಧರ್ಮಾಧಿಕಾರಿಗಳ ಶಾಸ್ತ್ರವಿರುದ್ಧವಾದ ವರ್ತನವನ್ನು ಟೀಕಿಸಲು ಆರಂಭಿಸಿದನು. ತನ್ನ ಈ ಕೃತಿಗೆ ಜನತೆಯಿಂದ ಸಹಾನುಭೂತಿ ದೊರೆಯಬಹುದೆಂದು ಅವನಿಗೆ ಎನಿಸಿತು. ವೂಲ್ಸೆ ಪೋಪನ ಲಿಗೇಟನಹುದೆಂದು ಒಪ್ಪಿದ ಬಿಶಪರಿಗೆ ಹೆನ್ರಿ, 'ನೀವು ಪ್ರೇಮ್ಯುನರಿಯ ಕಾಯ್ದೆಯನ್ನು ಮುರಿದು ಶಿಕ್ಷೆಗೆ ಪಾತ್ರರಾಗಿರುವಿರೆ'ಂದು ಹೇಳಿ ಅವರಿಂದ ದಂಡವೆಂದು ಬಹಳವಾಗಿ ಹಣವನ್ನು ಸೆಳೆದು ಅವರನ್ನು ಮುಕ್ತಗೊಳಿಸಿದನು. ವಿವಾಹವಿಚ್ಛೇದದ ವಿಷಯದಲ್ಲಿ ಪೋಪನು ತನಗೆ ಅನುಕೂಲ ನಿರ್ಣಯವನ್ನು ಕೊಡಬೇಕೆಂದು ಪಾರ್ಲಿಮೆಂಟಿನಲ್ಲಿ ಈ ಕೆಳಗಿನ ಕಾಯ್ದೆಗಳನ್ನು ಮಾಡಿಸಿಕೊಂಡನು (೧೫೩೨).

(೧) ಇಂಗ್ಲಂಡಿನಲ್ಲಿ ಧರ್ಮಾಧಿಕಾರಿಯಾಗಿ ಯಾವನಾದರೂ ಹೊಸಬನು ನಿಯೋಜಿಸಲ್ಪಟ್ಟರೆ ಪೋಪನಿಗೆ ಕಳಿಸಬೇಕಾಗುತ್ತಿದ್ದ ಅಲ್ಲಿಯ ಮೊದಲನೆಯ ವರ್ಷದ ಉತ್ಪನ್ನವು ಇನ್ನು ಮುಂದೆ ಕಳಿಸಲ್ಪಡಬಾರದು.

(೨) ಧಾರ್ಮಿಕ ವಿಷಯದಲ್ಲಿ ಇಂಗ್ಲಂಡಿನ ನ್ಯಾಯಾಸನವು ಕೊಟ್ಟ ನಿರ್ಣಯದ ವಿರುದ್ಧವಾಗಿ ಪೋಪನ ಕಡೆಗೆ ಅಪೀಲು ಕಳಿಸಲ್ಪಡಬಾರದು.

**ಕ್ಯಾಥರಿನನೊಡನೆ ವಿವಾಹವಿಚ್ಛೇದವು (೧೫೩೩)** — ಮೇಲಿನ ಕಾಯ್ದೆಗಳು ಪಾರ್ಲಿಮೆಂಟಿನಲ್ಲಿ ಆದರೂ ಪೋಪನು ತನಗೆ ಅನುಕೂಲವಾದ ನಿರ್ಣಯವನ್ನು ಕೊಡಲು ಇನ್ನೂ ಮನಸ್ಸುಮಾಡನೆಂದು ಹೆನ್ರಿಗೆ ಕೋಪವು ಬಂದಿತು. ವಿವಾಹವಿಚ್ಛೇದದ ನಿರ್ಣಯದ ಕೆಲಸವನ್ನು ಪೋಪನ ಕಡೆಗೆ ಬಿಡದೆ ಇಂಗ್ಲಂಡಿನಲ್ಲಿಯ ಧರ್ಮವಿಷಯಕ ನ್ಯಾಯಾಸನಕ್ಕೆ ಒಪ್ಪಿಸಬೇಕೆಂದು ಅವನು ನಿಶ್ಚಯಿಸಿದನು. ಆದರೆ ಕ್ಯಾಥರಿನ್ ಇವಳು ಈ ನ್ಯಾಯಾಸನದ ಮುಂದೆ ಸಾಕ್ಷಿಯನ್ನು ಹೇಳಲು ಒಪ್ಪದೆ ಪೋಪನ ಕಡೆಗೆ ಒಂದು ಅರ್ಜಿಯನ್ನು ಕಳುಹಿದಳು. ಆದರೆ ಕ್ರೆನ್ಮರನು ಈ ಪ್ರಕರಣವನ್ನು ಧರ್ಮವಿಷಯಕ ನ್ಯಾಯಾಸನದ ಮುಂದೆ ನಡೆಯಿಸಿ ಹೆನ್ರಿ ಮತ್ತು ಕ್ಯಾಥರಿನ ಇವರ ಲಗ್ನವು ಅಶಾಸ್ತ್ರವೂ ಈಶ್ವರನಿಗೆ ಮಾನ್ಯವಿಲ್ಲದುದೂ ಆಗಿರುವುದರಿಂದ ಹೆನ್ರಿಗೆ ಎರಡನೆಯ ಲಗ್ನವನ್ನು ಮಾಡಿಕೊಳ್ಳಲು ಯಾವ ಆತಂಕವೂ ಇಲ್ಲವೆಂದು ನಿರ್ಣಯವಿತ್ತನು. ಕ್ರೆನ್ಮರನಿಂದ ಈ ನಿರ್ಣಯವು ದೊರೆತೊಡನೆ ಹೆನ್ರಿ ಕ್ಯಾಥರಿನನೊಡನೆ ಘಟಸ್ಫೋಟವನ್ನು ಮಾಡಿ **ಅನ್ ಬುಲೀನ** ಇವಳನ್ನು ಮದುವೆಯಾಗಿ ಅವಳು ರಾಣಿಯೆಂದು ಸಾರಿದನು (೧೫೩೩). ಹೆನ್ರಿಯ ಈ ಕೃತಿಯನ್ನು ಕಂಡು ಪೋಪನಿಗೆ ಸ್ವಾಭಾವಿಕವಾಗಿ ಕೋಪವು ಬಂದಿತು. ಆತನು ಅನ್ ಬುಲೀನ ಮತ್ತು ಹೆನ್ರಿ ಇವರ ಲಗ್ನವು ಕಾಯ್ದೆಯ ವಿರುದ್ಧವಿರುವುದೆಂದು ಸಾರಿದನು. ಮುಂದೆ ಕೆಲವು ತಿಂಗಳುಗಳು ಕಳೆದ ಬಳಿಕ ಅನ್ ಬುಲೀನ ಇವಳಿಗೆ **ಎಲಿಝಾಬೆಥ್** ಎಂಬ ಮಗಳಾದಳು. ಹೆನ್ರಿ ಪೋಪನ ಆಜ್ಞೆಯನ್ನು ಮನ್ನಿಸದೆ **ಎಲಿಝಾಬೆಥ್** ಇವಳೇ ತನ್ನ ಯೋಗ್ಯವಾರಸದಾರಳೆಂದು ಪ್ರಕಟಗೊಳಿಸಿದನು.

**ಅಕ್ಟ ಆಫ್ ಸುಪ್ರಿಮಸಿ (೧೫೩೪)**—ಆ ಬಳಿಕ ಇಂಗ್ಲಂಡಿನಲ್ಲಿಯ ಪೋಪನ ಧಾರ್ಮಿಕ ಸತ್ತೆಯನ್ನು ಸಂಪೂರ್ಣವಾಗಿ ಇಲ್ಲದಾಗಿ ಮಾಡಲು ಕ್ರಾಮ್‌ವೆಲನ ಸೂಚನೆಯನ್ನು ಅನುಸರಿಸಿ ಹೆನ್ರಿ **"ಅಕ್ಟ ಆಫ್ ಸುಪ್ರಿಮಸಿ"** (Act of Supremacy ಶ್ರೇಷ್ಠತ್ವದ ಕಾಯ್ದೆ) ಎಂಬ ಕಾಯ್ದೆಯನ್ನು ಪಾರ್ಲಿಮೆಂಟಿನಲ್ಲಿ ಮಾಡಿಸಿಕೊಂಡನು (೧೫೩೪). ಈ ಕಾಯ್ದೆಯಿಂದ ಧಾರ್ಮಿಕ ವಿಷಯಗಳಲ್ಲಿಯೂ ಇಂಗ್ಲಂಡಿನ ರಾಜನು ಇಂಗ್ಲಂಡಿನಲ್ಲಿಯ ಮುಖ್ಯ ಅಧಿಕಾರಿಯಾದನು. ಆದರೆ ಹೆನ್ರಿಯ ಚ್ಯಾನ್ಸೆಲರನಾದ ಸರ್ ಥಾಮಸ್ ಮೋರನಿಗೆ ಹೆನ್ರಿಯ ಧಾರ್ಮಿಕ ಶ್ರೇಷ್ಠತ್ವವು ಮಾನ್ಯವಿರಲಿಲ್ಲ. ಮೇಲಿನ ಕಾಯ್ದೆಯಂತೆ ರಾಷ್ಟ್ರದಲ್ಲಿಯ ಎಲ್ಲ ಅಧಿಕಾರಿಗಳು ಹೆನ್ರಿಯ ಧಾರ್ಮಿಕ ಶ್ರೇಷ್ಠತ್ವವು ತಮಗೆ ಮಾನ್ಯವಿರುವುದೆಂದು ಶಪಥವನ್ನು ಮಾಡಬೇಕಾಗುತ್ತಿತ್ತು. ಆದರೆ

ಸರ್ ಥಾಮಸ್ ಮೋರನು ಈ ಶಪಥವನ್ನು ಮಾಡಲು ಒಪ್ಪಲಿಲ್ಲವಾದುದರಿಂದ ಹೆನ್ರಿ ಅವನನ್ನು ಶೂಲಕ್ಕೇರಿಸಿದನು (೧೫೩೫). ಅಕ್ಟ್ ಆಫ್ ಸುಪ್ರಿಮಸಿ ಕಾಯ್ದೆಯಿಂದ ಹೆನ್ರಿ ತನ್ನ ಧಾರ್ಮಿಕ ಸತ್ತೆಯನ್ನು ತೆಗೆದೊಗೆದುದನ್ನು ಕಂಡು ಹೊಸದಾಗಿ ಪೋಪನ ಪಟ್ಟಕ್ಕೆ ಬಂದ ೩ನೆಯ ಪಾಲ್ ಎಂಬ ಪೋಪನು ಹೆನ್ರಿಯನ್ನು ಧರ್ಮಬಹಿಷ್ಕೃತನಾಗಿ ಮಾಡಿ ಅವನು ಇಂಗ್ಲಂಡಿನ ಪಟ್ಟದಿಂದ ತಳ್ಳಲ್ಪಟ್ಟಿರುವನೆಂದು ಪ್ರಕಟಗೊಳಿಸಿದನು.

**ಇಂಗ್ಲಂಡಿನಲ್ಲಿಯ ಧಾರ್ಮಿಕ ಪಂಥಗಳೂ ಆ ವಿಷಯದಲ್ಲಿ ಹೆನ್ರಿಯ ನೀತಿಯೂ**— ಈ ಕಾಲದಲ್ಲಿ ಯುರೋಪ ಖಂಡದಲ್ಲೆಲ್ಲ ಧಾರ್ಮಿಕ ವಿಷಯದಲ್ಲಿ **ಪ್ರಾಟಿಸ್ಟಂಟ** ಮತ್ತು **ರೋಮನ್ ಕ್ಯಾಥೊಲಿಕ** ಎಂಬ ಎರಡು ಪಂಥಗಳಲ್ಲದೆ ಅವುಗಳಲ್ಲಿಯೂ ಉಪಪಂಥಗಳು ಆಗಿದ್ದುವು. ಇಂಗ್ಲಂಡಿನಲ್ಲಿಯೂ ಈ ಧಾರ್ಮಿಕ ಆಂದೋಲನದ ಪರಿಣಾಮವಾಗಿ ಬೇರೆ ಬೇರೆ ಪಂಥಗಳು ಹುಟ್ಟಿದುವು:—

(೧) **ರೋಮನ್ ಕ್ಯಾಥೊಲಿಕ್** ಅಥವಾ **ಪೇಸಿಸ್ಟ ಪಂಥವು**— ಪೋಪನೇ ಕ್ರೈಸ್ತಧರ್ಮದ ಮುಖ್ಯ ಅಧಿಕಾರಿಯಾಗಿರುವನು. ಆದುದರಿಂದ ಪುನಃ ಇಂಗ್ಲಂಡಿನಲ್ಲಿ ಅವನ ಸತ್ತೆ ಸ್ಥಾಪನವಾಗಬೇಕು ಎಂದು ಈ ಪಕ್ಷದವರಿಗೆ ಎನಿಸುತ್ತಿತ್ತು.

ಇಂಗ್ಲಂಡಿನಲ್ಲಿಯ ಧರ್ಮಮಠಗಳಲ್ಲಿ ಇರುತ್ತಿದ್ದ ಸಾಧುಸಾಧ್ವಿಯರು ಮತ್ತು ಭಿಕ್ಷುಗಳು ಪೂರ್ವಪರಂಪರೆ ಅಚ್ಚಳಿಯದೆ ಉಳಿಯಬೇಕೆಂದು ಅಭಿಪ್ರಾಯವುಳ್ಳವರಿದ್ದುದರಿಂದ ಪೋಪನ ಧಾರ್ಮಿಕ ವರ್ಚಸ್ಸನ್ನು ಒಪ್ಪಿಕೊಳ್ಳುವುದು ವಿಹಿತವೆಂದು ಅವರಿಗೆ ತೋರಿತು. ಆದುದರಿಂದ ಅವರ ಮತ್ತು ಇನ್ನುಳಿದ ಕೆಲವು ಧರ್ಮಾಧಿಕಾರಿಗಳ ಒಲವು ರೋಮನ್ ಕ್ಯಾಥೊಲಿಕ್ ಪಂಥದ ಕಡೆಗೆ ಇದ್ದಿತು.

(೨) **ಜೇಸುಯಿಟ್ ಪಂಥವು**— ಪೋಪನ ಧಾರ್ಮಿಕ ಸತ್ತೆಯನ್ನು ಮಾನ್ಯಮಾಡಿ ಕ್ರೈಸ್ತಧರ್ಮದಲ್ಲಿ ಅಂತಃಸುಧಾರಣೆಯನ್ನು ಮಾಡಲು, ಜನರಲ್ಲಿ ಶಿಕ್ಷಣದ ಪ್ರಸಾರವನ್ನು ಮಾಡಲು ಮತ್ತು ಕ್ರೈಸ್ತಧರ್ಮಗಳಲ್ಲದ ರಾಷ್ಟ್ರಗಳಲ್ಲಿ ಕ್ರೈಸ್ತಧರ್ಮದ ಪ್ರಸಾರವನ್ನು ಮಾಡಲು **ಇಗ್ನೇಶಸ್ ಲಾಯೋಲಾ** ಎಂಬ ಸ್ಪಾನ್ಯಿಶ್ ಗೃಹಸ್ಥನೊಬ್ಬನು ೧೫೨೧ರಲ್ಲಿ ರೋಮನ್ ಕ್ಯಾಥೊಲಿಕ ಪಂಥದಲ್ಲಿಯೇ ಒಂದು ಉಪಪಂಥವನ್ನು ಮಾಡಿಕೊಂಡಿದ್ದನು. ಈ ಪಂಥಕ್ಕೆ **ಜೆಸುಯಿಟ್** ಪಂಥವೆಂಬ ಹೆಸರು. ಇಂಗ್ಲಂಡಿನಲ್ಲಿಯೂ ಈ ಪಂಥದ ಅನುಯಾಯಿಗಳು ಕೆಲವರಿದ್ದರು.

(೩) **ಅಂಗ್ಲಿಕನ್ ಪಂಥವು**—ಧಾರ್ಮಿಕ ವಿಷಯದಲ್ಲಿ ಇಂಗ್ಲಂಡಿನ ರಾಷ್ಟ್ರೀಯತ್ವವನ್ನು ಬಿಡದೆ ಪೂರ್ವಪರಂಪರೆಯನ್ನು ಹೊಂದಿಕೊಂಡಿರುವ ಪಂಥ ವಿದು. ಈ ಪಂಥಕ್ಕೆ **ಅಂಗ್ಲಿಕನ್** (ಇಂಗ್ಲಂಡಿನ) ಪಂಥವೆಂದು ಹೆಸರು. ಈ ಪಂಥದ ಜನರಿಗೆ ಹೆನ್ರಿಯ ಧಾರ್ಮಿಕ ಶ್ರೇಷ್ಠತ್ವವು ಮಾನ್ಯವಿದ್ದಿತು. ಆದರೆ ಪೂರ್ವಪರಂಪರೆಯನ್ನೂ ಧಾರ್ಮಿಕ ಆಚಾರವಿಚಾರವನ್ನೂ ಕೆಲಮಟ್ಟಿಗೆ ಬದಲಿಸಿ ಧರ್ಮಸುಧಾರಣೆಯನ್ನು ಮಾಡಬೇಕೆಂದು ಈ ಪಂಥದ ಅಭಿಪ್ರಾಯವು.

(೪) **ಎಪಿಸ್ಕೊಪೇಲಿಯನ್ ಪಂಥವು**—ಈ ಪಂಥದವರಿಗೆ ಪೋಪನ ಧಾರ್ಮಿಕ ಶ್ರೇಷ್ಠತ್ವವು ಮಾನ್ಯವಿರಲಿಲ್ಲ. ಆದರೆ ಧಾರ್ಮಿಕ ವಿಷಯಗಳಲ್ಲಿ ಕೆಲವು ಆವಶ್ಯಕ ಸುಧಾರಣೆಗಳು ಆಗಬೇಕು, ಬಿಶಪರ ಮತ್ತು ಧರ್ಮಾಧಿಕಾರಿ ಗಳ ಮಧ್ಯಸ್ತಿಕೆಯಿಂದೇ ಧಾರ್ಮಿಕ ವಿಧಿಗಳು ಮತ್ತು ಪ್ರಾರ್ಥನೆ ನಡೆಯಬೇಕು, ಬೈಬಲಿನ ಇಂಗ್ಲಿಶ ಭಾಷಾಂತರವಿರಬೇಕು ಮತ್ತು ಚರ್ಚಿನಲ್ಲಿಯ ಪ್ರಾರ್ಥನೆ ಇಂಗ್ಲಿಶ ಭಾಷೆಯಲ್ಲಿ ನಡೆಯಬೇಕು ಎಂದು ಈ ಪಂಥದವರಿಗೆ ಎನಿಸುತ್ತಿತ್ತು. ಈ ಪಂಥಕ್ಕೆ **ಎಪಿಸ್ಕೊಪೇಲಿಯನ್ ಪಂಥ** (Episcopalian ಬಿಶಪರ ವರ್ಚಸ್ಸಿದ್ದ ಪಂಥವು) ಎಂದು ಹೆಸರು. ಇದು ಮಂದಗಾಮಿಗಳ ಪಂಥವು.

(೫) **ಪ್ಯುರಿಟನ್ ಪಂಥವು**—ಸ್ವಿಝರ್ಲಂಡಿನಲ್ಲಿಯ ಕೆಲ್ವಿನ್ ಎಂಬವನ ಮತಗಳ ಮತ್ತು ತತ್ವಗಳ ಪರಿಣಾಮವು ಬಹು ಜನರ ಮೇಲೆ ಆಗಿದ್ದಿತು. ಅವರಲ್ಲಿ ಅನೇಕರು ಕಲ್ವಿನನ ಅನುಯಾಯಿಗಳಾಗಿದ್ದರು. ಈ ಪಂಥದವರಿಗೆ ಹಳೆಯ ಆಚಾರವಿಚಾರಗಳು ಬೇಕಾಗಿರಲಿಲ್ಲ. ಹೊಸ ಸುಧಾರಣೆಗಳನ್ನು ಮಾಡು ವುದು ಇವರಿಗೆ ಇಷ್ಟವಿದ್ದಿತು. ಚರ್ಚುಗಳಲ್ಲಿ ಚಿತ್ರಗಳನ್ನೂ ಭಾವಚಿತ್ರಗಳನ್ನೂ ಇಡು ವುದು ಸರಿಯಲ್ಲವೆಂದು ಇವರ ಅಭಿಪ್ರಾಯವು. ಚರ್ಚುಗಳಲ್ಲಿಯ ಪ್ರಾರ್ಥನೆ ಗಳು ಬಿಶಪ್ ಮತ್ತು ಇತರ ಧರ್ಮಾಧಿಕಾರಿಗಳ ಮಧ್ಯಸ್ತಿಕೆಯಿಂದ ನಡೆವುದು ಇವರಿಗೆ ಸ್ವಲ್ಪವೂ ಮಾನ್ಯವಿರಲಿಲ್ಲ. ಈ ಪಂಥದವರಿಗೆ ಧರ್ಮದ ಶುದ್ಧವೂ ಸಾತ್ವಿಕವೂ ಆದ ಸ್ವರೂಪವು ಬೇಕಾಗಿದ್ದಿತು. ಆದುದರಿಂದ ಈ ಪಂಥಕ್ಕೆ ಪ್ಯುರಿಟನ್ (Puritan—ಪವಿತ್ರ ಆಚರಣದ) ಪಂಥವೆಂದು ಹೆಸರು ಬಂದಿತು. ಇದು ಶೀಘ್ರಗಾಮಿಗಳ ಪಂಥವು.

ಇಂಗ್ಲಂಡಿನಲ್ಲಿ ಮೇಲಿನ ಐದೂ ಧಾರ್ಮಿಕ ಪಂಥಗಳ ಅನುಯಾಯಿಗಳಿದ್ದರು. ಅವರಿಗೆ ತಮ್ಮ ಪಂಥದಂತೆಯೇ ಎಲ್ಲ ವ್ಯವಸ್ಥೆಯಾಗಬೇಕೆಂದು ಎನಿಸುತ್ತಿತ್ತು. ಹೆನ್ರಿ ಈ ಪಂಥಗಳಲ್ಲಿ ಯಾವ ಪಂಥವನ್ನೂ ತನ್ನದಾಗಿ ಮಾಡಿಕೊಳ್ಳದೆ ಧಾರ್ಮಿಕ ವಿಷಯದಲ್ಲಿ ಎಲ್ಲರಿಗೂ ಮಾನ್ಯವಾಗುವಂತಹ ನೀತಿಯನ್ನು ಸ್ವೀಕರಿಸಲು ನಿಶ್ಚ

ಯಿಸಿದನು. ಆದರೆ ಅವನ ಮುಖ್ಯ ಮಂತ್ರಿಯಾಡ ಕ್ರಾಮ್‌ವೆಲ್ ಮತ್ತು ಕ್ಯಾಂಟರ್‌ಬರಿಯ ಆರ್ಚ ಬಿಶಪನಾದ ಕ್ರನ್‌ಮರ ಇವರ ಒಲವು ಎಪಿಸ್ಕೊಪೇಲಿಯನ್ ಪಂಥದ ಕಡೆಗೆ ಇದ್ದಿತು. ಆದರೆ ಈ ಪಂಥದಂತೆ ಧರ್ಮಸುಧಾರಣೆಯನ್ನು ಮಾಡಬೇಕೆಂದು ಹೆನ್ರಿಗೆ ಸೂಚಿಸುವ ಧೈರ್ಯವು ಮಾತ್ರ ಅವರಿಗಿರಲಿಲ್ಲ. ಪೋಪನ ಧಾರ್ಮಿಕ ಸತ್ತೆಗೆ ಬೆಂಬಲವನ್ನೀವ ಸಾಧುಸಾಧ್ವಿಗಳ ಮತ್ತು ಭಿಕ್ಷುಕರ ಮಹತ್ವವನ್ನೂ ವರ್ಚಸ್ಸನ್ನೂ ಕಡಮೆ ಮಾಡಲು ಧರ್ಮಮಠಗಳನ್ನು ಜಪ್ತಮಾಡಬೇಕೆಂದು ಕ್ರಾಮ್‌ವೆಲನು ಹೆನ್ರಿಗೆ ಸೂಚಿಸಿದನು. ಈ ಧರ್ಮಮಠಗಳ ವಶದಲ್ಲಿ ಫಲವತ್ತಾದ ಭೂಮಿಗಳೂ ಭವ್ಯವಾದ ಕಟ್ಟಡಗಳೂ ಇದ್ದುವು. ಆದುದರಿಂದ ಈ ಧರ್ಮಮಠಗಳನ್ನು ಮುರಿದು ಅವುಗಳ ವಶದಲ್ಲಿದ್ದ ಭೂಮಿ ಮೊದಲಾದುವನ್ನು ಜಪ್ತಮಾಡಿದರೆ ತನಗೆ ಹೇರಳವಾಗಿ ಸಂಪತ್ತು ದೊರೆಯಬಹುದು ಮತ್ತು ಪೋಪನ ಸತ್ತೆಗೆ ಮಾನ್ಯತೆಯನ್ನೀವ ಜನರ ಮಹತ್ವವು ಕಡಮೆಯಾಗಬಹುದು ಎಂದು ಬಗೆದು ಹೆನ್ರಿ ಈ ಧರ್ಮಮಠಗಳನ್ನು ಮುರಿಯಲು ನಿಶ್ಚಯಿಸಿದನು.

### ಧರ್ಮಮಠಗಳು ಮುರಿಯಲ್ಪಟ್ಟುವು (೧೫೩೬—೧೫೩೯)

ಹೆನ್ರಿಯ ಕಾಲದಲ್ಲಿ ಇಂಗ್ಲಂಡಿನಲ್ಲಿ ಸುಮಾರು ೬೦೦ ಧರ್ಮಮಠಗಳಿದ್ದುವು. ಈ ಧರ್ಮಮಠಗಳಿಗೆ ಧಾರ್ಮಿಕರೂ ಭಾವಿಕರೂ ಆಗಾಗ ಕಾಣ್ಕೆಗಳನ್ನು ಕೊಡುತ್ತಿದ್ದರು. ಆದುದರಿಂದ ಅವು ಬಹು ವೈಭವಸಂಪನ್ನವಾಗಿದ್ದುವು. ಮಧ್ಯ ಯುಗದಲ್ಲಿ ಈ ಧರ್ಮಮಠಗಳು ಜನರಲ್ಲಿ ಧಾರ್ಮಿಕ ವೃತ್ತಿಯನ್ನು ಜಾಗೃತವಾಗಿಡುವದು, ಅನಾಥರಿಗೂ ಪಂಗುಗಳಿಗೂ ಅನ್ನವಸ್ತ್ರವನ್ನು ಮತ್ತು ಆಶ್ರಯವನ್ನು ಕೊಡುವುದು, ಬೇನೆಯವರಿಗೆ ಔಷಧೋಪಚಾರವನ್ನು ಮಾಡುವುದು, ಮತ್ತು ಸಾಮಾನ್ಯಜನರಿಗೆ ಶಿಕ್ಷಣವನ್ನು ಕೊಡುವುದು ಇವೇ ಮೊದಲಾದ ಕೆಲಸಗಳನ್ನು ಮಾಡುತ್ತಿದ್ದುವು. ಪೂರ್ವಕಾಲದಲ್ಲಿ ಈ ಮಠಗಳಲ್ಲಿ ವಾಸಿಸುತ್ತಿದ್ದ ಸಾಧು ಸಾಧ್ವಿಗಳ ಆಚರಣವು ಉಚ್ಚವಾಗಿದ್ದಿತು. 'ಸರಲ ವರ್ತನವೂ ಉಚ್ಚ ವಿಚಾರವೂ ಅವರ ಧ್ಯೇಯವಾಗಿದ್ದಿತು. ಆದರೆ ಮುಂದೆ ಮುಂದೆ ಅವರ ಆಚರಣವು ಕೆಟ್ಟಿತು. ವಿಲಾಸದಲ್ಲಿ ಅವರು ಕಾಲಕಳೆಯ ತೊಡಗಿದರು. ಕ್ರಮೇಣ ಜನರಲ್ಲಿ ಜ್ಞಾನದ ಮತ್ತು ವಿದ್ಯೆಯ ಪ್ರಸಾರವಾದುದರಿಂದ ಈ ಸಾಧು ಸಾಧ್ವಿಗಳ ದುರಾಚರಣವನ್ನು ಕಂಡು ಜನರು ಮೊದಲಿನಂತೆ

ಅವರ ವಿಷಯದಲ್ಲಿ ಆದರವನ್ನು ತಳೆಯಲಿಲ್ಲ. ಈ ಸ್ಥಿತಿಯನ್ನು ಕಂಡು ಹೆನ್ರಿ ಈ ಧರ್ಮಮಠಗಳ ಪರಿಸ್ಥಿತಿ ಹೇಗಿರುವುದೆಂಬುದನ್ನು ಪರೀಕ್ಷಿಸಲು ಒಂದು ಮಂಡಳವನ್ನು ಏರ್ಪಡಿಸಿದನು. ಈ ಮಂಡಳದವರು ಧರ್ಮಮಠಗಳ ವಿಷಯದಲ್ಲಿ ಪ್ರತಿಕೂಲವಾದ ಅಭಿಪ್ರಾಯವನ್ನಿತ್ತುದರಿಂದ ಅವನ್ನು ಮುರಿಯಲು ಹೆನ್ರಿ ಪಾರ್ಲಿಮೆಂಟಿನಲ್ಲಿ ಒಂದು ಕಾಯ್ದೆಯನ್ನು ಮಾಡಿಕೊಂಡನು (೧೫೩೬). ಈ ಕಾಯ್ದೆ ಪಾಸಾದ ಬಳಿಕ ಧರ್ಮಮಠಗಳಲ್ಲಿ ದೊಡ್ಡವೂ ಸಣ್ಣವೂ ಎಂದು ಎರಡು ಭಾಗಗಳನ್ನು ಮಾಡಿ ಸಣ್ಣ ಮಠಗಳನ್ನು ಮೊದಲು ಮುರಿದನು (೧೫೩೬). ಅಲ್ಲಿ ಇದ್ದ ಸಾಧು ಸಾಧ್ವಿಗಳಲ್ಲಿ ಕೆಲವರಿಗೆ ಪೆನ್ಶನ್ ಕೊಟ್ಟು ಅಲ್ಲಿಯ ಸಂಪತ್ತನ್ನು ಜಪ್ತಮಾಡಿದನು. ಈ ಧರ್ಮಮಠಗಳು ಮುರಿಯಲ್ಪಟ್ಟದರಿಂದ ಜೀವನಕ್ಕೋಸುಗ ಅವುಗಳನ್ನು ಅವಲಂಬಿಸಿದ ಅನೇಕ ಜನರಲ್ಲಿ ಅಸಂತೋಷವು ಹುಟ್ಟಿತು. ಅವರು ಬಂಡನ್ನು ಮಾಡಿದರು. ಆದರೆ ಹೆನ್ರಿ ಉಗ್ರವಾದ ಉಪಾಯಗಳನ್ನು ಯೋಚಿಸಿ ಆ ಬಂಡನ್ನು ಮುರಿದನು (೧೫೩೭). ಆ ಬಳಿಕ ಹೆನ್ರಿ ದೊಡ್ಡ ಮಠಗಳನ್ನು ಮುರಿದನು (೧೫೩೯). ಈ ಎಲ್ಲ ಧರ್ಮಮಠಗಳಲ್ಲಿಯ ಸಂಪತ್ತು ಹೆನ್ರಿಯ ವಶದಲ್ಲಿ ಬಂದಿತು. ಜನರಲ್ಲಿ ಅಸಂತೋಷವು ಬೆಳೆಯಬಾರದೆಂದು ಆ ಸಂಪತ್ತಿನ ಕೆಲವು ಭಾಗವನ್ನು ಉಪಯುಕ್ತವಾದ ಸಾರ್ವಜನಿಕ ಕಾರ್ಯಗಳಿಗೋಸುಗ ಅವನು ವೆಚ್ಚಮಾಡಿದನು. ಅನೇಕ ಹೊಸ ಪ್ರಾರ್ಥನಾ ಮಂದಿರಗಳನ್ನೂ (Church) ಔಷಧಾಲಯಗಳನ್ನೂ ಶಾಲೆಗಳನ್ನೂ ಅವನು ಸ್ಥಾಪಿಸಿದನು. ಇಂಗ್ಲಂಡಿನಲ್ಲಿ ಪ್ರಮುಖವಾದ ಬಂದರಗಳನ್ನು ಭದ್ರಗೊಳಿಸಲು, ಹೊಸ ಯುದ್ಧದ ಹಡಗಗಳನ್ನು ಕಟ್ಟಿಸಲು ಎಷ್ಟೋ ಹಣವನ್ನು ಅವನು ವೆಚ್ಚಮಾಡಿದನು. ಇದಲ್ಲದೆ ಅವನು ತನ್ನ ಪ್ರೇಮಕ್ಕೆ ಪಾತ್ರರಾದ ಮನ್ನೆಯರಿಗೂ ಸರದಾರರಿಗೂ ಜಪ್ತಮಾಡಲ್ಪಟ್ಟ ಭೂಮಿಗಳಲ್ಲಿ ಕೆಲವನ್ನು ಸ್ವಲ್ಪ ಬೆಲೆಗೆ ಕೊಟ್ಟು ಹಣವನ್ನು ಕೂಡಿಸಿದನು.

**ಧರ್ಮಮಠಗಳು ಮುರಿಯಲ್ಪಟ್ಟುದರಿಂದ ಆದ ಬಂಡು(೧೫೩೭)**-- ಧರ್ಮಮಠಗಳು ಮುರಿಯಲ್ಪಟ್ಟದರಿಂದ ಜೀವನಕ್ಕೋಸುಗ ಅವನ್ನು ಅವಲಂಬಿಸಿದ್ದ ಸಾಧು ಸಾಧ್ವಿಗಳು, ಅನಾಥರು, ಪಂಗುಗಳು, ಅದರಂತೆ ಸೋಮಾರಿಗಳು, ನಿರುದ್ಯೋಗಿಗಳು, ಕಿಡಿಗೇಡಿಗಳು ಇವರೆಲ್ಲರಿಗೂ ಆಧಾರವಿಲ್ಲದಂತಾಯಿತು. ಧರ್ಮಮಠಗಳ ವಶದಲ್ಲಿದ್ದ ಭೂಮಿಗಳು ಮಾರಲ್ಪಟ್ಟು ಹೊಸ ಒಡೆಯರ ವಶದಲ್ಲಿ ಅವು ಬಂದ ಬಳಿಕ ಅವರು ರೈತರಿಂದ ಹೆಚ್ಚು ತೆರಿಗೆಯನ್ನು ಬೇಡತೊಡಗಿದರು. ಕೆಲವೆಡೆಗಳಲ್ಲಂತೂ ರೈತರಿಗೆ ಬಹಳವಾಗಿ ದುಡಿಯಬೇಕಾ

ದುದರಿಂದ ಅವರು ತೊಂದರೆಗೆ ಒಳಪಟ್ಟರು. ಕೆಲವು ರೈತರು ಭೂಮಿಗಳಿಂದ ಹೊರದೂಡಲ್ಪಟ್ಟರು. ಹೀಗಾದುದರಿಂದ ಧರ್ಮಮಠಗಳಿಂದ ಹೊರದೂಡಲ್ಪಟ್ಟ ಸಾಧು ಸಾಧ್ವಿಗಳು, ಭೂಮಿಗಳಿಂದ ಹೊರದೂಡಲ್ಪಟ್ಟ ರೈತರು ಮತ್ತು ಅನ್ನವಸ್ತ್ರಗಳೂ ಆಶ್ರಯವೂ ಇಲ್ಲದೆ ನಿರಾಶ್ರಿತರಾದ ನಿರುದ್ಯೋಗಿಗಳು ಮತ್ತು ಸೋಮಾರಿಗಳು ದೇಶದಲ್ಲಿ ಎಲ್ಲೆಲ್ಲಿಯೂ ತುಂಬಿದರು. "ಧರ್ಮ ಮಠಗಳನ್ನು ಮುರಿವುದೆಂದರೆ ಧರ್ಮವನ್ನು ಮುರಿದಿಕ್ಕುವುದು, ಮತ್ತು ನಾಸ್ತಿಕತ್ವಕ್ಕೆ ಉತ್ತೇಜನವನ್ನೀವುದು", ಎಂದು ಅವರು ಜನರಲ್ಲಿ ಹೇಳುತ್ತ ತಿರುಗಿದರು. ಇದರಿಂದ ಜನರಲ್ಲಿಯೂ ಅಸಂತೋಷವು ಹಬ್ಬತೊಡಗಿತು. ಇಂಗ್ಲಂಡಿನಲ್ಲಿಯ ಉತ್ತರದ ಪರಗಣೆಗಳು ಹಿಂದುಳಿದುವಾಗಿದ್ದುವು. ಆದುದರಿಂದ ಅಲ್ಲಿ ಈ ಅಸಂತೋಷವು ಹೆಚ್ಚಾಗಿ ಹಬ್ಬಿತು. ಯಾರ್ಕಶಾಯರಿನಲ್ಲಿ ಸಾಧುಸಾಧ್ವಿ ಮೊದಲಾದವರ ವಿಷಯದಲ್ಲಿ ಸಹಾನುಭೂತಿಯುಳ್ಳವರು ಬಹಳ ಜನರಾಗಿದ್ದರು. ಇಂತಹ ಸಹಾನುಭೂತಿಯುಳ್ಳ ೩೦,೦೦೦ ಜನರು ಬಂಡಿಗೆ ಪ್ರವೃತ್ತರಾದರು. **ಲಾರ್ಡ ಆಕ್ಸ** ಎಂಬವನು ಅವರ ಮುಂದಾಳುವಾಗಿದ್ದನು. "ಧರ್ಮ ಮಠಗಳು ಪುನಃಸ್ಥಾಪನೆಯನ್ನು ಮಾಡುವುದು, ಪೋಪನೊಡನೆ ಒಪ್ಪಂದವನ್ನು ಮಾಡಿಕೊಂಡು ಇಂಗ್ಲಂಡಿನಲ್ಲಿ ಅವನ ವರ್ಚಸ್ಸನ್ನು ಮರಳಿ ಸ್ಥಾಪಿಸುವುದು, ಹೆನ್ರಿಯ ಮಂತ್ರಿಯಾದ ಕ್ರಾಮವೆಲನನ್ನು ಮಂತ್ರಿಪದದಿಂದ ದೂರಮಾಡುವುದು ಮತ್ತು ನಾಸ್ತಿಕತ್ವವನ್ನು ನಾಶಗೊಳಿಸುವುದು", ಇದು ಅವನ ಉದ್ದೇಶವಿದ್ದಿತು. ಈ ಬಂಡು ಧರ್ಮಕಾರ್ಯಕ್ಕೋಸುಗ ಹೂಡಲ್ಪಟ್ಟಿದೆಂದು ಹೇಳಿ ಈ ಬಂಡಿನ ಸೈನ್ಯಕ್ಕೆ ಅವರು **ಧಾರ್ಮಿಕ ಯಾತ್ರೆ** (Pilgrimage of Grace) ಎಂದು ಹೆಸರನ್ನಿತ್ತರು. ಈ ಜನರು ತಮ್ಮ ಧ್ವಜಗಳ ಮೇಲೆ ಬೈಬಲಿನ ವಾಕ್ಯಗಳನ್ನೂ ಕ್ರಾಸಿನ ಚಿಹ್ನವನ್ನೂ ಬರೆದಿದ್ದರು. ಇವರೆಲ್ಲರೂ ಲಂಡನಿನತ್ತ ಹೊರಟರು. ಹೆನ್ರಿಗೆ ಈ ಬಂಡಿನ ಸುದ್ದಿ ಬಂದೊಡನೆ ಅದನ್ನು ಮುರಿಯಲು ಅವನು ತನ್ನ ಸೈನ್ಯವನ್ನು ಕಳುಹಿದನು. ಬಂಡಿಗೆ ಪ್ರವೃತ್ತರಾದವರ ಸಂಖ್ಯೆ ದೊಡ್ಡದಾಗಿದ್ದಿತು. ಆದರೆ ಅವರಿಗೆ ಯುದ್ಧದ ಶಿಕ್ಷಣವಿರಲಿಲ್ಲ. ಆದುದರಿಂದ ಹೆನ್ರಿ ಆಯಾಸವಿಲ್ಲದೆ ಆ ಬಂಡನ್ನು ಮುರಿದನು. ಮುಂದಾಳುವಾದ ಲಾರ್ಡ ಆಕ್ಸನೂ, ಇನ್ನಿತರರೂ ಶೂಲಕ್ಕೇರಿಸಲ್ಪಟ್ಟರು (೧೫೩೭).

**ಧರ್ಮಕ್ಕೆ ಸಂಬಂಧಿಸಿದ ಸಂಗತಿಗಳು**—ಆ ಬಳಿಕ ಹೆನ್ರಿ ಧರ್ಮದ ಸಂಬಂಧದಲ್ಲಿ ಕೆಳಗೆ ಹೇಳಿದ ಸಂಗತಿಗಳನ್ನು ಮಾಡಿದನು:—

(ಅ) **ಬೈಬಲಿನ ಭಾಷಾಂತರವು**—ಲ್ಯಾಟಿನ್ ಭಾಷೆಯಲ್ಲಿದ್ದ ಬೈಬಲನ್ನು

**ಕ್ರೌವರಡೇಲ** ಎಂಬ ಇಂಗ್ಲಿಶ ವಿದ್ವಾಂಸನು ಇಂಗ್ಲಿಶ ಭಾಷೆಗೆ ಪರಿವರ್ತಿಸಿದನು (೧೫೩೭). ಅದಕ್ಕೆ ಆರ್ಚ ಬಿಶಪ್ ಕ್ರ್ಯಾನ್‌ಮರನ ಸಮ್ಮತಿಯೂ ಇದ್ದಿತು. ಹೆನ್ರಿ ಕ್ರೌಮವೆಲನ ಸೂಚನೆಯನ್ನು ಅನುಸರಿಸಿ ಇಂಗ್ಲಿಶ ಭಾಷೆಯ ಬೈಬಲಿನ ಪ್ರತಿಯನ್ನು ಪ್ರತಿಯೊಂದು ಚರ್ಚಿನಲ್ಲಿ ಇಡಬೇಕೆಂದು ಆಜ್ಞೆಯನ್ನು ವಿಧಿಸಿದನು (೧೫೩೮).

(ಆ) **ಆರು ಕಲಮುಗಳ ಕಾಯ್ದೆ (೧೫೩೯)**—ಪ್ರೊಟೆಸ್ಟಂಟ ಪಂಥದ ಕಡೆಗೆ ಮೊದಲಿನಿಂದಲೂ ಹೆನ್ರಿಯ ಒಲವು ಇರಲಿಲ್ಲ. ಆದುದರಿಂದ ಹಳೆಯ ವಿಚಾರಗಳನ್ನು ಶಾಶ್ವತವಾಗಿರಿಸಲು ಆತನು ಪಾರ್ಲಿಮೆಂಟ ಸಭೆಯಲ್ಲಿ **"ಆರು ಕಲಮುಗಳ ಕಾಯ್ದೆ"** (Statute of Six Articles)ಯನ್ನು ಮಾಡಿಸಿಕೊಂಡನು. ಈ ಕಾಯ್ದೆಯಂತೆ ಮುಂದೆ ಹೇಳಿದ ಮಾತುಗಳಿಗೆ ಎಲ್ಲರೂ ಮಾನ್ಯತೆಯನ್ನು ಕೊಡಬೇಕೆಂದು ನಿರ್ಣಯಿಸಲ್ಪಟ್ಟಿತು. (೧) ಟ್ರ್ಯಾನ್ಸಬ್‌ಸ್ಟ್ಯಾನ್ಸಿಯೇಶನಿನ ತತ್ವದಲ್ಲಿ ವಿಶ್ವಾಸವು: ಯೇಸು ಕ್ರಿಸ್ತನ ಮೃತ್ಯುದಿನವನ್ನಾಚರಿಸಲು ಮಾಡಲ್ಪಡುವ ಸಮಾರಂಭದಲ್ಲಿ ಪ್ರಸಾದವೆಂದು ಬ್ರೆಡ್ ಮತ್ತು ಸರಾಯಿಗಳನ್ನು ಹಂಚುವ ಪದ್ಧತಿಯುಂಟು; ಈ ಪ್ರಸಾದವು ಯೇಸು ಕ್ರಿಸ್ತನ ರಕ್ತಮಾಂಸಗಳಲ್ಲಿ ರೂಪಾಂತರವನ್ನು ಹೊಂದುವುದೆಂಬ ಮಾತಿನಲ್ಲಿ ವಿಶ್ವಾಸವನ್ನಿಡುವುದೆಂದರೆ ಟ್ರ್ಯಾನ್ಸಬ್‌ಸ್ಟ್ಯಾನ್ಸಿಯೇಶನ್ ತತ್ವದಲ್ಲಿ ವಿಶ್ವಾಸವಿಡುವುದು. (೨) ಧರ್ಮಾಧಿಕಾರಿಗಳಿಗೆ ಮದುವೆಯಾಗಲು ಪ್ರತಿಬಂಧವು. (೩) ಧರ್ಮಾಧಿಕಾರಿಗಳು ಪವಿತ್ರವಾದ ಆಚರಣೆಯುಳ್ಳವರಾಗಿರಬೇಕೆಂಬ ನಿಯಮವು. (೪) ಧರ್ಮಾಧಿಕಾರಿಗಳ ಮಧ್ಯಸ್ಥಿಕೆಯಿಂದ ಎಲ್ಲ ಧಾರ್ಮಿಕ ವಿಧಿಗಳು ನಡೆಯತಕ್ಕುದು. (೫) ಮೃತರ ಆತ್ಮಗಳಿಗೆ ಸದ್ಗತಿ ದೊರೆಯಬೇಕೆಂದು ಖಾಸಗಿ ರೀತಿಯಿಂದ ಪ್ರಾರ್ಥನೆ ಮಾಡಲು ಸರ್ವರಿಗೂ ಸ್ವಾತಂತ್ರ್ಯ. (೬) ಮರಣ ಸಮಯದಲ್ಲಿ ಧರ್ಮಾಧಿಕಾರಿಗಳ ಕಿವಿಯಲ್ಲಿ ಮಾಡಿದ ಪಾಪಗಳನ್ನು ಪಶ್ಚಾತ್ತಾಪಪೂರ್ವಕವಾಗಿ ಹೇಳಿದರೆ ಸ್ವರ್ಗಪ್ರಾಪ್ತಿಯಾಗುವುದೆಂಬ ಮಾತಿನಲ್ಲಿ ವಿಶ್ವಾಸವು. ಈ ಆರು ಕಲಮುಗಳ ಕಾಯ್ದೆಯನ್ನು ತಾನು ಮಾಡಿದುದರಿಂದ ಧಾರ್ಮಿಕ ವಿಷಯದಲ್ಲಿ ತಾನು ಸರ್ವಮಾನ್ಯವಾದ ನೀತಿಯನ್ನು ಸ್ವೀಕರಿಸಿದೆನೆಂದು ಹೆನ್ರಿಗೆ ಎನಿಸಿತು. ಆದರೆ ಅವನ ಈ ನೀತಿಯಿಂದ ಪ್ರಾಟೆಸ್ಟಂಟ ಮತ್ತು ರೋಮನ್ ಕ್ಯಾಥೊಲಿಕ್ ಈ ಎರಡೂ ಪಂಥಗಳ ಜನರು ಅವನ ವಿಷಯದಲ್ಲಿ ಅಸಂತುಷ್ಟರಾದರು. ರೋಮನ್ ಕ್ಯಾಥೊಲಿಕ್ ಜನರಿಗೆ ಹೆನ್ರಿಯ ಧಾರ್ಮಿಕ ಶ್ರೇಷ್ಠತ್ವವು ಮಾನ್ಯವಿದ್ದಿಲ್ಲ. ಮತ್ತು ಪ್ರಾಟೆಸ್ಟಂಟ ಜನರಿಗೆ ಅವನ ಈ ಆರು ಕಲಮುಗಳ ಕಾಯ್ದೆಯಲ್ಲಿಯ ಮಾತುಗಳಲ್ಲಿ ವಿಶ್ವಾಸ

ವಿದ್ದಿಲ್ಲ. ಆದುದರಿಂದ ಈ ಧಾರ್ಮಿಕ ಕಾಯ್ದೆಯನ್ನು ಮುರಿದುದರಿಂದ ಎರಡೂ ಪಂಥಗಳ ಜನರು ಹೆನ್ರಿಯಿಂದ ಶಿಕ್ಷೆಗೆ ಗುರಿಮಾಡಲ್ಪಡುತ್ತಿದ್ದರು.

(ಇ) ೧೫೪೯ರಲ್ಲಿ ಪಾರ್ಲಿಮೆಂಟು ಒಂದು ಕಾಯ್ದೆಯನ್ನು ಮಾಡಿ ಪ್ರಾರ್ಥನೆಯ ಪುಸ್ತಕವನ್ನು ಇಂಗ್ಲಿಶ್ ಭಾಷೆಯಲ್ಲಿ ಸಿದ್ಧಗೊಳಿಸಿತು, ಮತ್ತು ಚರ್ಚಿನಲ್ಲಿಯ ಸಾರ್ವಜನಿಕ ಪ್ರಾರ್ಥನೆಗಳು ಇಂಗ್ಲಿಶ ಭಾಷೆಯಲ್ಲಿಯೇ ನಡೆಯಬೇಕೆಂದು ನಿಯಮವನ್ನು ಮಾಡಿತು.

**ಅ್ಯನ್ ಬುಲೀನ ಇವಳು ಶೂಲಕ್ಕೇರಿಸಲ್ಪಟ್ಟುದು**—ಹೆನ್ರಿ ಅ್ಯನ್ ಬುಲೀನ ಇವಳನ್ನು ಮದುವೆಯಾದ ಬಳಿಕ ಆಕೆಯಿಂದ **ಅವನಿಗೆ ಎಲಿಝಬೆಥ್** ಎಂಬ ಮಗಳಾದಳು. ಆಕೆಗೆ ಪುತ್ರಸಂತಾನವಾಗುವ ವಿಷಯದಲ್ಲಿ ಅವನಿಗೆ ಪೂರ್ಣ ನಿರಾಶೆಯಾಗಿದ್ದಿತು, ಆದುದರಿಂದ ಆಕೆಯಲ್ಲಿ ಅವಗಿನಿದ್ದ ಪ್ರೇಮವು ಕಡಿಮೆಯಾಗತೊಡಗಿತು. ಆಕೆಯ ಒನಪು-ಒಯ್ಯಾರಗಳೂ ಅರಮನೆಯಲ್ಲಿಯ ಜನರೊಡನೆ ಇದ್ದ ಆಕೆಯ ಸಲುಗೆಯ ವರ್ತನವೂ ಅವನ ಮನಸ್ಸಿನಲ್ಲಿ ಆಕೆಯ ಶೀಲದ ವಿಷಯದಲ್ಲಿ ಸಂಶಯವನ್ನು ಹುಟ್ಟಿಸಿದುವು. ಈ ಪರಿಸ್ಥಿತಿಯಲ್ಲಿ ಅವನಿರುವಾಗ ಅ್ಯನ್ ಬುಲೀನ ಇವಳ ದಾಸಿಯಾಗಿದ್ದ **ಜೇನ ಸೀಮೋರ** ಎಂಬವಳಲ್ಲಿ ಅವನ ಮನಸ್ಸು ನಟ್ಟಿತು. ಅವಳನ್ನು ಮದುವೆಯಾಗಲು ಅವನು ನಿಶ್ಚಯಿಸಿದನು. ಈ ಮದುವೆಗೆ ಅ್ಯನ್ ಬುಲೀನ ಇವಳಿಂದ ಆತಂಕವುಂಟಾದುದರಿಂದ ಅವಳ ಮೇಲೆ ಆರೋಪವು ಇಡಲ್ಪಟ್ಟು ೧೫೩೬ನೆಯ ಇಸ್ವಿಯ ಮೇ ತಿಂಗಳಲ್ಲಿ ಆ ಆರೋಪದ ವಿಚಾರಣೆಯಾಗಿ ಅವಳು ದೋಷಿಯೆಂದು ನಿರ್ಣಯವಾಗಿ ಶೂಲಕ್ಕೇರಿಸಲ್ಪಟ್ಟಳು. ಆ ಬಳಿಕ ಹೆನ್ರಿ **ಜೇನ ಸೀಮೋರ** ಇವಳನ್ನು ಮದುವೆಯಾದನು (೧೫೩೬).

**ಹೆನ್ರಿಯ ಅನಿಯಂತ್ರಿತ ಸತ್ತೆ**—ಆರ್ಚಬಿಶಪ್, ಬಿಶಪ್, ಧರ್ಮಮಠಗಳಲ್ಲಿಯ ಅಬಟ್ (ಧರ್ಮಾಧಿಕಾರಿಗಳು) ಮೊದಲಾದ ಧರ್ಮಾಧಿಕಾರಿಗಳು ಪಾರ್ಲಿಮೆಂಟಿನಲ್ಲಿಯ ಮನ್ನೆಯರ (ಲಾರ್ಡ್ಸ್) ಸಭೆಯ ಆನುವಂಶಕ ಸದಸ್ಯರಾಗಿದ್ದರು. ಈ ಸಭೆಯಲ್ಲಿ ಹೆನ್ರಿಯ ಮತಾಧಿಕ್ಯವಿದ್ದಿತು. ಆದರೆ ಅವನು ಧರ್ಮಮಠಗಳನ್ನು ಜಪ್ತುಮಾಡಿದುದರಿಂದ ಆ ಸಭೆಯಲ್ಲಿ ಧರ್ಮಾಧಿಕಾರಿಗಳ ಸಂಖ್ಯೆ ಕಡಿಮೆಯಾಯ್ತು; ಆದುದರಿಂದ ಹೆನ್ರಿ ತನ್ನ ಪ್ರೇಮಪಾತ್ರರಾದ ಅನೇಕ ಜನರನ್ನು ಮನ್ನೆಯರಾಗಿ (ಲಾರ್ಡ್ಸ್) ಮಾಡಿ ಅವರನ್ನು ಆ ಸಭೆಯ ಸದಸ್ಯರಾಗಿ ಮಾಡಿದನು. ಕಾಮನ್ಸ ಸಭೆಯಲ್ಲಿಯ ಸದಸ್ಯರು ಹೆನ್ರಿಗೆ ಹೆದರುತ್ತಿದ್ದರಾದುದರಿಂದ ಅವರಿಂದ ಅವನಿಗೆ ಸಹಸಾ ವಿರೋಧವಾಗುತ್ತಿದ್ದಿಲ್ಲ. ಈ ಕಾರಣದಿಂದ

ಹೆನ್ರಿಗೆ ಪಾರ್ಲಿಮೆಂಟನ್ನು ತನ್ನ ಕಡೆಗೆ ಒಲಿಸಿಕೊಂಡು ತನಗೆ ಬೇಕಾದ ಕಾಯ್ದೆಗಳನ್ನು ಮಾಡಿಸಿಕೊಳ್ಳಲು ಕಠಿಣವಾಗಿರಲಿಲ್ಲ. ೧೫೩೯ರಲ್ಲಿ ಪಾರ್ಲಿಮೆಂಟು ಒಂದು ಕಾಯ್ದೆಯನ್ನು ಮಾಡಿತು. ಹೆನ್ರಿ ಪ್ರಕಟನೆಯನ್ನೇನಾದರೂ (Proclamation) ಹೊರಡಿಸಿದರೆ ಪಾರ್ಲಿಮೆಂಟಿನ ಕಾಯ್ದೆಯಂತೆ ಅದಕ್ಕೆ ಮಾನ್ಯತೆ ದೊರೆಯಬೇಕೆಂದು ಆ ಕಾಯ್ದೆಯಿಂದ ನಿರ್ಣಯಿಸಲ್ಪಟ್ಟಿತು. ಇದರಿಂದ ಹೆನ್ರಿಗೆ ತನಗೆ ಬೇಕಾದ ಕಾಯ್ದೆಯನ್ನು ಮಾಡಲು ಅಧಿಕಾರವು ಪ್ರಾಪ್ತವಾಗಿ ಅವನ ಸತ್ತೆ ಅನಿಯಂತ್ರಿತವಾಯ್ತು.

**ಕ್ರಾಮವೆಲನ ಅಧಃಪಾತವು (೧೫೪೦)**–೧೫೩೭ರಲ್ಲಿ ಹೆನ್ರಿಗೆ **ಜೇನ ಸೀಮೋರ** ಇವಳಿಂದ ಎಡವರ್ಡನೆಂಬ ಮಗನಾದನು. ಆದರೆ ಈ ಮಗು ಹುಟ್ಟಿದೊಡನೆ ಜೇನ ಇವಳು ಮಡಿದಳು. ಆ ಬಳಿಕ ಎರಡು ವರ್ಷಗಳ ವರೆಗೆ ಹೆನ್ರಿ ಲಗ್ನವಾಗಲಿಲ್ಲ, ಆದರೆ ಮುಂದೆ ಲಗ್ನವಾಗಲು ಅವನು ಬಯಸಿದನು. ಹೆನ್ರಿಯ ಮುಖ್ಯ ಪ್ರಧಾನನಾದ ಕ್ರಾಮವೆಲನು ಹೆನ್ರಿ ಜರ್ಮನಿಯಲ್ಲಿಯ ಪ್ರಾಟೆಸ್ಟಂಟ ಪಂಥದ ರಾಜಕನ್ಯೆಯನ್ನು ಮದುವೆಯಾಗುವದು ವಿಹಿತವೆಂದು ಬಗೆದು ಅವನ ಸಮ್ಮತಿಯಿಂದ **ಅನ್ ಆಫ್ ಕ್ಲೀವ್ಜ** ಎಂಬ ರಾಜಕನ್ಯೆಯೊಡನೆ ಅವನ ಲಗ್ನವನ್ನು ನಿಶ್ಚಯಿಸಿದನು. ಈ ಲಗ್ನಸಂಬಂಧದಿಂದ ಜರ್ಮನಿಯ ಪ್ರಾಟೆಸ್ಟಂಟ ಪಂಥದ ರಾಜನೊಡನೆ ತನಗೆ ಇಷ್ಟವಾದ ಒಪ್ಪಂದವನ್ನು ಮಾಡಿಕೊಳ್ಳಲು ಮತ್ತು ಇಂಗ್ಲಂಡಿನಲ್ಲಿ ಪ್ರಾಟೆಸ್ಟಂಟ ಪಂಥದ ಪ್ರಸಾರವನ್ನು ಮಾಡಲು ಅನುಕೂಲವಾಗುವದೆಂದು ಕ್ರಾಮವೆಲನಿಗೆ ಆಶೆಯಿದ್ದಿತು. ಕ್ರಾಮವೆಲನ ಹೇಳಿಕೆಯಂತೆ ಹೆನ್ರಿ ಅನ್ ಆಫ್ ಕ್ಲೀವ್ಜ ಇವಳನ್ನು ಮದುವೆಯಾದನು. ಆದರೆ ಲಗ್ನವಾದ ಬಳಿಕ ಅನ್ ಅವಳು ಅರೆಹುಚ್ಚಿಯಾಗಿರುವಳೆಂದು ಹೆನ್ರಿಗೆ ತೋರಿತು. ಕ್ರಾಮವೆಲನು ಸಂಪೂರ್ಣವಾಗಿ ವಿಚಾರ ಮಾಡಲಿಲ್ಲವಾದುದರಿಂದ ತನಗೆ ಮೋಸವಾಯಿತೆಂದು ಆತನನ್ನು ಶಾಸನಕ್ಕೊಳಗಾಗಿಸಲು ಹೆನ್ರಿ ನಿಶ್ಚಯಿಸಿದನು. ಅವನು ಅನ್ ಇವಳೊಡನೆ ಘಟಸ್ಫೋಟವನ್ನು ಮಾಡಿ ಅವಳಿಗೆ ಪೆನ್ಶನನ್ನು ಕೊಟ್ಟು ಅವಳನ್ನು ದೂರಮಾಡಿದನು. ಮತ್ತು ಕ್ರಾಮವೆಲನ ಮೇಲೆ ರಾಜದ್ರೋಹದ ಆರೋಪವನ್ನಿಟ್ಟು ಅವನನ್ನು ಕಾರಾಗೃಹಕ್ಕಟ್ಟಿ ಕೊನೆಗೆ ಅವನನ್ನು ಶೂಲಕ್ಕೇರಿಸಿದನು. ಕ್ರಾಮವೆಲನು ಮಡಿದ ಬಳಿಕ ತಮಗೆ ವಿರುದ್ಧವಾಗಿದ್ದ ಕಾಯ್ದೆಗಳು ನಷ್ಟವಾಗುವವೆಂದು ರೋಮನ್ ಕ್ಯಾಥೊಲಿಕ ಜನರು ಬಗೆದರು. ಮುಂದೆ ಕೆಲದಿನಗಳಲ್ಲಿ ಹೆನ್ರಿ **ಕ್ಯಾಥರಿನ ಹಾವರ್ಡ** ಎಂಬ ರೋಮನ್ ಕ್ಯಾಥೊಲಿಕ ಪಂಥದ

ಸ್ತ್ರೀಯನ್ನು ಮದುವೆಯಾದುದರಿಂದಂತು ರೋಮನ್ ಕ್ಯಾಥೊಲಿಕ್ ಜನರಿಗೆ ಬಹು ಆನಂದವಾಯ್ತು. ಕ್ಯಾಥರಿನ್ ಇವಳು ಸೌಂದರ್ಯವತಿಯಾಗಿದ್ದಳು; ಆದರೆ ಅವಳ ಶೀಲವು ಸರಿಯಾಗಿರಲಿಲ್ಲವೆಂಬುದು ಲಗ್ನದ ಕಾಲದಲ್ಲಿ ಹೆನ್ರಿಗೆ ಗೊತ್ತಿರಲಿಲ್ಲ. ಮುಂದೆ ಎರಡು ವರ್ಷಗಳಲ್ಲಿಯೇ ಅವಳ ಶೀಲವು ಸರಿಯಾಗಿಲ್ಲದುದನ್ನು ಕಂಡು ಹೆನ್ರಿ ಅವಳ ಶಿರಚ್ಛೇದವನ್ನು ಮಾಡಿಸಿದನು (೧೫೪೨). ಅವನ ಈ ಐದನೆಯ ಲಗ್ನವು ಇಂತು ದುಃಖಕರವಾಗಿ ಕೊನೆಗಂಡಿತು. ಆ ಬಳಿಕ ಹೆನ್ರಿ ಕ್ಯಾಥರಾಯಿನ್ ಪಾರ್ ಎಂಬವಳನ್ನು ೧೫೪೩ರಲ್ಲಿ ಮದುವೆಯಾದನು.*

ಸ್ಕಾಟಲಂಡ ಮತ್ತು ಫ್ರಾನ್ಸ ಇವುಗಳೊಡನೆ ಯುದ್ಧವು—ಹೆನ್ರಿಯ ರಾಜನೀತಿಯೂ ಅವನ ನಡೆವಳಿಯೂ ರೋಮನ್ ಕ್ಯಾಥೊಲಿಕ ಮತ್ತು ಪ್ರಾಟೆಸ್ಟಂಟ ಈ ಎರಡೂ ಪಂಥಗಳ ಜನರಲ್ಲಿ ಅಸಂತೋಷವನ್ನು ಹುಟ್ಟಿಸಿದುವು. ಅದರಿಂದ ಈ ಎರಡೂ ಪಂಥಗಳ ಜನರಲ್ಲಿ ಹೆನ್ರಿಯ ವಿರುದ್ಧವಾಗಿ ಒಳಸಂಚುಗಳು ಹುಟ್ಟಿದುವು. ಅತ್ತ ಸ್ಕಾಟಿಶ್ ಮತ್ತು ಫ್ರೆಂಚ ಜನರ ಕಡೆಗೂ ಲಕ್ಷ್ಯವನ್ನು ಪೂರಯಿಸುವುದು ಹೆನ್ರಿಗೆ ಅವಶ್ಯವಾಯಿತು. ಇಂಗ್ಲಂಡಿನ ಉತ್ತರ ಸೀಮೆಯಲ್ಲಿ ಶಾಂತತೆಯೆಂಬುದಿರಲಿಲ್ಲ. ಸ್ಕಾಟಿಶ್ ಜನರ ಪ್ರೇರಣೆಯಿಂದ ಅಲ್ಲಿ ಮತ್ತೆ ಬಂಡುಗಳು ಪ್ರಾರಂಭವಾದುವು (೧೫೪೨). ಸ್ಕಾಟಲಂಡಿನ ಮೇಲೆ ದಾಳಿ ಮಾಡಲು ಹೆನ್ರಿ ಸೈನ್ಯವನ್ನು ಕಳಿಹಿದನು. ಸಾಲ್ವೆಮಾಸ್ ಎಂಬಲ್ಲಿ ಯುದ್ಧವಾಗಿ ಸ್ಕಾಟಿಶ್ ಸೈನ್ಯವು ಸೋತಿತು (೧೫೪೨). ಮುಂದೆ ಸ್ವಲ್ಪ ದಿನಗಳಲ್ಲಿ ಸ್ಕಾಟಲಂಡಿನ ಅರಸನಾದ ೫ನೆಯ ಜೇಮ್ಸನು ಮರಣಹೊಂದಿದನು. ಜೇಮ್ಸನಿಗೆ ಪುತ್ರಸಂತಾನವಿದ್ದಿಲ್ಲ. ಆದುದರಿಂದ ಮೇರಿ ಎಂಬ ಆತನ ಮಗಳು ಪಟ್ಟಕ್ಕೆ ಬಂದಳು. ಮೇರಿ ಚಿಕ್ಕವಳಿದ್ದುದರಿಂದ ಅವಳ ಆಳ್ಕೆಯ ಪ್ರಾರಂಭದಲ್ಲಿಯೆ ಸ್ಕಾಟಲಂಡಿನಲ್ಲಿ ದೊಡ್ಡ ದೊಡ್ಡ ಸರದಾರರಲ್ಲಿ ಮತ್ತೆ ಬಂಡುಗಳು ಹುಟ್ಟಿದುವು.

---

*೮ನೆಯ ಹೆನ್ರಿಯ ಲಗ್ನಸಂಬಂಧಗಳು:—(೧) ೧೫೦೯ರಲ್ಲಿ ಕ್ಯಾಥರಿನ್ ಇವಳೊಡನೆ ಲಗ್ನವು; ೧೫೩೩ರಲ್ಲಿ ಘಟಸ್ಫೋಟವು; ಅವಳಿಂದ ಅವನಿಗೆ ಮೇರಿಯೆಂಬ ಮಗಳು. (೨) ೧೫೩೩ರಲ್ಲಿ ಆನ್ ಬುಲೀನ ಇವಳೊಡನೆ ಲಗ್ನವು; ೧೫೩೬ರಲ್ಲಿ ಅವಳ ಶಿರಚ್ಛೇದವು: ಅವಳಿಂದ ಅವನಿಗೆ ಎಲಿಝಾಬೆಥ್ ಎಂಬ ಮಗಳು. (೩) ೧೫೩೬ರಲ್ಲಿ ಜೇನ ಸೀಮೋರ ಇವಳೊಡನೆ ಲಗ್ನವು; ೧೫೩೭ರಲ್ಲಿ ಅವಳ ಮರಣವು; ಅವಳಿಂದ ಅವನಿಗೆ ಎಡವರ್ಡನೆಂಬ ಮಗನು. (೪) ೧೫೪೦ರಲ್ಲಿ ಆನ್ ಆಫ್ ಕ್ಲೀವ್ಜ ಇವಳೊಡನೆ ಲಗ್ನವು; ೧೫೪೦ರಲ್ಲಿ ಘಟಸ್ಫೋಟವು. (೫) ೧೫೪೦ರಲ್ಲಿ ಕ್ಯಾಥರಿನ್ ಹಾವರ್ಡ ಇವಳೊಡನೆ ಲಗ್ನವು; ೧೫೪೨ರಲ್ಲಿ ಅವಳ ಶಿರಚ್ಛೇದವು. (೬) ೧೫೪೩ರಲ್ಲಿ ಕ್ಯಾಥರಿನ್ ಪಾರ್ ಇವಳೊಡನೆ ಲಗ್ನವು.

ಆದುದರಿಂದ ಅಲ್ಲಿ ಶಾಂತತೆಯನ್ನು ಸ್ಥಾಪಿಸುವ ಮತ್ತು ಮೇರಿಯ ಮದುವೆಯನ್ನು ತನ್ನ ಮಗನಾದ ಎಡವರ್ಡನೊಡನೆ ಮಾಡಿ ಸ್ಕಾಟಲಂಡನ್ನು ತನ್ನ ರಾಜ್ಯಕ್ಕೆ ಕೂಡಿಸುವ ಉದ್ದೇಶದಿಂದ ಹೆನ್ರಿ **ಹರ್ಟಫೋರ್ಟಿನ ಅರ್ಲ**ನಿಗೆ ಸೈನ್ಯವನ್ನು ಕೊಟ್ಟು ಅತ್ತ ಕಳುಹಿದನು. ಆದರೆ ಇದರಲ್ಲಿ ಅವನಿಗೆ ಯಶಸ್ಸು ದೊರೆಯಲಿಲ್ಲ.

ಇತ್ತ ಫ್ರಾನ್ಸಿನ ಅರಸನಾದ ಫ್ರಾನ್ಸಿಸನು ಇಂಗ್ಲಂಡಿನ ಮೇಲೆ ದಾಳಿ ಮಾಡಲು ದೊಡ್ಡದೊಂದು ಹಡಗುಪಡೆಯನ್ನು ಸಿದ್ಧಗೊಳಿಸಿದ್ದನು. ಫ್ರಾನ್ಸಿನಿಂದ ಬರುವ ದಾಳಿಯನ್ನು ಇದಿರಿಸಲು ಹೆನ್ರಿ ಸೈನ್ಯವನ್ನು ಕೂಡಿಸಿ ಹಡಗುಪಡೆಯನ್ನು ಸಜ್ಜುಗೊಳಿಸಿದನು (೧೫೪೫). ಫ್ರೆಂಚ ಸೈನ್ಯವು ಆಯಿಲ್ ಆಫ್ ವ್ಹಾಯಿಟ್ ಎಂಬ ನಡುಗಡ್ಡೆಯನ್ನು ಉಧ್ವಸ್ತಗೊಳಿಸಿ ಇಂಗ್ಲಿಶರ ಕೆಲವು ಹಡಗುಗಳನ್ನು ಸುಟ್ಟಿತು; ಆದರೆ ಇದರ ಹೊರ್ತು ಮತ್ತಾವುದನ್ನೂ ಮಾಡಲು ಅದಕ್ಕೆ ಶಕ್ಯವಾಗಲಿಲ್ಲ. ಹೆನ್ರಿ ಫ್ರಾನ್ಸಿನಲ್ಲಿಯ ಬುಲೋನ ಬಂದರವನ್ನು ೧೫೪೪ರಲ್ಲಿ ಗೆದ್ದು ತನ್ನ ವಶದಲ್ಲಿ ತೆಗೆದುಕೊಂಡಿದ್ದನು. ಆದರೆ ೧೫೪೬ರಲ್ಲಿ ಆದ ಒಪ್ಪಂದದಿಂದ ಬಹಳವಾಗಿ ಹಣವನ್ನು ತೆಗೆದುಕೊಂಡು ಫ್ರಾನ್ಸಿಗೆ ಅದನ್ನು ತಿರುಗಿ ಕೊಟ್ಟನು.

**ಕಿರುಕುಳ ಸಂಗತಿಗಳು**—ಸ್ಕಾಟಲಂಡ್ ಮತ್ತು ಫ್ರಾನ್ಸ ಇವುಗಳೊಡನೆ ಯುದ್ಧಮಾಡಲು ಮತ್ತು ಅಂತಃಸ್ಥ ಅಸಂತೋಷವನ್ನೂ ಬಂಡುಗಳನ್ನೂ ಮುರಿಯಲು ಹೆನ್ರಿ ಸೈನ್ಯವನ್ನು ಇಡಬೇಕಾಯ್ತು. ಇದಕ್ಕೋಸುಗ ಬಹಳ ಹಣವು ವೆಚ್ಚವಾಯ್ತು. ಇಂಗ್ಲಂಡಿನಲ್ಲಿಯ ಧರ್ಮಮಠಗಳನ್ನು ಮುರಿದ ಬಳಿಕ ಅಲ್ಲಿಯ ಕೆಲವು ಭೂಮಿಗಳನ್ನು ಮಾರಿದುದರಿಂದ ಅವನಿಗೆ ಬಹಳ ಹಣವೇನೊ ದೊರೆತಿತು. ಆದರೆ ಆ ಹಣವೂ ಸ್ವಲ್ಪಾವಧಿಯಲ್ಲಿ ವೆಚ್ಚವಾಯ್ತು. ಆದುದರಿಂದ ಹಣವನ್ನು ಸಂಗ್ರಹಿಸಲು ಅವನು ಮತ್ತೆ ಬೇರೆ ಉಪಾಯಗಳನ್ನು ಯೋಚಿಸಬೇಕಾಯ್ತು. ಅವನು ಇಂಗ್ಲಂಡಿನಲ್ಲಿಯ ನಿಜವಾದ ನಾಣ್ಯಗಳನ್ನು ಕಡಿಮೆ ಮಾಡಿ **ನಕಲಿಯ ನಾಣ್ಯಗಳನ್ನು** ಪ್ರಚಾರದಲ್ಲಿ ತಂದನು. ಅವನು **ಪೋರ್ಟ್ಸಮಾವುಥ್**, **ಉಲ್‌ವಿಚ್** ಮತ್ತು **ಡೇಪೋರ್ಟ** ಎಂಬಲ್ಲಿ ವಖಾರಗಳನ್ನು ನಿರ್ಮಿಸಿ ಹೊಸ ಯುದ್ಧನೌಕೆಗಳನ್ನು ಸಿದ್ಧಗೊಳಿಸಿದನು.

ಹೆನ್ರಿಯ ಆಳ್ಕೆಯ ಕೊನೆಯ ಭಾಗದಲ್ಲಿ ಬಡವರ ಸ್ಥಿತಿ ಬಹಳವಾಗಿ ಕೆಟ್ಟಿತ್ತು. ಅವನು ಧರ್ಮಮಠಗಳನ್ನು ಮುರಿದುದರಿಂದ ಅಲ್ಲಿ ಇರುತ್ತಿದ್ದ ಧರ್ಮಾಧಿಕಾರಿಗಳಿಗೆ, ಭಿಕ್ಷುಗಳಿಗೆ ಮತ್ತು ಅಲ್ಲಿ ದೊರೆಯುತ್ತಿದ್ದ ಭಿಕ್ಷೆಯಿಂದ ಉಪಜೀವಿಸುತ್ತಿದ್ದ ಅನಾಥರಿಗೆ ಮತ್ತು ಪಂಗುಗಳಿಗೆ ತಿರಿದು ತಿನ್ನುವುದರ ಹೊರ್ತು

ಬೇರೆ ಯಾವ ಉದ್ಯೋಗವೂ ಉಳಿಯಲಿಲ್ಲ. ಇದರಿಂದ ತಿರಿಕರ ಸಂಖ್ಯೆ ಹೆಚ್ಚಿತು.

ಹೆನ್ರಿಗೆ ತನ್ನ ಮೃತ್ಯುಪತ್ರವನ್ನು ಮಾಡಲು ಪಾರ್ಲಿಮೆಂಟು ಅಧಿಕಾರವನ್ನು ಕೊಟ್ಟಿತ್ತು. ಅದರಂತೆ ಅವನು ಮೃತ್ಯುಪತ್ರವನ್ನು ಮಾಡಿ ತನ್ನ ತರುವಾಯದಲ್ಲಿ ಎಡವರ್ಡನು, ಎಡವರ್ಡನು ನಿಪುತ್ರಿಕನಾಗಿ ಮಡಿದರೆ ಅವನ ತರುವಾಯದಲ್ಲಿ ಮೇರಿ ಮತ್ತು ಆ ಬಳಿಕ ಎಲಿಝಬೆಥ್ ಇವಳು ರಾಜ್ಯವಾಳಬೇಕೆಂದು ವ್ಯವಸ್ಥೆಯನ್ನು ಮಾಡಿದನು. ಈ ಬಗೆಯಾಗಿ ವ್ಯವಸ್ಥೆಯನ್ನು ಮಾಡಿ ೧೫೪೭ರಲ್ಲಿ ಜಾನೇವರಿ ತಿಂಗಳಲ್ಲಿ ಹೆನ್ರಿ ಮಡಿದನು.

---

## ಸಾರಾಂಶವು

### ಎಂಟನೆಯ ಹೆನ್ರಿ (೧೫೦೯—೧೫೪೭).

**ಎಂಟನೆಯ ಹೆನ್ರಿಯ ರಾಜನೀತಿ.**

(ಅ) ಪರರಾಷ್ಟ್ರೀಯ ರಾಜಕಾರಣದಲ್ಲಿ ಕೈಯಿಕ್ಕಿ ಇಂಗ್ಲಂಡಿನ ವೈಭವವನ್ನೂ ವರ್ಚಸ್ಸನ್ನೂ ಹೆಚ್ಚಿಸುವುದು ಮತ್ತು ಯುರೋಪದಲ್ಲಿ ಸತ್ತೆಯ ಸಮತೂಕವನ್ನು ಕಾಯುವುದು.

(ಆ) ಇಂಗ್ಲಂಡಿನಲ್ಲಿ ಪೋಪನ ಧಾರ್ಮಿಕ ಸತ್ತೆಯನ್ನು ನಾಶಗೊಳಿಸಿ ಇಂಗ್ಲಂಡಿನ ಚರ್ಚನ್ನು ರಾಷ್ಟ್ರೀಯವಾಗಿ ಮಾಡುವುದು.

ಹೆನ್ರಿಯ ಆಳ್ಕೆಯಲ್ಲಿ ಎರಡು ವಿಭಾಗಗಳು ಕಲ್ಪಿಸಲ್ಪಡಬಹುದು.

೧೫೦೯ರಿಂದ ೧೫೨೮ರ ವರೆಗೆ ಮೊದಲನೆಯ ವಿಭಾಗವು—ಇದರಲ್ಲಿ ಮೊದಲನೆಯ ಧ್ಯೇಯವನ್ನು ಸಾಧಿಸಲು ಪ್ರಯತ್ನವು.

೧೫೨೮ರಿಂದ ೧೫೪೭ರ ವರೆಗೆ ಎರಡನೆಯ ವಿಭಾಗವು—ಇದರಲ್ಲಿ ಎರಡನೆಯ ಧ್ಯೇಯವನ್ನು ಸಾಧಿಸಲು ಪ್ರಯತ್ನವು.

(ಅ) ಪರರಾಷ್ಟ್ರೀಯ ರಾಜಕಾರಣದಲ್ಲಿ ಕೈಯಿಕ್ಕಿ ಇಂಗ್ಲಂಡಿನ ವೈಭವವನ್ನೂ ವರ್ಚಸ್ಸನ್ನೂ ಹೆಚ್ಚಿಸುವುದು ಮತ್ತು ಯುರೋಪದಲ್ಲಿ ಸತ್ತೆಯ ಸಮತೂಕವನ್ನು ಕಾಯುವುದು, ಇದಕ್ಕೋಸುಗ—

೧೫೧೩ರಲ್ಲಿ ಸ್ಪೇನದೊಡನೆ ಒಪ್ಪಂದವು ಮತ್ತು ಫ್ರಾನ್ಸಿನೊಡನೆ ಯುದ್ಧವು ಮತ್ತು ಗಿನ್‌ಗಟ್ ಎಂಬಲ್ಲಿ ಫ್ರಾನ್ಸಿನ ಪರಾಜಯವು.

೧೫೧೩ರಲ್ಲಿ ಫ್ಲಾಡನ್‌ಫೀಲ್ಡ ಎಂಬಲ್ಲಿ ಸ್ಕಾಟಿಶ್ ಜನರ ಪರಾಜಯವು.

ಸ್ಪೇನದ ರಾಜನೂ ಜರ್ಮನಿಯ ಬಾದಶಹನೂ ಆದ ಚಾರ್ಲಸ್ ಮತ್ತು ಫ್ರಾನ್ಸಿನ ರಾಜನಾದ ಫ್ರಾನ್ಸಿಸ್ ಇವರಲ್ಲಿ ಯುರೋಪದಲ್ಲಿಯ ವರ್ಚಸ್ಸಿಗೋಸುಗ ಸ್ಪರ್ಧೆ.

೧೫೨೧ರಲ್ಲಿ ಸ್ಪೇನದೊಡನೆ ಒಪ್ಪಂದವು ಮತ್ತು ಫ್ರಾನ್ಸಿನೊಡನೆ ಯುದ್ಧವು.

೧೫೪೨ರಲ್ಲಿ ಸ್ಕಾಟಿಶ್ ಜನರೊಡನೆ ಯುದ್ಧವು ಮತ್ತು ಸಾಲ್ವೆಮೂಸ್ ಎಂಬಲ್ಲಿ ಅವರ ಪರಾಜಯವು.

೧೫೪೪-೪೬ರಲ್ಲಿ ಫ್ರಾನ್ಸಿನೊಡನೆ ಯುದ್ಧವು.

(ಆ) ಇಂಗ್ಲಂಡಿನಲ್ಲಿ ಪೋಪನ ಧಾರ್ಮಿಕ ಸತ್ತೆಯನ್ನು ನಾಶಗೊಳಿಸಿ ಇಂಗ್ಲಂಡಿನ ಚರ್ಚನ್ನು ರಾಷ್ಟ್ರೀಯವಾಗಿ ಮಾಡುವುದು.

(೧೫೨೧ರಲ್ಲಿ ಹೆನ್ರಿ ಪೋಪನ ಸಮರ್ಥನಾರ್ಥವಾಗಿ ಲೂಥರನ ವಿರುದ್ಧ ಪುಸ್ತಕವನ್ನು ಬರೆದಿದ್ದನು. ಅದಕ್ಕೋಸುಗ ಪೋಪನು ಅವನಿಗೆ ಧರ್ಮರಕ್ಷಕನೆಂಬ ಬಿರುದನ್ನು ಕೊಟ್ಟಿದ್ದನು.)

೧೫೨೭ರಲ್ಲಿ ಕ್ಯಾಥರಿನ್ ಇವಳ ವಿವಾಹವಿಚ್ಛೇದದ ಪ್ರಶ್ನೆ. ಇದಕ್ಕೋಸುಗವೆ ಹೆನ್ರಿ ಪೋಪನ ಧಾರ್ಮಿಕ ಸತ್ತೆಯನ್ನು ನಾಶಗೊಳಿಸಿದನು.

೧೫೨೯ರಲ್ಲಿ ವಿವಾಹವಿಚ್ಛೇದದ ಪ್ರಕರಣದ ವಿಚಾರಣೆಗೋಸುಗ ಪೋಪನು ಕಾಂಪೇಜೊ ಮತ್ತು ವೂಲ್ಸೆ ಇವರ ನ್ಯಾಯಕೋರ್ಟನ್ನು ನಿಯೋಜಿಸಿದನು. ಮುಂದೆ ಈ ಪ್ರಕರಣದ ವಿಚಾರಣೆಯನ್ನು ರೋಮದಲ್ಲಿ ತಾನೇ ಮಾಡಬೇಕೆಂದು ಪೋಪನು ನಿಶ್ಚಯಿಸಿದನು. ವೂಲ್ಸೆಯ ಅಧಃಪಾತವು ಮತ್ತು ಮೃತ್ಯು (೧೫೩೦).

೧೫೨೯—೧೫೩೬ ಪಾರ್ಲಿಮೆಂಟು ಪೋಪನ ಸತ್ತೆಯ ವಿರುದ್ಧವಾಗಿ ಕಾಯ್ದೆಯನ್ನು ಮಾಡಿತು.

೧೫೩೨. ಇಂಗ್ಲಂಡಿನಲ್ಲಿಯ ಧರ್ಮಾಧಿಕಾರಿಗಳು ಮೊದಲನೆಯ ವರ್ಷದ ಉತ್ಪನ್ನವನ್ನು ಪೋಪನಿಗೆ ಕಳಿಸುವ ಪದ್ಧತಿಯನ್ನು ನಿಲ್ಲಿಸಿದುದು.

ಧಾರ್ಮಿಕ ವಿಷಯದಲ್ಲಿಯೂ ಪೋಪನ ಕಡೆಗೆ ಅಪೀಲುಗಳನ್ನು ಕಳಿಸುವ ಪದ್ಧತಿ ನಿಲ್ಲಿಸಲ್ಪಟ್ಟಿದು.

೧೫೩೩. ಕ್ರಾನ್ಮರನು ಕ್ಯಾಂಟರ್ಬರಿಯ ಅರ್ಚಬಿಶಪನಾಗಿ ನಿಯೋಜಿಸಲ್ಪಟ್ಟಿದು. ಕ್ಯಾಥರಿನ್ ಇವಳೊಡನೆ ವಿವಾಹವಿಚ್ಛೇದವನ್ನು ಮಾಡಲು ಅವನು ಅಪ್ಪಣೆಯಿತ್ತನು. ಆನ್ ಬುಲೀನ ಇವಳೊಡನೆ ಮದುವೆ.

೧೫೩೪. ಅಕ್ಟ ಆಪ್ ಸುಪ್ರಿಮಸಿ— ಧಾರ್ಮಿಕ ವಿಷಯದಲ್ಲಿ ಪೋಪನ ಸತ್ತೆ ನಿರಾಕರಿಸಲ್ಪಟ್ಟಿತು. ಇಂಗ್ಲಂಡಿನ ಅರಸನೆ ಧಾರ್ಮಿಕವಿಷಯದಲ್ಲಿಯೂ ಇಂಗ್ಲಂಡಿನಲ್ಲಿ ಮುಖ್ಯನು.

೧೫೩೬. ಸಣ್ಣಸಣ್ಣ ಧರ್ಮಮಠಗಳು ಮುರಿಯಲ್ಪಟ್ಟವು.

೧೫೩೭ ಕ್ಲೌವರ್‌ಡೇಲನು ಬೈಬಲನ್ನು ಇಂಗ್ಲಿಶ ಭಾಷೆಗೆ ಪರಿವರ್ತಿಸಿದನು. ಇದರ ಪ್ರತಿಗಳು ಇಂಗ್ಲಂಡಿನ ಚರ್ಚುಗಳಲ್ಲಿ ಇಡಲ್ಪಟ್ಟುವು.

೧೫೩೯ ದೊಡ್ಡ ಧರ್ಮಮಠಗಳು ಮುರಿಯಲ್ಪಟ್ಟುವು.

೧೫೩೯ ಆರು ಕಲಮುಗಳ ಕಾಯ್ದೆ, ಧಾರ್ಮಿಕ ವಿಷಯದಲ್ಲಿ ಹಳೆಯ ಆಚಾರಗಳನ್ನು ಬಿಡಬಾರದೆಂದು ಹೆನ್ರಿಯ ನೀತಿ.

೧೫೩೯ ಪಾರ್ಲಿಮೆಂಟು ಹೆನ್ರಿಗೆ ಅನಿಯಂತ್ರಿತ ಸತ್ತೆಯನ್ನು ಕೊಟ್ಟಿದು. ಹೆನ್ರಿಯ ಪ್ರಕಟನೆಗಳಿಗೆ ಕಾಯ್ದೆಗಳಂತೆ ಮಹತ್ವವು.

## ಎಂಟನೆಯ ಹೆನ್ರಿಯ ಕಾಲದ ಪ್ರಸಿದ್ಧ ಪುರುಷರು.

ಥೌಮಸ ವೂಲ್ಸೆ (೧೪೭೧—೧೫೩೦):—ಚಾನ್ಸೆಲರನೂ ಹೆನ್ರಿಯ ಮುಖ್ಯ ಮಂತ್ರಿಯೂ (೧೫೧೪ರಿಂದ ೧೫೨೯). ವಿವಾಹವಿಚ್ಛೇದದ ಪ್ರಕರಣದಲ್ಲಿ ಇವನಿಂದ ಕಾಲಹರಣವಾದುದರಿಂದ ಹೆನ್ರಿ ಅವನನ್ನು ಕೆಲಸದಿಂದ ದೂರ ಮಾಡಿದನು. ಅವನ ಮೇಲೆ ರಾಜದ್ರೋಹದ ಆರೋಪವು. ದುಃಖ ಚಿಂತೆಗಳಿಂದ ಅವನು ಮಡಿದನು.

ಥೌಮಸ್ ಮೋರ್ (೧೪೮೦—೧೫೩೫):—ಚಾನ್ಸೆಲರನು (೧೫೩೦—೩೫). ವಿದ್ವಾಂಸನು, ವಾಙ್ಮಯಭಕ್ತನು, ರಾಜಕಾರಣ ಕುಶಲನು, ಅೌಕ್ಟ ಆೌಫ್ ಸುಪ್ರಿಮಸಿಯ ಕಾಯ್ದೆಯಂತೆ ಹೆನ್ರಿಯ ಧಾರ್ಮಿಕ ಶ್ರೇಷ್ಠತ್ವವನ್ನು ಅವನು ಮಾನ್ಯಮಾಡಲಿಲ್ಲವಾದುದರಿಂದ ಶೂಲಕ್ಕೇರಿಸಲ್ಪಟ್ಟನು.

ಥೌಮಸ್ ಕ್ರೌಮವೆಲ್ (೧೪೮೫—೧೫೪೦):—ಹೆನ್ರಿಯ ಮುಖ್ಯ ಮಂತ್ರಿ. ಧರ್ಮಸುಧಾರಣೆಯ ಆಂದೋಲನಕ್ಕೆ ಪ್ರೋತ್ಸಾಹನವನ್ನು ಕೊಟ್ಟನು (೧೫೩೦—೧೫೪೯). ರಾಜದ್ರೋಹದ ಆರೋಪದಿಂದ ಶೂಲಕ್ಕೇರಿಸಲ್ಪಟ್ಟನು.

ಥೌಮಸ್ ಕ್ರಾನ್ಮರ್ (೧೪೮೧—೧೫೫೬): ಕ್ಯಾಂಟರ್ಬರಿಯ ಆರ್ಚಬಿಶಪನು ಧರ್ಮಸುಧಾರಣೆಯ ಆಂದೋಲನಕ್ಕೆ ಪ್ರೋತ್ಸಾಹನವನ್ನು ಕೊಟ್ಟನು (೧೫೩೦—೧೫೪೭). ಕ್ಯಾಥರಿನ್ ಇವಳ ಘಟಸ್ಫೋಟಕ್ಕೆ ಅವನು ಹೆನ್ರಿಗೆ ಸಮ್ಮತಿಯನ್ನಿತ್ತನು.

ಧರ್ಮಸುಧಾರಣೆಯ ಆಂದೋಲನವು:—ಪೋಪನ ಮತ್ತು ಧರ್ಮಾಧಿಕಾರಿಗಳ ಆಚರಣವು ಬೈಬಲಿನ ವಿರುದ್ಧವಾಗಿದ್ದಿತು. ಅವರ ವಿಷಯದಲ್ಲಿ ಜನರಿಗೆ ಅನಾದರವು. ಧರ್ಮದ ವಿಷಯದಲ್ಲಿ ಪೋಪನ ಮಾತು ಪ್ರಮಾಣವಾಗಿರದೆ ಬೈಬಲ್ ಗ್ರಂಥವು ಪ್ರಮಾಣವು. ಟೆಟ್ಝೆಲನು ಜರ್ಮನಿಯಲ್ಲಿ ಮತ್ತು ಬೇರೆ ದೇಶಗಳಲ್ಲಿ ಪಾಪದಿಂದ ಮುಕ್ತಗೊಳಿಸುವ ಪತ್ರಿಕೆಗಳನ್ನು ಮಾರಲು ಒಯ್ದನು (೧೫೧೭). ಈ ಪತ್ರಿಕೆಗಳಿಗೆ ಮಾರ್ಟಿನ್ ಲೂಥರನ (೧೪೮೩—೧೫೪೬) ವಿರೋಧವು. ಪೋಪನ ಧಾರ್ಮಿಕ ಸತ್ತೆ ತನಗೆ ಮಾನ್ಯವಿಲ್ಲವೆಂದು ಅವನು ಸಾರಿದನು. ಇವನಂತೆಯೆ ಸ್ವಿಝರ್ಲಂಡಿನಲ್ಲಿ

ಝ್ವಿಂಗಲಿ (೧೪೮೪—೧೫೩೧) ಮತ್ತು ಕ್ಯಾಲ್ವಿನ್ (೧೫೦೯—೧೫೬೪) ಇವರು ಮತ್ತು ಸ್ಕಾಟಲಂಡಿನ ಕೆಲ್ವಿನನ ಅನುಯಾಯಿಯಾದ ಜಾನ್ ನಾಕ್ಸ್ ಇವನು ಮಾಡಿದರು. ಪೋಪನ ಧಾರ್ಮಿಕ ಸತ್ತೆ ಇವರೆಲ್ಲರಿಗೂ ಮಾನ್ಯವಿದ್ದಿಲ್ಲವಾದುದರಿಂದ ಇವರಿಗೆ ಪ್ರಾಟಿಸ್ಟಂಟ್ಸ (ಪೋಪನ ವಿರೋಧಕರು) ಎಂದು ಹೆಸರು ಬಂದಿತು.

ಕ್ರೈಸ್ತಧರ್ಮದಲ್ಲಿಯ ಪಂಥಗಳು:— (೧) ಪೋಪನ ಧಾರ್ಮಿಕ ಸತ್ತೆ ಮಾನ್ಯವಿದ್ದ ಜನರಿಗೆ ರೋಮನ್ ಕ್ಯಾಥಲಿಕ್, ಕ್ಯಾಥಲಿಕ್, ಪೇಪಿಸ್ಟ, ರೋಮ್ಯಾನಿಸ್ಟ ಎಂಬ ಹೆಸರುಗಳು ಉಂಟಾದುವು. ಅವರಲ್ಲಿ ಜೆಜುಯಿಟ್ ಎಂಬುದೊಂದು ಉಪಪಂಥವು ಹುಟ್ಟಿತು. (೨) ಪೋಪನ ಧಾರ್ಮಿಕ ಸತ್ತೆ ಮಾನ್ಯವಿಲ್ಲದ ಜನರಿಗೆ ಪ್ರಾಟಿಸ್ಟಂಟ್ಸ ಎಂದು ಹೆಸರು. ಅವರಲ್ಲಿ ಉಪಪಂಥಗಳು. ಮಾರ್ಟಿನ ಲೂಥರನು ಮುಂದಗಾಮಿ ಸುಧಾರಕನು. ಕ್ಯಾಲ್ವಿನ ಮತ್ತು ಝ್ವಿಂಗಲಿ ಇವರು ಶೀಘ್ರಗಾಮಿಗಳು. ಇವರ ಅನುಯಾಯಿಗಳಿಗೆ ಕ್ಯಾಲ್ವಿನಿಸ್ಟ, ಸ್ಕಾಟಲಂಡಿನಲ್ಲಿಯ ಅನುಯಾಯಿಗಳಿಗೆ ಪ್ರೆಸ್‌ಬಿಟೇರಿಯನ್ಸ್, ಫ್ರಾನ್ಸ ಮತ್ತು ಹಾಲಂಡ್ ಇವುಗಳಲ್ಲಿಯ ಅನುಯಾಯಿಗಳಿಗೆ ಹ್ಯುಗೆನಾಟ್ಸ ಮತ್ತು ಇಂಗ್ಲಂಡಿನಲ್ಲಿಯ ಅನುಯಾಯಿಗಳಿಗೆ ಪ್ಯೂರಿಟನ್ ಎಂದು ಹೆಸರುಗಳು. ಇಂಗ್ಲಂಡಿನಲ್ಲಿ ಇಂಗ್ಲಂಡಿನ ಅರಸನು ಧಾರ್ಮಿಕ ವಿಷಯದಲ್ಲಿ ಶ್ರೇಷ್ಠ ಅಧಿಕಾರಿ. ಎಲ್ಲ ಧಾರ್ಮಿಕ ಕಾರ್ಯಗಳು ಬಿಶಪರ ಮಧ್ಯಸ್ಥಿಕೆಯಿಂದ ನಡೆವ ವ್ಯವಸ್ಥೆ ಇದ್ದುದರಿಂದ ಅಲ್ಲಿಯ ಪಂಥಕ್ಕೆ ಎಪಿಸ್ಕೊಪೇಲಿಯನ್ ಪಂಥವೆಂದು ಹೆಸರು ಬಂದಿತು.

---

# ೪ನೆಯ ಪ್ರಕರಣವು

## ಆರನೆಯ ಎಡವರ್ಡನು

ಜನ್ಮವು ೧೫೩೭; ರಾಜ್ಯಾರೋಹಣವು (೧೦ನೆಯ ವರ್ಷದಲ್ಲಿ) ೧೫೪೭;
ಮೃತ್ಯು ೧೫೫೩.

೧೫೪೭—೧೫೫೩.

### ತತ್ಕಾಲೀನ ರಾಜ್ಯಕರ್ತರು.

| ಸ್ಕಾಟಲಂಡ | ಫ್ರಾನ್ಸ | ಸ್ಪೇನ ಮತ್ತು ಜರ್ಮನಿ |
|---|---|---|
| ಮೇರಿ ೧೫೪೨ರಿಂದ | ೨ನೆಯ ಹೆನ್ರಿ ೧೫೪೭ರಿಂದ | ೫ನೆಯ ಚಾರ್ಲ್‌ಸ್ |

### ಮಹತ್ವದ ಇಸ್ವಿಗಳು.

೧೫೪೭—೪೯ ಸಮರ್‌ಸೆಟಿನ ವರ್ಚಸ್ಸು.

೧೫೪೯ ಮೊದಲನೆಯ ಪ್ರಾರ್ಥನೆಯ ಪುಸ್ತಕವು ಚರ್ಚಿನಲ್ಲಿ ಪ್ರಾರಂಭವಾದುದು.

೧೫೫೨ ಎರಡನೆಯ ಪ್ರಾರ್ಥನೆಯ ಪುಸ್ತಕವು ಪ್ರಾರಂಭವಾದುದು.

**ಆರನೆಯ ಎಡವರ್ಡನು**—ಹೆನ್ರಿ ಮಡಿದ ಬಳಿಕ ಅವನ ಮಗನಾದ ಎಡವರ್ಡನು ತನ್ನ ವಯಸ್ಸಿನ ಹನ್ನೆರಡನೆಯ ವರ್ಷದಲ್ಲಿ ಪಟ್ಟಕ್ಕೆ ಬಂದನು. ಪಾರ್ಲಿಮೆಂಟು ೮ನೆಯ ಹೆನ್ರಿಗೆ ತನ್ನ ಮೃತ್ಯುಪತ್ರವನ್ನು ಮಾಡಲು ಅಧಿಕಾರವನ್ನು ಕೊಟ್ಟಿತ್ತು. ಅದರಂತೆ ಅವನು ಮರಣಸಮಯದಲ್ಲಿ ಮೃತ್ಯುಪತ್ರವನ್ನು ಮಾಡಿದನು. ಅದರಲ್ಲಿ ಅವನು ತನ್ನ ತರುವಾಯದಲ್ಲಿ ಎಡವರ್ಡನು ಪಟ್ಟಕ್ಕೆ ಬರಬೇಕೆಂದೂ, ಎಡವರ್ಡನು ನಿಪುತ್ರಿಕನಾಗಿ ಮಡಿದರೆ ಮೇರಿಗೆ ರಾಜ್ಯಪದವು ಬರಬೇಕೆಂದೂ, ಅವಳ ವಂಶಜರಾರೂ ಉಳಿಯದಿದ್ದರೆ ಎಲಿಝಬೆಥ್ ಇವಳಿಗೆ ಪಟ್ಟವು ದೊರೆಯಬೇಕೆಂದೂ ಯೋಜನೆಯನ್ನು ಮಾಡಿದ್ದನು. ಎಡವರ್ಡನಿಗೆ ಚಿಕ್ಕವನಿರುವಾಗಲೆ ರಾಜ್ಯಪದವು ಬಂದರೆ ಅವನಿಗೆ ಆಲೋಚನೆ ಹೇಳಲು ಒಂದು ಮಂಡಳವನ್ನು ಹೆನ್ರಿ ನಿಯೋಜಿಸಿದ್ದನು. ಈ ಮಂಡಳದಲ್ಲಿ ಪ್ರಾಟೆಸ್ಟಂಟ್ ಮತ್ತು ರೋಮನ್ ಕ್ಯಾಥಲಿಕ್ ಈ ಎರಡೂ ಪಂಥಗಳ ಜನರಿದ್ದರು. ಎಡವರ್ಡ ರಾಜನ ಸೋದರಮಾವನಾದ ಎಡವರ್ಡ ಸೀಮೋರ ಎಂಬವನು (ಡ್ಯೂಕ್ ಆಫ್

**ಸಮರಸೆಟ್**) ಈ ಮಂಡಳದ ಒಬ್ಬ ಸದಸ್ಯನಾಗಿದ್ದನು. ಅವನು ಪ್ರಾಟೆಸ್ಟಂಟ ಪಂಥದವನು. ಬಾಲರಾಜನಾದ ಎಡವರ್ಡನು ಅವನ ತಂತ್ರದಂತೆಯೇ ನಡೆಯಲಾರಂಭಿಸಿದನು. ಸೀಮೋರನು ಮೆಲ್ಲಮೆಲ್ಲನೆ ಮಂಡಳದಲ್ಲಿಯ ಎಲ್ಲ ಸಭಾಸದರ ಮನವನ್ನೊಲಿಸಿ ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡನು; ಮತ್ತು ತಾನು **ರಾಜಪಾಲಕನೂ ರಾಷ್ಟ್ರರಕ್ಷಕನೂ** (Regent and Lord Protector of the Realm) ಎಂಬ ಬಿರುದನ್ನು ಧರಿಸಿದನು.

## ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ

**ಧಾರ್ಮಿಕ ಸ್ಥಿತಿ**—ಈ ಸಮಯದಲ್ಲಿ ಇಂಗ್ಲಿಶ್ ಜನತೆಯಲ್ಲಿ ಎರಡು ಧಾರ್ಮಿಕ ಪಕ್ಷಗಳು ಉಂಟಾಗಿ ಮತಭೇದವು ಹೆಚ್ಚು ಹೆಚ್ಚು ತೀವ್ರವಾಗತೊಡಗಿತು. ಶೀಘ್ರಗಾಮಿಗಳಾದ ಪ್ರಾಟೆಸ್ಟಂಟ ಪಂಥದವರಿಗೆ ಹೆನ್ರಿಯಿಂದ ಮಾಡಲ್ಪಟ್ಟ ಸುಧಾರಣೆಗಳು ಅಪೂರ್ಣವಾದುವೆಂದು ತೋರಿದುದರಿಂದ ಇನ್ನೂ ಹೆಚ್ಚಿನ ಸುಧಾರಣೆಗಳಾಗಬೇಕೆಂದು ಅವರು ಬಯಸಿದರು. ಆದರೆ ರೋಮನ್ ಕ್ಯಾಥಲಿಕ್ ಜನರಿಗೆ ಆದ ಸುಧಾರಣೆಗಳೇ ಹೆಚ್ಚಾದುವೆಂದು ತೋರಿದುದರಿಂದ ಅವುಗಳಲ್ಲಿ ಕೆಲವನ್ನಾದರೂ ಹೇಗೆ ಹೋಗಿಸಬೇಕೆಂಬ ವಿಚಾರದಲ್ಲಿ ಅವರು ತೊಡಗಿದರು. ಇಂಗ್ಲಂಡಿನಲ್ಲಿಯ ಉತ್ತರ ಮತ್ತು ಪಶ್ಚಿಮ ಭಾಗಗಳ ಜನರು ರೋಮನ್ ಕ್ಯಾಥಲಿಕ್ ಪಂಥದ ಮತ್ತು ಪೂರ್ವಪರಂಪರೆಯ ಅಭಿಮಾನಿಗಳಾಗಿದ್ದರು. ಆದರೆ ಪೂರ್ವ ಮತ್ತು ದಕ್ಷಿಣ ಭಾಗಗಳ ಜನರ ಒಲವು ಸುಧಾರಣೆಯ ಕಡೆಗಿದ್ದಿತು.

**ಬೇಲಿಗಳು** (Enclosures)—೧೬ನೆಯ ಶತಕದಲ್ಲಿ ಇಂಗ್ಲಂಡಿನ ಉಣ್ಣೆಗೆ ಇಂಗ್ಲಂಡಿನ ಮತ್ತು ಪರದೇಶಗಳ ಬೇಡಿಕೆಯಿದ್ದಿತಾದುದರಿಂದ ಅದಕ್ಕೆ ಬೆಲೆ ಬಹಳವಾಗಿ ಬರುತ್ತಿತ್ತು, ಮತ್ತು ಆ ಮಾನದಿಂದ ಧಾನ್ಯಕ್ಕೆ ಬೆಲೆ ಬರುತ್ತಿರಲಿಲ್ಲ. ಆದುದರಿಂದ ಹೊಲಗಳಲ್ಲಿ ಕುರಿಹಿಂಡುಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವುದು ಹೆಚ್ಚು ಲಾಭದಾಯಕವಾಗಿ ತೋರಿದುದರಿಂದ ಚಿಕ್ಕ ದೊಡ್ಡ ಜಮಿಾನದಾರರು ಅತ್ತಕಡೆಗೆ ಲಕ್ಷ್ಯವಿತ್ತರು. ಕೆಲವರು ತಮ್ಮ ಭೂಮಿಗಳಲ್ಲಿ ಒಕ್ಕಲತನವನ್ನು ಮಾಡಿಕೊಂಡಿದ್ದ ರೈತರನ್ನು ಹೊರಗಟ್ಟಿ ಆ ಭೂಮಿಗಳ ಸುತ್ತಲು ಬೇಲಿಗಳನ್ನು ಕಟ್ಟಿ ಅಲ್ಲಿ ಕುರಿಹಿಂಡುಗಳನ್ನು ಮೇಯಲು ಬಿಟ್ಟರು. ಹಳ್ಳಿಪಳ್ಳಿಗಳಿಗೆ ಹತ್ತಿಕೊಂಡಿರುವ ಕೆಲವು ಭೂಮಿಗಳು ಪಡಭೂಮಿಗಳಾಗಿದ್ದುವು ಮತ್ತು

ಕೆಲವು ಅಡವಿಗಳಾಗಿದ್ದುವು. ಇವೆಲ್ಲವೂ ಸಾರ್ವಜನಿಕವಾಗಿ ತಿಳಿಯಲ್ಪಡುತ್ತಿದ್ದುವು. ಎಷ್ಟೋ ಒಕ್ಕಲಿಗರು ಅಲ್ಲಿಯ ಗಿಡಗಂಟಿಗಳನ್ನು ಉರುವಲಿಗೋಸುಗ ಒಯ್ಯುತ್ತಿದ್ದರು, ಮತ್ತು ಅಲ್ಲಿ ತಮ್ಮ ದನಕರುಗಳನ್ನು ಮೇಯಿಸುತ್ತಿದ್ದರು. ಆದರೆ ದೊಡ್ಡ ದೊಡ್ಡ ಜಮಿಾನದಾರರು ತಮ್ಮ ಕುರಿಹಿಂಡುಗಳನ್ನು ಮೇಯಿಸಲು ಈ ಭೂಮಿಗಳನ್ನು ತಮ್ಮ ವಶದಲ್ಲಿ ತೆಗೆದುಕೊಂಡು ಅವುಗಳ ಸುತ್ತಲು ಬೇಲಿ ಕಟ್ಟಲು ಆರಂಭಿಸಿದರು. ಇದರಿಂದ ಒಕ್ಕಲಿಗರು ನಿರಾಶ್ರಿತರಾಗಿ ಕೆಲಸವಿಲ್ಲದೆ ಉಳಿಯಬೇಕಾದುದರಿಂದ ಭಿಕ್ಷುಕರ ಸಂಖ್ಯೆ ಬೆಳೆಯತೊಡಗಿತು. ಮೊದಲು ಧರ್ಮಮಠಗಳಲ್ಲಿ ನಿರಾಶ್ರಿತರಿಗೂ ಬಡವರಿಗೂ ಸ್ವಲ್ಪ ಸಾಹಾಯ್ಯವು ದೊರೆಯುತ್ತಿತ್ತು. ಆದರೆ ಧರ್ಮಮಠಗಳು ಜಪ್ತ ಮಾಡಲ್ಪಟ್ಟುದರಿಂದ ಈ ಸಾಹಾಯ್ಯವೂ ಇಲ್ಲದಂತಾಯಿತು. ಹೀಗೆ ಜನತೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ ಬಿಕ್ಕಟ್ಟಿನದಾಯ್ತು. (೨ನೆಯ ಪರಿಶಿಷ್ಟದಲ್ಲಿಯ ತತ್ಕಾಲೀನ ಅವತರಣಿಕೆಗಳನ್ನು ನೋಡಿರಿ.)

**ಸ್ಕಾಟಲಂಡಿನೊಡನೆ ಯುದ್ಧವು**–ಸ್ಕಾಟಲಂಡಿನೊಡನೆ ಒಪ್ಪಂದವಾಗಿ ಸ್ಕಾಟಲಂಡಿನ ರಾಜಕನ್ಯೆಯಾದ* ಮೇರಿಯ ಲಗ್ನವು ಇಂಗ್ಲಂಡಿನ ರಾಜಪುತ್ರನಾದ ಎಡವರ್ಡನೊಡನೆ ಆಗಬೇಕೆಂದು ನಿಶ್ಚಯಿಸಲ್ಪಟ್ಟಿತ್ತು. ಈ ಲಗ್ನವನ್ನು ನೆರವೇರಿಸಿ ಇಂಗ್ಲಂಡ್ ಮತ್ತು ಸ್ಕಾಟಲಂಡ್ ಈ ಎರಡು ರಾಜ್ಯಗಳನ್ನು ಒಂದು ಮಾಡಬೇಕೆಂದು ಸಮರಸೆಟನು ಹವಣಿಸಿದನು. ಆಗ ಸ್ಕಾಟಲಂಡಿನಲ್ಲಿ ಕ್ಯಾಥಲಿಕ್ ಮತ್ತು ಪ್ರಾಟೆಸ್ಟಂಟ ಈ ಎರಡು ಪಕ್ಷಗಳಿದ್ದುವು. ಅವುಗಳಲ್ಲಿ ಕ್ಯಾಥಲಿಕ್ ಪಕ್ಷವು ಪ್ರಬಲವಾಗಿತ್ತು. ಕ್ಯಾಥಲಿಕ್ ಪಕ್ಷದವರ ಒಲವು ಫ್ರಾನ್ಸಿನ ಕಡೆಗಿದ್ದಿತು. ಮತ್ತು ಎಡವರ್ಡ ಮತ್ತು ಮೇರಿ ಇವರ ಲಗ್ನವು ಅವರಿಗೆ ಇಷ್ಟವಿರಲಿಲ್ಲ. ಸ್ಕಾಟಲಂಡಿನಲ್ಲಿ ಪರಿಸ್ಥಿತಿ ಇಂತಿರಲು, ಸಮರಸೆಟನು ತನಗೆ ಅನುಕೂಲವಾದ ಪರಿಸ್ಥಿತಿ ಉಂಟಾಗುವ ವರೆಗೆ ಶಾಂತನಾಗಿದ್ದುಕೊಂಡಿರುವುದನ್ನು ಬಿಟ್ಟು, ಈ ವಿವಾಹಕ್ಕೆ ಸ್ಕಾಟಿಶ್ ಜನರು ಸಿದ್ಧರಿಲ್ಲದುದನ್ನು ನೋಡಿ ದೊಡ್ಡ ಸೈನ್ಯದೊಡನೆ ಸ್ಕಾಟಲಂಡಿನ ಮೇಲೆ ಸಾಗಿಹೋದನು, ಮತ್ತು ಎಡಿನ್‌ಬರೊ ಪಟ್ಟಣದ ಬಳಿಯಲ್ಲಿ ಪಿಂಕಿ ಎಂಬಲ್ಲಿ ಅವನು ಸ್ಕಾಟಿಶ್ ಸೈನ್ಯವನ್ನು ಸೋಲಿಸಿದನು (೧೫೪೭). ಈ ಯುದ್ಧದಲ್ಲಿ ಸಮರಸೆಟನಿಗೆ ಜಯವು ದೊರೆತುದಾದರೂ ಅವನ ಉದ್ದೇಶವು ಕೈಗೂಡಲಿಲ್ಲ. ಸ್ಕಾಟಲಂಡಿನಲ್ಲಿಯ ಕ್ಯಾಥಲಿಕ ಪಕ್ಷದವರು ತಮ್ಮ ರಾಜ

---

* ಏಳನೆಯ ಹೆನ್ರಿಯ ಮಗಳಾದ ಮಾರ್ಗಾರೆಟ್ ಇವಳ ಮೊಮ್ಮಗಳು.

ಕನ್ಯೆಯಾದ ಮೇರಿಯನ್ನು ಫ್ರಾನ್ಸಿಗೆ ಕಳಿಹಿ ಅಲ್ಲಿಯ ರಾಜಪುತ್ರನಾದ ಫ್ರಾನ್ಸಿಸ **ನೊಡನೆ** ಅವಳ ಮದುವೆಯನ್ನು ನೆರವೇರಿಸಿದನು.

**ಸಮರಸೆಟನ ಧಾರ್ಮಿಕ ನೀತಿ**—ಧಾರ್ಮಿಕ ವಿಷಯದಲ್ಲಿಯೂ ಸಮರಸೆಟನಿಗೆ ತಾಳ್ಮೆಯಿರಲಿಲ್ಲ. ಇಂಗ್ಲಂಡಿನಲ್ಲಿಯ ಲೋಕಮತವು ಧರ್ಮ ಸುಧಾರಣೆಗೆ ಅನುಕೂಲವಿದೆಂದು ಬಗೆದು ೧೫೩೯ರಲ್ಲಿ ಪಾಸಾದ ಆರು ಕಲಮು ಗಳ ಕಾಯ್ದೆಯನ್ನು ರದ್ದುಗೊಳಿಸಿ ಚರ್ಚುಗಳಲ್ಲಿ ಲ್ಯಾಟಿನ್ ಭಾಷೆಯಲ್ಲಿ ಪ್ರಾರ್ಥನೆಮಾಡುವ ಪದ್ಧತಿಯನ್ನು ತಡೆದನು. ಅನಂತರದಲ್ಲಿ ಅವನು ೪೨ ಕಲಮು ಗಳ **ಹೊಸ ಪ್ರಾರ್ಥನೆಯ ಪುಸ್ತಕವನ್ನು** ಸಿದ್ಧಗೊಳಿಸಿ ಅದು ಎಲ್ಲ ಚರ್ಚುಗಳಲ್ಲಿ ಉಪಯೋಗಿಸಲ್ಪಡಬೇಕೆಂದು ಕಾಯ್ದೆಯನ್ನು ಮಾಡಿಸಿದನು (೧೫೪೯). ಈ ಕಾಯ್ದೆಗೆ **ಅಕ್ಟ ಆಫ್ ಯುನಿಫಾರ್ಮಿಟಿ** (Act of Uniformity) ಎಂದು ಹೆಸರು. ಚರ್ಚುಗಳಲ್ಲಿ ಸಾಧುಸಂತರ ಮೂರ್ತಿಗಳೂ ಕಥಾಭಾಗಗಳನ್ನು ವ್ಯಕ್ತಗೊಳಿಸುವ ಚಿತ್ರಗಳೂ ಇಡಲ್ಪಡುತ್ತಿದ್ದುವು. ಅವು ಗಳನ್ನು ಇನ್ನು ಇಡಕೂಡದೆಂದು ಅವನು ಆಜ್ಞೆಮಾಡಿದನು. ಆದರೆ ಈ ಮೂರ್ತಿ ಗಳೂ ಚಿತ್ರಗಳೂ ಶಿಲ್ಪಕಲೆಯ ಮತ್ತು ಚಿತ್ರಕಲೆಯ ಅಪ್ರತಿಮವಾದ ಉದಾಹರಣೆ ಗಳಾದುದರಿಂದ ಅವನ್ನು ಚರ್ಚುಗಳಿಂದ ಹೊರದೂಡುವುದು ಜನರಿಗೆ ಸರಿದೋರ ಲಿಲ್ಲ. ಸಮರಸೆಟನು ಸ್ವಭಾವದಿಂದ ಸ್ವಾರ್ಥಿಯೂ ಲೋಭಿಯೂ ಆಗಿದ್ದನು. ಅವನು ಚರ್ಚುಗಳ ವಶದಲ್ಲಿಯ ಕೆಲವು ಭೂಮಿ ಮೊದಲಾದುವನ್ನು ಜಪ್ತುಮಾಡಿ ತನಗೋಸುಗ ಲಂಡನಿನಲ್ಲಿ ದೊಡ್ಡದೊಂದು ಪ್ರಾಸಾದವನ್ನು ಕಟ್ಟಿಸಿಕೊಂಡನು. ಸಮರಸೆಟನ ಈ ಎಲ್ಲ ಕೃತಿಗಳಿಂದ ಜನರಲ್ಲಿ ಅವನ ವಿಷಯದಲ್ಲಿ ತಿರಸ್ಕಾರವು ಹುಟ್ಟಿತು. ಅದರಂತೆಯೆ ನಿರುದ್ಯೋಗಿತೆಯೂ ತಿರಿಕತನವೂ ಬೆಳೆದುದರಿಂದ ಜನರಲ್ಲಿ ತೀವ್ರವಾದ ಅಸಂತೋಷವು ಹಬ್ಬಿತು. ಆದುದರಿಂದ ರಾಜ್ಯದಲ್ಲಿ ಒಳಸಂಚುಗಳೂ ಬಂಡುಗಳೂ ಆಗತೊಡಗಿದುವು.

**ಒಳಸಂಚುಗಳೂ ಬಂಡುಗಳೂ**—ಸಮರಸೆಟನ ಬಂಧುವಾದ **ಲಾರ್ಡ ಥಾಮಸ್ ಸೀಮೋರ** ಇವನು ಎಂಟನೆಯ ಹೆನ್ರಿಯ ವಿಧವೆಯಾದ ಕ್ಯಾಥ ರಾಯಿನ್ ಪಾರ ಇವಳನ್ನು ಲಗ್ನವಾಗಿದ್ದನು. ಅವನು ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳಲು ಬಂಡನ್ನು ಹೂಡಿದನು. ಮದ್ದು ಗುಂಡುಗಳನ್ನು ಸಂಗ್ರಹಿಸಿ ತನ್ನ ಕೋಟೆಯನ್ನು ಅವನು ಭದ್ರಗೊಳಿಸಿದನು. ಥಾಮಸ್ ಸೀಮೋ ರನು ಬಂಡನ್ನು ಹೂಡಿದ ಬಳಿಕ ಸಮರಸೆಟನು ಅವನನ್ನು ಹಿಡಿಯಿಸಿ ಶೂಲಕ್ಕೇರಿ ಸಿದನು. ಆದರೆ ಇಷ್ಟರಿಂದ ಬಂಡಿನ ಬೇಗೆ ಆರಲಿಲ್ಲ. ಇಂಗ್ಲಂಡಿನ ಪಶ್ಚಿಮ

ಭಾಗದಲ್ಲಿ ಡೆವಾನ್‌ಶಾಯರ ಮತ್ತು ಕಾರ್ನನಾಲ್ ಎಂಬ ಪರಗಣೆಗಳಲ್ಲಿಯ ಜನರು ಬಂಡನ್ನು ಹೂಡಿದರು. ಅಲ್ಲಿಯ ಜನರು ಕ್ಯಾಥಲಿಕ್ ಪಂಥದವರಿದ್ದುದರಿಂದ ೧೫೪೯ರಲ್ಲಿ ಪ್ರಚಾರದಲ್ಲಿ ತರಲ್ಪಟ್ಟ ಪ್ರಾರ್ಥನೆಯ ಪುಸ್ತಕವು ಅವರಿಗೆ ಸ್ವಲ್ಪವೂ ಸಮ್ಮತವಿರಲಿಲ್ಲ. ಪೂರ್ವಭಾಗದಲ್ಲಿಯ ನಾರಫಾಕ ಪರಗಣೆಯಲ್ಲಿ ನಿರುದ್ಯೋಗಿತೆಗೆ ಗುರಿಯಾದ ಜನರೂ ಭೂಮಿಗಳಿಂದ ಹೊರದೂಡಲ್ಪಟ್ಟ ರೈತರೂ ಬಂಡುಮಾಡಲು ಪ್ರವೃತ್ತರಾದರು. ಉಗ್ರವಾದ ಉಪಾಯಗಳಿಂದ ಈ ಬಂಡುಗಳನ್ನು ಮುರಿಯಲು ಸೈನ್ಯಗಳು ಕಳಿಸಲ್ಪಟ್ಟುವು.

ರಾಷ್ಟ್ರದಲ್ಲಿ ಎಲ್ಲೆಲ್ಲಿಯೂ ಅವ್ಯವಸ್ಥೆಯೂ ಅಸಂತೋಷವೂ ಉಂಟಾಗಿ ಬಂಡುಗಳು ಹುಟ್ಟಿದುದರಿಂದ ಸಮರಸೆಟನ ಅಪಾತ್ರತೆ ಸ್ಪಷ್ಟವಾಗಿ ವ್ಯಕ್ತವಾಯ್ತು. ಇದಲ್ಲದೆ ಸಮರಸೆಟನ ವರ್ಚಸ್ಸು ಮಂತ್ರಿಮಂಡಳದಲ್ಲಿಯ ಅನೇಕ ಸದಸ್ಯರಿಗೆ ಸೇರದಾದುದರಿಂದ ಅವರು ಅವನ ಕೈಯೊಳಗಿಂದ ಸತ್ತೆಯನ್ನು ತೆಗೆದುಕೊಳ್ಳಲು ಇದು ಯೋಗ್ಯ ಸಂಧಿಯೆಂದು ಬಗೆದು ಅವನ ವಿರುದ್ಧವಾಗಿ ಪ್ರಯತ್ನಿಸತೊಡಗಿದರು. **ಡಡ್ಲೆ (ವಾರವಿಕದ ಅರ್ಲನು)** ಅವರಲ್ಲಿ ಪ್ರಮುಖನಾಗಿದ್ದನು. ಕೊನೆಗೆ ಅವರ ಪ್ರಯತ್ನಕ್ಕೆ ಯಶಸ್ಸು ದೊರೆತಿತು. ಅವರು ಸಮರಸೆಟನನ್ನು ರಾಜಪಾಲಕ ಅಧಿಕಾರದಿಂದ ದೂರಮಾಡಿದರು (೧೫೪೯). ಆ ಬಳಿಕ ರಾಜದ್ರೋಹದ ಆರೋಪವು ಅವನ ಮೇಲೆ ಹೊರಿಸಲ್ಪಟ್ಟಿತು. ಆರೋಪವು ಸಿದ್ಧವಾಗಿ ಅವನು ಶೂಲಕ್ಕೇರಿಸಲ್ಪಟ್ಟನು (೧೫೫೨).

**ನಾರ್ದಂಬರ್ಲಂಡನ ರಾಜ್ಯಕಾರಭಾರವು** (೧೫೫೦—೧೫೫೩)—ಸಮರಸೆಟನ ತರುವಾಯದಲ್ಲಿ **ಜಾನ್ ಡಡ್ಲೆ ಅರ್ಲ ಆಫ್ ವಾರವಿಕ್** ಇವನ ಕೈಯಲ್ಲಿ ಎಲ್ಲ ಸತ್ತೆ ಹೋಯ್ತು. **ಅವನು ಡ್ಯೂಕ್ ಆಫ್ ನಾರ್ದಂಬರ್ ಲಂಡ್** ಎಂಬ ಬಿರುದನ್ನು ತಳೆದನು. ಡಡ್ಲೆ ಪಾತಾಳಯಂತ್ರಿಯೂ ಸ್ವಾರ್ಥಸಾಧುವೂ ಆಗಿದ್ದು ರಾಷ್ಟ್ರಹಿತಕ್ಕಿಂತ ತನ್ನ ಹಿತವನ್ನು ಸಾಧಿಸುವುದೇ ಆತನ ಗುರಿಯಾಗಿತ್ತು. ಅವನು ಪ್ರಾಟೆಸ್ಟಂಟ ಪಂಥದವನು. ತನ್ನ ಕೈಯಲ್ಲಿ ಸತ್ತೆ ಬಂದೊಡನೆ ರೋಮನ್ ಕ್ಯಾಥಲಿಕ ಪಂಥದ ಬಿಶಪರನ್ನು ದೂರಮಾಡಿ ಪ್ರಾಟೆಸ್ಟಂಟ ಪಂಥದ ಬಿಶಪರನ್ನು ನಿಯೋಜಿಸಿದನು. ಅವರಲ್ಲಿ **ಲ್ಯಾಟಿಮರ್** ಮತ್ತು **ರಿಡ್ಲೆ** ಎಂಬವರು ಪ್ರಮುಖರು. ಇದಾದಬಳಿಕ ಡಡ್ಲೆ ಪ್ರಾಟೆಸ್ಟಂಟ ಪಂಥದವರಿಗೆ ಸಂಪೂರ್ಣವಾಗಿ ಸಮ್ಮತವಾಗಬಹುದಾದ **ಎರಡನೆಯ ಪ್ರಾರ್ಥನೆಯ ಪುಸ್ತಕವನ್ನು** ಸಿದ್ಧಗೊಳಿಸಿ ಎಲ್ಲ ಚರ್ಚುಗಳಲ್ಲಿಯೂ ಅದನ್ನು ಉಪಯೋಗಿಸಬೇಕೆಂದು ಆಜ್ಞೆಯಿತ್ತನು (೧೫೫೨). ಅವನು ತನ್ನ ಮಗನಾದ **ಗಿಲಫರ್ಡ**

ಡಡ್ಲೆ ಇವನ ಲಗ್ನವನ್ನು **ಲೇಡಿ ಜೇನ್ ಗ್ರೇ*** ಎಂಬ ರಾಜಕನ್ಯೆಯೊಡನೆ ಮಾಡಿದನು. ಜೇನ್ ಗ್ರೇ ಇವಳು ಎಂಟನೆಯ ಹೆನ್ರಿಯ ತಂಗಿಯಾದ **ಮೇರಿ** ಎಂಬವಳ ಮೊಮ್ಮಗಳು. ಅವಳಿಗೆ ಇಂಗ್ಲಂಡಿನ ಪಟ್ಟವನ್ನು ದೊರಕಿಸಿಕೊಡಲು ಅವನು ಪ್ರಯತ್ನವನ್ನು ಪ್ರಾರಂಭಿಸಿದನು. ಎಂಟನೆಯ ಹೆನ್ರಿಯ ಮೃತ್ಯುಪತ್ರ ದಂತೆ ಎಡವರ್ಡನು ನಿಪುತ್ರಿಕನಾಗಿ ಮಡಿದರೆ ಅವನ ತರುವಾಯದಲ್ಲಿ ಮೇರಿ ಮತ್ತು ಎಲಿಝಾಬೆಥ್ ಇವರು ಅನುಕ್ರಮವಾಗಿ ಇಂಗ್ಲಂಡಿನ ಪಟ್ಟಕ್ಕೆ ಬರ ಬೇಕೆಂದು ವ್ಯವಸ್ಥೆಯಿದ್ದಿತು. ಆದರೆ ಅವರ ಅಧಿಕಾರವನ್ನು ಹಾರಿಸಲೋಸುಗ ಅವನು ಆರನೆಯ ಎಡವರ್ಡನಿಂದ ತನ್ನ ತರುವಾಯದಲ್ಲಿ ಲೇಡಿ ಜೇನ್ ಗ್ರೇ ಇವಳು ಪಟ್ಟಕ್ಕೆ ಬರಬೇಕೆಂದು ಮೃತ್ಯುಪತ್ರವನ್ನು ಮಾಡಿಸಲು ಪ್ರಯತ್ನವನ್ನು ಆರಂಭಿಸಿದನು. ತನ್ನ ತರುವಾಯದಲ್ಲಿ ಮೇರಿ ಪಟ್ಟಕ್ಕೆ ಬಂದರೆ ಅವಳ ಆಳ್ಕೆಯಲ್ಲಿ ಪ್ರಾಟೆಸ್ಟಂಟ ಪಂಥವು ನಾಮಶೇಷವಾಗಿ ಉಳಿದು ಇಂಗ್ಲಂಡಿನಲ್ಲಿ ರೋಮನ್ ಕ್ಯಾಥಲಿಕ ಪಂಥದ ಪ್ರಾಬಲ್ಯವಾಗುವುದೆಂಬ ಭೀತಿ ಎಡವರ್ಡನಿಗೆ ಇದ್ದಿತು, ಆದುದರಿಂದ ಅವನು ನಾರ್ದಂಬರ್ಲಂಡನ ಸೂಚನೆಯಂತೆ ಆ ಬಗೆಯ ಮೃತ್ಯು ಪತ್ರವನ್ನು ಮಾಡಿದನು.

**ಆರನೆಯ ಎಡವರ್ಡನ ಮೃತ್ಯು**—ಎಡವರ್ಡನು ಅಶಕ್ತ ಪ್ರಕೃತಿಯ ವನೂ ದುರ್ಬಲನೂ ಆಗಿದ್ದನು. ಅವನು ಕ್ಷಯದ ಬೇನೆಯಿಂದ ೧೫೫೩ರಲ್ಲಿ ಮಡಿದನು. ಎಡವರ್ಡನು ಮಡಿದ ಬಳಿಕ ನಾರ್ದಂಬರ್ಲಂಡನು ತನ್ನ ಸೊಸೆ ಯಾದ **ಜೇನ್ ಗ್ರೇ** ಇವಳು ಎಡವರ್ಡನ ಮೃತ್ಯುಪತ್ರದಂತೆ ಇಂಗ್ಲಂಡಿನ



ರಾಣಿಯಾಗಿರುವಳೆಂದು ಪ್ರಕಟಗೊಳಿಸಿದನು. ಜೇನ್ ಗ್ರೇ ಇವಳು ಸರಲ ಮತ್ತು ಮಧುರ ಸ್ವಭಾವದವಳಿದ್ದುದರಿಂದ ಅವಳ ವಿಷಯದಲ್ಲಿ ಎಲ್ಲರು ಆದರವುಳ್ಳವರಾಗಿದ್ದರು; ಆದರೆ ಮೇರಿ ಮತ್ತು ಎಲಿಝಾಬೆಥ ಇವರ ಅಧಿಕಾರವನ್ನು ಮುಳುಗಿಸಿ ಅವಳು ರಾಜ್ಯಮಾಡುವುದು ಯಾರಿಗೂ ಇಷ್ಟವಾಗಿರಲಿಲ್ಲ. ಇತ್ತ ಮೇರಿಯನ್ನು ಹಿಡಿದು ತರಲು ನಾರ್ದಂಬರ್ಲಂಡನು ತನ್ನ ಮಗನನ್ನು ಕಳಿಹಿದನು. ಆದರೆ ಮೇರಿಗೆ ಈ ಸುದ್ದಿ ಗೊತ್ತಾದೊಡನೆ ಅವಳು ಇಂಗ್ಲಂಡಿನ ಪೂರ್ವಭಾಗದಲ್ಲಿ ಹೋದಳು. ಅಲ್ಲಿಯ ಜನರು ಪ್ರಾಟೆಸ್ಟಂಟ ಮತದವರಾಗಿದ್ದರೂ ಮೇರಿ ಇಂಗ್ಲಂಡಿನ ಪಟ್ಟಕ್ಕೆ ನಿಜವಾದ ಅಧಿಕಾರಿಣಿಯಾಗಿದ್ದುದರಿಂದ ಅವಳಿಗೆ ಸಾಹಾಯ್ಯವೀಯಲು ನಿಶ್ಚಯಿಸಿ ನಾರ್ದಂಬರ್ಲಂಡನ ವಿರುದ್ಧವಾಗಿ ಶಸ್ತ್ರವೆತ್ತಿದರು. ಇತ್ತ ನಾರ್ದಂಬರ್ಲಂಡನ ಸೈನ್ಯದವರೂ ಅವನ ವಿರುದ್ಧವಾಗಿ ಬಂಡನ್ನು ಹೂಡಿದರು. ಹಡಗುಪಡೆಯ ಸೈನ್ಯದವರೂ ಮೇರಿಯ ಪಕ್ಷವನ್ನೆ ವಹಿಸಿದರು. ಮಂತ್ರಿಮಂಡಳದಲ್ಲಿಯ ಬಹುಶಃ ಎಲ್ಲ ಸಭಾಸದರೂ ಮೇರಿಯ ಪಕ್ಷವನ್ನೇ ಸ್ವೀಕರಿಸಿದರು. ಇದರಿಂದ ನಾರ್ದಂಬರ್ಲಂಡನ ಸ್ಥಿತಿ ಬಹು ವಿಚಿತ್ರವಾಯ್ತು. ತನಗೆ ಯಾರ ಬೆಂಬಲವೂ ಇಲ್ಲದುದನ್ನು ನೋಡಿ ಕೊನೆಯ ಉಪಾಯವೆಂದು ಅವನು ತನ್ನ ಸ್ವಲ್ಪ ಸೈನ್ಯದೊಡನೆ ಕೆಂಬ್ರಿಜ ಪಟ್ಟಣವನ್ನು ಮುತ್ತಲು ನಡೆದನು. ಆದರೆ ಈ ಕಾರ್ಯದಲ್ಲಿ ಅವನಿಗೆ ಯಶವು ದೊರೆಯಲಿಲ್ಲ. ಮೇರಿಯ ಪಕ್ಷವನ್ನು ವಹಿಸಿ ಯುದ್ಧಮಾಡುತ್ತಿದ್ದ ಅರ್ಲ ಆಫ್ ಅರುಂಡೇಲ್ ಎಂಬ ಸರದಾರನಿಗೆ ಅವನು ಶರಣುಹೊಗಬೇಕಾಯ್ತು. ಆ ಬಳಿಕ ಅವನು ಲಂಡನಿಗೆ ತರಲ್ಪಟ್ಟನು. ಅಲ್ಲಿ ಅವನ ಮೇಲೆ ರಾಜದ್ರೋಹದ ಆರೋಪವು ಸಿದ್ಧವಾಗಿ ಅವನಿಗೆ ಮರಣಶಿಕ್ಷೆ ವಿಧಿಸಲ್ಪಟ್ಟಿತು. ಆಗ ಅವನು ತನಗೆ ಜೀವದಾನವು ದೊರೆಯಬೇಕೆಂದು ತಾನು ಕ್ಯಾಥಲಿಕ ಪಂಥದ ಅನುಯಾಯಿಯಾಗಿರುವೆನೆಂದೂ ಆ ಪಂಥದ ಎಲ್ಲ ಆಚಾರಗಳನ್ನು ಪಾಲಿಸಲು ಸಿದ್ಧನಿರುವೆನೆಂದೂ ಹೇಳಿದನು. ಆದರೆ ಅವನ ಈ ಕೃತಿಯಿಂದ ಅವನ ಅಪ್ರಾಮಾಣಿಕತೆ ಮಾತ್ರ ವ್ಯಕ್ತವಾಯ್ತು. ೧೫೫೩ರಲ್ಲಿ ಅವನು ಶೂಲಕ್ಕೇರಿಸಲ್ಪಟ್ಟನು, ಮತ್ತು ಲೇಡಿ ಜೇನ್ ಗ್ರೇ ಇವಳೂ ಅವಳ ಗಂಡನಾದ ಗಿಲ್ಫರ್ಡ ಡಡ್ಲೆಯೂ ಕಾರಾಗೃಹದಲ್ಲಿ ಇಡಲ್ಪಟ್ಟರು.

---

## ಸಾರಾಂಶವು

### ಆರನೆಯ ಎಡವರ್ಡನು (೧೫೪೭—೧೫೫೩).

ಆರನೆಯ ಎಡವರ್ಡನು—

ಇಂಗ್ಲಂಡಿನಲ್ಲಿ ಪ್ರಾಟೆಸ್ಟಂಟ ಪಂಥದ ಪ್ರಸಾರವಾಯ್ತು.

ಎಡವರ್ಡನು ಅಲ್ಪವಯಸ್ಕನಾಗಿದ್ದುದರಿಂದ ೧೬ ಜನರ ಮಂತ್ರಿಮಂಡಳವು ರಾಜ್ಯಕಾರಭಾರವನ್ನು ಸಾಗಿಸಿತು. ಈ ಮಂತ್ರಿಮಂಡಳದಲ್ಲಿಯು ಎಡವರ್ಡನ ಸೋದರಮಾವನಾದ ಸೀಮೂರನು (ಸಮರ್ಸೆಟನ ಅರ್ಲನು) ರಾಜ್ಯಪಾಲಕನೂ ರಾಷ್ಟ್ರರಕ್ಷಕನೂ ಎಂದು ನಿಯೋಜಿಸಲ್ಪಟ್ಟನು. ಎಲ್ಲ ಸತ್ತೆ ಆತನ ಕೈಯಲ್ಲಿ.

ಸಮರ್ಸೆಟನ (ಎಡವರ್ಡ ಸೀಮೋರ) ವರ್ಚಸ್ಸು, ೧೫೪೭—೧೫೪೯.

ಸ್ಕಾಟಲಂಡಿನ ರಾಣಿಯಾದ ಮೇರಿಯೊಡನೆ ಎಡವರ್ಡನ ಲಗ್ನವನ್ನು ಜರುಗಿಸಲು ಸ್ಕಾಟಲಂಡಿನೊಡನೆ ಯುದ್ಧವು; ಪಿಂಕಿಯ ಯುದ್ಧವು (೧೫೪೭). ಮೇರಿ ಫ್ರಾನ್ಸಿಗೆ ಕಳಿಸಲ್ಪಟ್ಟಳು. ಅಲ್ಲಿ ಫ್ರೆಂಚ ರಾಜಪುತ್ರರೊಡನೆ ಅವಳ ಮದುವೆ.

೧೫೪೭ ಆರು ಕಲಮುಗಳ ಕಾಯ್ದೆ ರದ್ದುಮಾಡಲ್ಪಟ್ಟಿತು.

೧೫೪೯ ೪೨ ಕಲಮುಗಳ ಹೊಸ ಪ್ರಾರ್ಥನೆಯ ಪುಸ್ತಕವು ಮತ್ತು ಅದು ಎಲ್ಲ ಚರ್ಚುಗಳಲ್ಲಿ ಉಪಯೋಗಿಸಲ್ಪಡಬೇಕೆಂದು ಕಾಯ್ದೆ. ಚರ್ಚುಗಳಲ್ಲಿಯ ಮೂರ್ತಿಗಳೂ ಚಿತ್ರಗಳೂ ಹೊರದೂಡಲ್ಪಟ್ಟುವು. ಪ್ರಾಟೆಸ್ಟಂಟ ಪಂಥದ ಪ್ರಸಾರವು. ಜನರಲ್ಲಿ ಸಮರ್ಸೆಟನ ವಿಷಯದಲ್ಲಿ ಅಸಂತೋಷವು. ಜಮೀನದಾರರು ರೈತರನ್ನು ಭೂಮಿಗಳಿಂದ ಹೊರಗಟ್ಟಿದುದರಿಂದ ನಿರುದ್ಯೋಗಿತೆ ಮತ್ತು ತಿರಿಕತನವು ಹೆಚ್ಚಿತು. ಆದರಿಂದ ಬಂಡುಗಳು ಉದ್ಭವಿಸಿದವು. ಉಗ್ರವಾದ ಉಪಾಯಗಳಿಂದ ಈ ಬಂಡುಗಳು ಮುರಿಯಲ್ಪಟ್ಟುವು. ಸಮರ್ಸೆಟನ ವಿಷಯದಲ್ಲಿ ಅಸಂತೋಷವು. ಮಂತ್ರಿಮಂಡಳದೊಳಗಿನ ಸದಸ್ಯರೂ ಅವನ ವಿರೋಧಿಗಳು. ವಾರ್ವಿಕದ ಅರ್ಲನಾದ ಡಡ್ಲೆಯ ಕೈಯಲ್ಲಿ ಎಲ್ಲ ಸತ್ತೆ ಬಂದಿತು. ಸಮರ್ಸೆಟನು ಶೂಲಕ್ಕೇರಿಸಲ್ಪಟ್ಟನು (೧೫೫೨). ಡಡ್ಲೆ ಡ್ಯೂಕ್ ಅಫ್ ನಾರ್ದಂಬರ್ಲಂಡ ಎಂಬ ಪದವಿಯನ್ನು ತಳೆದನು.

ನಾರ್ದಂಬರ್ಲಂಡನ ವರ್ಚಸ್ಸು, ೧೫೪೯—೧೫೫೩.

ಪ್ರಾಟೆಸ್ಟಂಟ ಪಂಥಕ್ಕೆ ಪ್ರೋತ್ಸಾಹನವು. ಪ್ರಾರ್ಥನೆಯ ಪುಸ್ತಕವು ೧೫೫೨.

೧೫೫೨ ಸಮರ್ಸೆಟನು ಶೂಲಕ್ಕೇರಿಸಲ್ಪಟ್ಟನು.

೧೫೫೩ ನಾರ್ದಂಬರ್ಲಂಡನ ಮಗನಾದ ಗಿಲಫರ್ಡ ಡಡ್ಲೆ ಇವನ ಮದುವೆ

ಲೇಡಿ ಜೇನ್ ಗ್ರೇ ಇವಳೊಡನೆ. ತನ್ನ ತರುವಾಯದಲ್ಲಿ ಲೇಡಿ ಜೇನ್ ಗ್ರೇ ಇವಳು ಪಟ್ಟಕ್ಕೆ ಬರಬೇಕೆಂದು ಎಡವರ್ಡ್ಡನ ಮೃತ್ಯುಪತ್ರವು. ಜನರು ಮೇರಿಯ ಪಕ್ಷವನ್ನು ವಹಿಸಿದರು. ನಾರ್ದಂಬರ್ಲೆಂಡನು ಶೂಲಕ್ಕೇರಿಸಲ್ಪಟ್ಟನು.

# ೫ನೆಯ ಪ್ರಕರಣವು

## ಮೇರಿ

ಜನ್ಮವು ೧೫೧೬; ರಾಜ್ಯಾರೋಹಣವು (೩೭ನೆಯ ವರ್ಷದಲ್ಲಿ) ೧೫೫೩;
ಮೃತ್ಯು ೧೫೫೮.

೧೫೫೩—೧೫೫೮.

### ತತ್ಕಾಲೀನ ರಾಜ್ಯಕರ್ತರು.

| ಸ್ಕಾಟಲಂಡ | ಫ್ರಾನ್ಸ | ಸ್ಪೇನ |
|---|---|---|
| ಮೇರಿ | ೨ನೆಯ ಹೆನ್ರಿ | ೫ನೆಯ ಚಾರ್ಲಸನು ೧೫೫೬ರ ವರೆಗೆ. |
| | | ೨ನೆಯ ಫಿಲಿಪನು |

### ಮಹತ್ವದ ಇಸ್ವಿಗಳು

೧೫೫೪ ವ್ಯಾಟನ ಬಂಡು.
೧೫೫೪ ಲೇಡಿ ಜೇನ್ ಗ್ರೇ ಇವಳು ಶೂಲಕ್ಕೇರಿಸಲ್ಪಟ್ಟಳು.
೧೫೫೪ ಸ್ಪೇನದ ಅರಸನಾದ ೨ನೆಯ ಫಿಲಿಪನೊಡನೆ ಮೇರಿಯ ಮದುವೆ.
೧೫೫೮ ಕ್ಯಾಲೆಯನ್ನು ಇಂಗ್ಲಂಡು ಕಳೆದುಕೊಳ್ಳುವುದು.

**ಮೇರಿ** — ಆರನೆಯ ಎಡವರ್ಡನ ತರುವಾಯದಲ್ಲಿ ಅವನ ಮಲ ಅಕ್ಕನಾದ **ಮೇರಿ** (ಕ್ಯಾಥರಿನ ಇವಳ ಮಗಳು) ಇಂಗ್ಲಂಡಿನ ಪಟ್ಟಕ್ಕೆ ಬಂದಳು. ಆಗ ಅವಳಿಗೆ ೩೭ ವರ್ಷಗಳು. ಈ ವರೆಗಿನ ಅವಳ ಆಯುಷ್ಯವೆಲ್ಲವು ಕಷ್ಟದಲ್ಲಿ ಹೋಗಿತ್ತು. ತನ್ನ ತಾಯಿಯಂತೆ ಅವಳೂ ರೋಮನ್ ಕ್ಯಾಥಲಿಕ ಪಂಥದ ತೀವ್ರ ಅಭಿಮಾನಿಯಾಗಿದ್ದಳು. ೮ನೆಯ ಹೆನ್ರಿಗೆ ಅವಳಲ್ಲಿ ಪ್ರೇಮವಿರಲಿಲ್ಲ. ಅವನು ಅವಳನ್ನು ಸಂಪೂರ್ಣವಾಗಿ ದುರ್ಲಕ್ಷಿಸಿದ್ದನು. ಎಡವರ್ಡನ ಆಳ್ಕೆಯಲ್ಲಂತು ಅವಳು ಅರಮನೆಯಿಂದ ಹೊರದೂಡಲ್ಪಟ್ಟಿದ್ದಳು. ಈ ಬಗೆಯಾಗಿ ಕಳೆದ ಇಪ್ಪತ್ತು ವರ್ಷಗಳನ್ನು ಅವಳು ಕಷ್ಟದಲ್ಲಿ ನೂಕಿದುದರಿಂದ ಅವಳ ಸ್ವಭಾವವು ಸಂಶಯಿಯಾಗಿದ್ದಿತು. ಆದುದರಿಂದ ತನಗೆ ವಿರುದ್ಧವಿದ್ದವರ ಮುಯ್ಯನ್ನು ತೀರಿಸಬೇಕೆಂದು ಅವಳು ಹವಣಿಸಿದಳು. ಚಿಕ್ಕಂದಿನಿಂದ ಅವಳಿಗೆ ರೋಮನ್ ಕ್ಯಾಥಲಿಕ ಪಂಥದಲ್ಲಿ ನಿಶ್ಚಲವಾದ ನಿಷ್ಠೆಯಿದ್ದಿತು. ಯಾರಾದರೂ ಧಾರ್ಮಿಕ

ವಿಷಯದಲ್ಲಿ ತನ್ನನ್ನು ವಿರೋಧಿಸಲು ಧೈರ್ಯಮಾಡಿದರೆ ಅವರ ನಾಶವನ್ನು ಮಾಡಲು ಎಂತಹ ಉಪಾಯಗಳನ್ನಾದರೂ ಯೋಚಿಸಲು ಅವಳು ಹಿಂಜರಿಯುತ್ತಿರಲಿಲ್ಲ. ಇಷ್ಟು ದಿನಗಳ ವರೆಗೆ ಕ್ಯಾಥಲಿಕ್ ಪಂಥದವರನ್ನು ಪೀಡೆಗೆ ಗುರಿಮಾಡಿದ ಜನರ ಮುಯ್ಯನ್ನು ತೀರಿಸಲು ಈಶ್ವರನು ತನಗೆ ಜನ್ಮವನ್ನಿತ್ತಿರುವನೆಂದು ಅವಳಿಗೆನಿಸುತ್ತಿತ್ತು. ಇಂಗ್ಲಂಡ್ ಮತ್ತು ಪೋಪ ಇವರ ನಡುವೆ ಇದ್ದ ವಿತುಷ್ಟವನ್ನು ಇಲ್ಲದಾಗಿ ಮಾಡಿ ಪ್ರೇಮವನ್ನು ಹುಟ್ಟಿಸಬೇಕೆಂದೂ ಇಂಗ್ಲಂಡಿನಿಂದ ಪ್ರಾಟೆಸ್ಟಂಟ ಪಂಥದ ಉಚ್ಚಾಟನವನ್ನು ಮಾಡಬೇಕೆಂದೂ ಅವಳು ಬಯಸಿದಳು. ಅವಳು ಪಟ್ಟಕ್ಕೆ ಬಂದ ಬಳಿಕ ರೋಮನ್ ಕ್ಯಾಥಲಿಕ್ ಪಂಥಕ್ಕೆ ಸಹಾನುಭೂತಿಯನ್ನು ತೋರಿಸಿ ಅಷ್ಟಕ್ಕೆ ನಿಲ್ಲದೆ ಆ ಪಂಥದ ಪ್ರಸಾರವು ಬೆಳೆಯಬೇಕೆಂದೂ ಪ್ರಾಟೆಸ್ಟಂಟ ಪಂಥವು ಸಂಪೂರ್ಣವಾಗಿ ಅಳಿಯಬೇಕೆಂದೂ ಕಾರಾಗೃಹದಲ್ಲಿದ್ದ ಕ್ಯಾಥಲಿಕ್ ಪಂಥದ ಬಿಶಪರನ್ನು ಮುಕ್ತಗೊಳಿಸಿದಳು. ಆ ಬಳಿಕ ಅವಳು ಕ್ಯಾಥಲಿಕ್ ಪಂಥದವರನ್ನು ಪೀಡೆಗೆ ಗುರಿಮಾಡಿದವರಲ್ಲಿ ಮುಖ್ಯರಾದ ಕ್ರ್ಯಾನ್ಮರ್, ಲಾಟಿಮರ, ರಿಡ್ಲೆ ಮೊದಲಾದ ಪ್ರಾಟೆಸ್ಟಂಟ ಪಂಥದ ಬಿಶಪರನ್ನು ಪೀಡಿಸಲು ಆರಂಭಿಸಿದಳು. ತರುವಾಯದಲ್ಲಿ ರೋಮನ್ ಕ್ಯಾಥಲಿಕ ಪಂಥದ ಆಚಾರವಿಚಾರಗಳು ಇಂಗ್ಲಂಡಿನಲ್ಲಿ ಪ್ರಾರಂಭಿಸಲ್ಪಟ್ಟವು. ಮತ್ತು ಪ್ರಾಟೆಸ್ಟಂಟ ಪಂಥದ ಪ್ರಸಾರಕ್ಕೋಸುಗ ಮಾಡಲ್ಪಟ್ಟ ಕಾಯ್ದೆಗಳೆಲ್ಲವೂ ರದ್ದುಗೊಳಿಸಲ್ಪಟ್ಟವು. ೧೫೫೫ರಲ್ಲಿ ಪಾಖಂಡಿಗಳನ್ನು (ಧರ್ಮವನ್ನು ಪಾಲಿಸದವರನ್ನು) ಶಿಕ್ಷೆಗೆ ಗುರಿಮಾಡಲು ಕಾಯ್ದೆ ಮಾಡಲ್ಪಟ್ಟಿತು.


ಮೇರಿ

**ಮೇರಿಯ ಮದುವೆ** — ಸ್ಪೇನದ ಬಾದಶಹನಾದ ಚಾರ್ಲಸನು ಮೇರಿಯ ಚಿಕ್ಕಮ್ಮನ ಮಗನು. ಅವನು ತನ್ನ ಮಗನಾದ ಫಿಲಿಪನು ಮೇರಿಯನ್ನು

ಮದುವೆಯಾಗಬೇಕೆಂದು ಬಯಸಿ ಮೇರಿಗೆ ತನ್ನ ಮನೋಗತವನ್ನು ಸೂಚಿಸಿದನು. ಮೇರಿಗೆ ತನ್ನ ತಾಯಿಯ ತವರುಮನೆಯವರ ವಿಷಯದಲ್ಲಿ ಪ್ರೇಮವಿದ್ದಿತು; ಇದಲ್ಲದೆ ಚಾರ್ಲಸನೂ ರಾಜಪುತ್ರ ಫಿಲಿಪನೂ ಕ್ಯಾಥಲಿಕ್ ಪಂಥದ ತೀವ್ರ ಅಭಿಮಾನಿಗಳಾಗಿದ್ದರು. ಆದುದರಿಂದ ಮೇರಿ ಈ ಸೂಚನೆಯನ್ನು ಒಪ್ಪಿದಳು. ೧೫೫೪ರಲ್ಲಿ ಮದುವೆಯಾಯ್ತು. ಆದರೆ ಈ ಮದುವೆ ಇಂಗ್ಲಿಷ್ ಜನರಿಗೆ ಇಷ್ಟವಾಗಿರಲಿಲ್ಲ. ಈ ಮದುವೆಯಿಂದ ಇಂಗ್ಲಂಡಿನಲ್ಲಿ ಸ್ಪೇನದ ಸತ್ತೆ ಪ್ರಾರಂಭವಾಗಬಹುದೆಂದೂ ಸ್ಪೇನದ ಶತ್ರುಗಳೊಡನೆ ಆಗುವ ಯುದ್ಧಗಳಲ್ಲಿ ಇಂಗ್ಲಂಡು ಭಾಗವನ್ನು ವಹಿಸಬೇಕಾಗಬಹುದೆಂದೂ ಇಂಗ್ಲಂಡಿನಲ್ಲಿ ಪೋಪನ ವರ್ಚಸ್ಸು ಮತ್ತೆ ಪ್ರಾರಂಭವಾಗಬಹುದೆಂದೂ ಅವರಿಗೆ ಭೀತಿಯಿದ್ದಿತು. ಆದುದರಿಂದ ಅವಳನ್ನು ಪಟ್ಟದಿಂದ ತಳ್ಳಿ ಎಲಿಝಾಬೆಥ ಇವಳಿಗೆ ಪಟ್ಟಗಟ್ಟಲು ಒಳಸಂಚುಗಳು ನಡೆದುವು.

**ವ್ಯಾಟನ ಬಂಡು (೧೫೫೪)**—ಈ ಒಳಸಂಚುಗಳೊಂದರಲ್ಲಿ ಸರ ಥಾಮಸ್ ವ್ಯಾಟ್, ಲೇಡಿ ಜೇನ್ ಗ್ರೇ ಇವಳ ತಂದೆಯಾದ ಡ್ಯೂಕ್ ಆಫ್ ಸಫಾಕ್, ಕೋರ್ಟನೆ ಮೊದಲಾದ ಜನರಿದ್ದರು. ಈ ಸಂಚು ಕೆಂಟ್ ಜಿಲ್ಲೆಯಲ್ಲಿ ರಚಿಸಲ್ಪಟ್ಟಿತು. ಆದರೆ ಅದು ಸಂಪೂರ್ಣ ಸಿದ್ಧತೆಯಾಗುವ ಮೊದಲೆ ಕೋರ್ಟನೆಯ ಮೂರ್ಖತನದಿಂದ ಬೈಲಿಗೆ ಬಂದಿತು. ಆಗ ನಿರುಪಾಯವಾಗಿ ಸಂಚಿನವರು ಶಸ್ತ್ರವೆತ್ತಿದರು. ಅವರು ಕೆಂಟ್ ಒಂದನ್ನು ಬಿಟ್ಟು ಉಳಿದೆಲ್ಲ ಎಡೆಗಳಲ್ಲಿ ಪರಾಭವ ಹೊಂದಿದರು. ವ್ಯಾಟನು ಈ ಪರಗಣೆಯಲ್ಲಿ ೧೦,೦೦೦ ಸೈನಿಕರನ್ನು ನೆರೆಯಿಸಿ ಲಂಡನಿಗೆ ದಾಳಿಯಿಕ್ಕಲು ಹೊರಟನು. ಲಂಡನ್ ನಗರವು ಆತನ ವಶದಲ್ಲಿ ಬಂದು ಮೇರಿಯೂ ಆತನ ವಶದಲ್ಲಿ ಬರುವ ಸಂಭವವಿದ್ದಿತು. ಆದರೆ ವೇಳೆ ವ್ಯರ್ಥವಾಗಿ ಕಳೆಯಲ್ಪಟ್ಟುದರಿಂದ ಇದು ಸಾಧ್ಯವಾಗಲಿಲ್ಲ. ಮೇರಿ ಧೈರ್ಯದಿಂದಲೂ ದೃಢನಿಶ್ಚಯದಿಂದಲೂ ಕಾದಿ ವ್ಯಾಟನ ಸೈನ್ಯವನ್ನು ಸೋಲಿಸಿ ಅವನನ್ನು ಸೆರೆಹಿಡಿದಳು (೧೫೫೪).

ಈ ಸಂಚು ಹೀಗೆ ಮುರಿಯಲ್ಪಟ್ಟಬಳಿಕ ಅದರಲ್ಲಿ ತೊಡಗಿದ ಅನೇಕ ಜನರನ್ನು ಮೇರಿ ಅತ್ಯಂತ ಕ್ರೂರವಾದ ಶಿಕ್ಷೆಗೆ ಗುರಿಮಾಡಿದಳು. ಥಾಮಸ್ ವ್ಯಾಟನನ್ನಂತು ಬಗೆಬಗೆಯಿಂದ ಹಿಂಸಿಸಿ ಕೊಲ್ಲಿಸಿದಳು. ಡ್ಯೂಕ್ ಆಫ್ ಸಫಕನ ಮತ್ತು ಅವನ ಮಗನ ಶಿರಚ್ಛೇದವನ್ನು ಮಾಡಿಸಿದಳು. ಲೇಡಿ ಜೇನ್ ಗ್ರೇ ಮತ್ತು ಅವಳ ಗಂಡನಾದ ಗಿಲ್ಫರ್ಡ ಡಡ್ಲೆ ಇವರು ಶೂಲಕ್ಕೇರಿಸಲ್ಪಟ್ಟರು (೧೫೫೪).

**ಮೇರಿಯ ಪ್ರಜಾಪೀಡಕ ಕೃತ್ಯಗಳು**—೧೫೫೪ರಲ್ಲಿ ಪಾರ್ಲಿಮೆಂಟಿನ ಹೊಸ ಚುನಾವಣೆಯಾಯ್ತು. ಈ ಪಾರ್ಲಿಮೆಂಟು ಪೋಪನೊಡನೆ ಸೌಹಾರ್ದ

ವನ್ನು ಉಂಟುಮಾಡಿ ಇಂಗ್ಲಂಡಿನಲ್ಲಿ ಅವನ ವರ್ಚಸ್ಸನ್ನು ಮಾನ್ಯಮಾಡಿತು. ಅನಂತರದಲ್ಲಿ ಇಂಗ್ಲಂಡಿನಿಂದ ಹದ್ದುಪಾರಮಾಡಲ್ಪಟ್ಟ **ಪೋಲ** ಎಂಬ ಬಿಶಪನು ಪೋಪನ ಪ್ರತಿನಿಧಿಯಾಗಿ ಇಂಗ್ಲಂಡಿಗೆ ಬಂದನು. ಹಿಂದಿನ ಪೋಪನು ಇಂಗ್ಲಂಡನ್ನು ಧರ್ಮಬಹಿಷ್ಕೃತವಾಗಿ ಮಾಡಿದ್ದನು. ಆದರೆ ಇಂಗ್ಲಂಡು ಮತ್ತೆ ಪೋಪನ ಸತ್ತೆಯ ಕೆಳಗೆ ಬಂದ ಸಮಾರಂಭವನ್ನು ಈ ಪ್ರತಿನಿಧಿ ಬಹು ವೈಭವದಿಂದ ನೆರವೇರಿಸಿದನು. ಇಂಗ್ಲಂಡಿನಲ್ಲಿ ರೋಮನ್ ಕ್ಯಾಥಲಿಕ್ ಪಂಥದ ಪುನಃಸ್ಥಾಪನೆಯಾದ ಬಳಿಕ ಕ್ಯಾಥಲಿಕ ಪಂಥಕ್ಕೆ ಮಾನ್ಯತೆಯನ್ನೀಯದಿದ್ದ ಜನರ ವಿರುದ್ಧವಾಗಿ ಉಗ್ರವಾದ ಕಾಯ್ದೆಗಳು ಮಾಡಲ್ಪಟ್ಟುವು. ಇದಾದ ಬಳಿಕ ಮೇರಿಯ ಪ್ರಜಾಪೀಡಕ ಕೃತ್ಯಗಳು ಆರಂಭವಾದುವು. **ಬಿಶಪ್ ಹೂಪರ, ರಾಜರ್ಸ, ರಿಡ್ಲೆ, ಲ್ಯಾಟಿಮರ, ಕ್ರ್ಯಾನ್ಮರ** ಮೊದಲಾದ ೩೦೦ ಧರ್ಮಾಧಿಕಾರಿಗಳು ರೋಮನ್ ಕ್ಯಾಥಲಿಕ್ ಪಂಥಕ್ಕೆ ಮಾನ್ಯತೆಯನ್ನು ಕೊಡಲಿಲ್ಲವೆಂದು ಸುಡಿಸಲ್ಪಟ್ಟರು. ಮೇರಿಯ ಈ ಬಗೆಯ ಕೃತ್ಯಗಳಿಗೆ ಹೆದರಿ ಅನೇಕರು ದೇಶತ್ಯಾಗವನ್ನು ಮಾಡಿದರು. ರಾಷ್ಟ್ರದಲ್ಲಿ ಎಲ್ಲೆಲ್ಲಿಯೂ ಅಸಂತೋಷವು ಹಬ್ಬಿ ಒಳಸಂಚುಗಳು ಆಗಲಾರಂಭಿಸಿದವು. ಈ ಸಂಚುಗಳೊಂದರಲ್ಲಿ ಎಲಿಝಬೆಥ ಇವಳ ಅಂಗವಿರಬಹುದೆಂದು ಸಂಶಯವು ಉಂಟಾಗಿ ಮೇರಿ ಅವಳನ್ನೂ ಕಾರಾಗೃಹದಲ್ಲಿ ಇರಿಸಿದಳು.

**ಕ್ಯಾಲೆ ಕೈಬಿಟ್ಟಿತು**—ಮೇರಿಯ ಮದುವೆಯಿಂದ ಇಂಗ್ಲಂಡ್ ಮತ್ತು ಸ್ಪೇನ ಇವುಗಳಲ್ಲಿ ಪರಸ್ಪರ ಸೌಹಾರ್ದವು ಒದಗಿತ್ತು. ಆದರೆ ಇದೇ ಸಮಯದಲ್ಲಿ ಫ್ರಾನ್ಸಿಗೂ ಸ್ಪೇನಕ್ಕೂ ಯುದ್ಧವು ಹುಟ್ಟಿತು. ಇಂಗ್ಲಂಡು ಸ್ಪೇನದ ಪಕ್ಷವನ್ನು ಸ್ವೀಕರಿಸಿತು. ಈ ಯುದ್ಧದಲ್ಲಿ ಇಂಗ್ಲಂಡಿನ ವಶದಲ್ಲಿದ್ದ ಫ್ರಾನ್ಸಿನ **ಕ್ಯಾಲೆ** ಬಂದರವನ್ನು ಫ್ರೆಂಚ ಜನರು ವಶಪಡಿಸಿಕೊಂಡರು (೧೫೫೮). ೧೩೪೭ರಲ್ಲಿ ೩ನೆಯ ಎಡವರ್ಡನ ಆಳ್ಕೆಯಲ್ಲಿ ಕ್ಯಾಲೆ ಬಂದರವು ಇಂಗ್ಲಿಶರ ವಶದಲ್ಲಿ ಬಂದಿತ್ತು. ಈ ಕ್ಯಾಲೆ ಬಂದರವು ಇಂಗ್ಲಂಡಿನ ಕೈಬಿಟ್ಟುದನ್ನು ಕೇಳಿ ಮೇರಿಯ ಮನಸ್ಸಿಗೆ ಬಹು ದುಃಖವಾಯ್ತು. ಈ ಆಘಾತದಿಂದ ಅವಳ ಹೃದಯವು ವಿದೀರ್ಣವಾಗಿ ಅವಳು ೧೫೫೮ರಲ್ಲಿ ನವೆಂಬರ ತಿಂಗಳಲ್ಲಿ ಮರಣ ಕ್ಕೊಳಗಾದಳು.

---

## ಸಾರಾಂಶವು

### ಮೇರಿ (೧೫೫೩ — ೧೫೫೮).

ಮೇರಿ ಅನುಸರಿಸಿದ ಮುಖ್ಯ ನೀತಿ—

ಇಂಗ್ಲಂಡಿನಲ್ಲಿ ಮತ್ತೆ ಕ್ಯಾಥಲಿಕ್ ಪಂಥವನ್ನು ಸ್ಥಾಪಿಸುವುದು.

ಮೇರಿಯ ವಿರುದ್ಧ ಸಂಚುಗಳು—

೧. ನಾರ್ದಂಬರ್ಲಂಡನು ತನ್ನ ಸೊಸೆಯಾದ ಜೇನ್ ಗ್ರೇ ಇವಳಿಗೆ ಪಟ್ಟವು ದೊರೆಯಬೇಕೆಂದು ಬಂಡನ್ನು ಹೂಡಿದನು. ಬಂಡು ಮುರಿಯಲ್ಪಟ್ಟಿತು. ನಾರ್ದಂಬರ್ಲಂಡನು ಶೂಲಕ್ಕೇರಿಸಲ್ಪಟ್ಟನು (೧೫೫೩).

೨. ಮೇರಿ ಫಿಲಿಪನನ್ನು ಮದುವೆಯಾಗಲು ಬಯಸಿದಳು. ಈ ಮದುವೆಯಾದರೆ ಇಂಗ್ಲಂಡು ಸ್ಪೇನದ ತಂತ್ರದಂತೆ ನಡೆಯಬಹುದೆಂದೂ ಇಂಗ್ಲಂಡಿನಲ್ಲಿ ಕ್ಯಾಥಲಿಕ್ ಪಂಥದ ಸ್ಥಾಪನೆಯಾಗಬಹುದೆಂದೂ ಬಗೆದು ವ್ಯಾಟನು ಬಂಡನ್ನು ಹೂಡಿದನು. ಬಂಡು ಮುರಿಯಲ್ಪಟ್ಟಿತು. ಜೇನ್ ಗ್ರೇ, ಡಡ್ಲೆ, ಡ್ಯೂಕ ಆಫ್ ಸಫಕ್ ಇವರೆಲ್ಲರ ಅಂಗವು ಈ ಬಂಡಿನಲ್ಲಿ ಇರುವುದೆಂಬ ಸಂಶಯದಿಂದ ಎಲ್ಲರೂ ಮರಣಕ್ಕೆ ಗುರಿಮಾಡಲ್ಪಟ್ಟರು.

ಮೇರಿಯ ಧಾರ್ಮಿಕ ನೀತಿ—

೧೫೫೩ ಪ್ರಾಟೆಸ್ಟಂಟ ಪಂಥದ ಪ್ರಸಾರವನ್ನು ಮಾಡಲು ೬ನೆಯ ಎಡವರ್ಡನ ಆಳ್ಕೆಯಲ್ಲಿ ಮಾಡಲ್ಪಟ್ಟ ಕಾಯ್ದೆಗಳೆಲ್ಲವು ರದ್ದುಗೊಳಿಸಲ್ಪಟ್ಟವು. ಪ್ರಾರ್ಥನೆಯ ಪುಸ್ತಕವು ರದ್ದಾಯಿತು, ಪ್ರಾರ್ಥನೆ ಲ್ಯಾಟಿನ್ ಭಾಷೆಯಲ್ಲಿ ನಡೆಯಬೇಕೆಂಬ ನಿಯಮವು.

೧೫೫೪ ಪೋಪನ ಪ್ರತಿನಿಧಿಯಾದ ಕಾರ್ಡಿನಲ್ ಪೋಲನು ಇಂಗ್ಲಂಡಿಗೆ ಬರುವನು. ಇಂಗ್ಲಂಡು ಮತ್ತೆ ಪೋಪನ ಸತ್ತೆಗೆ ಅಧೀನವಾಗುವುದು. ಬಿಶಪರ ಸ್ಥಳಗಳು ಕ್ಯಾಥಲಿಕ್ ಪಂಥದವರಿಗೆಯೆ ದೊರೆವುದು. ಪ್ರಾಟೆಸ್ಟಂಟ ಪಂಥದವರ ಛಲನವು:--ಕ್ರ್ಯಾನ್ಮರ, ಹೂಪರ, ರಿಡ್ಲೆ, ಲ್ಯಾಟಿಮರ ಮೊದಲಾದ ೩೦೦ ಪ್ರಾಟೆಸ್ಟಂಟ ಪಂಥಾಭಿಮಾನಿಗಳು ಸುಡಿಸಲ್ಪಟ್ಟರು.

೧೫೫೫ ಪಾಖಂಡಿಗಳಿಗೆ ಶಾಸನಮಾಡಲು ಕಾಯ್ದೆ.

ಮೇರಿಯ ಆಳ್ಕೆಯಲ್ಲಿ ಇತರ ಸಂಗತಿಗಳು—

೧೫೫೪ ಸ್ಪೇನದ ರಾಜಪುತ್ರನಾದ ೨ನೆಯ ಫಿಲಿಪನೊಡನೆ ಮೇರಿಯ ಮದುವೆ. ಲೋಕಮತವು ಪ್ರತಿಕೂಲವು.

೧೫೫೮ ಕ್ಯಾಲೆ ಇಂಗ್ಲಂಡಿನ ಕೈಬಿಟ್ಟಿತು.

# ೬ನೆಯ ಪ್ರಕರಣವು

## ಎಲಿಝಾಬೆಥ್

ಜನ್ಮವು ೧೫೩೩; ರಾಜ್ಯಾರೋಹಣವು (೨೫ನೆಯ ವರ್ಷದಲ್ಲಿ) ೧೫೫೮;
ಮೃತ್ಯು ೧೬೦೩.

(೧೫೫೮ – ೧೬೦೩)

### ತತ್ಕಾಲೀನ ರಾಜ್ಯಕರ್ತರು

| ಫ್ರಾನ್ಸ | ಸ್ಕಾಟಲಂಡ | ಸ್ಪೇನ |
|---|---|---|
| ೨ನೆಯ ಫ್ರಾನ್ಸಿಸ್ ೧೫೬೦ರ ವರೆಗೆ | ಮೇರಿ ೧೫೬೭ರ ವರೆಗೆ | ೨ನೆಯ ಫಿಲಿಪ್ ೧೫೯೮ರ ವರೆಗೆ |
| ೯ನೆಯ ಚಾರ್ಲಸನು ೧೫೭೪ರ ವರೆಗೆ | ೬ನೆಯ ಜೇಮ್ಸ | ೩ನೆಯ ಫಿಲಿಪ್ ೧೬೩೧ರ ವರೆಗೆ |
| ೩ನೆಯ ಹೆನ್ರಿ ೧೫೮೯ರ ವರೆಗೆ | | |
| ೪ನೆಯ ಹೆನ್ರಿ ೧೬೧೦ರ ವರೆಗೆ | | |

### ಮಹತ್ವದ ಇಸ್ವಿಗಳು

೧೫೫೯ ಅ್ಯಕ್ಟ ಆಫ್ ಸುಪ್ರಿಮಸಿ ಮತ್ತು ಅ್ಯಕ್ಟ ಆಫ್ ಯುನಿಫಾರ್ಮಿಟಿ.
೧೫೬೮ ಸ್ಕಾಟಲಂಡಿನ ರಾಣಿಯಾದ ಮೇರಿ ಸ್ಟ್ಯುಅರ್ಟ ಇವಳು ಇಂಗ್ಲಂಡಿಗೆ ಬರುವಳು.
೧೫೭೦ ಪೋಪ ೫ನೆಯ ಪಾಯುಸನು ಎಲಿಝಾಬೆಥ ಅವಳನ್ನು ಧರ್ಮಬಹಿಷ್ಕೃತೆಯಾಗಿ ಮಾಡಿ ಅವಳು ಪಟ್ಟದಿಂದ ತಳ್ಳಲ್ಪಟ್ಟಿರುವಳೆಂದು ಪ್ರಕಟಗೊಳಿಸಿದನು.
೧೫೮೭ ಸ್ಕಾಟಲಂಡಿನ ರಾಣಿಯಾದ ಮೇರಿ ಶೂಲಕ್ಕೇರಿಸಲ್ಪಟ್ಟಳು.
೧೫೮೮ ಸ್ಪೇನದ ಹಡಗುಪಡೆಯ ಪರಾಭವವು.
೧೬೦೦ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ.

• **ಎಲಿಝಾಬೆಥ್**—೧೫೫೮ರಲ್ಲಿ ನವೆಂಬರ ತಿಂಗಳಲ್ಲಿ ಮೇರಿ ಮರಣ ಹೊಂದಿದ ಬಳಿಕ ಅನ್ ಬುಲೀನ ಇವಳ ಮಗಳಾದ ಎಲಿಝಾಬೆಥ್ ಇವಳು ಇಂಗ್ಲಂಡಿನ ರಾಣಿಯಾದಳು. ಅವಳಿಗೆ ಆಗ ೨೫ ವರ್ಷಗಳು. ಇಷ್ಟು ಚಿಕ್ಕ ವಯಸ್ಸಿನಲ್ಲಿಯೂ ಅವಳು ಆ ಕಾಲದ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಅತ್ಯಂತ ಜಾಣ

ತನದಿಂದ ರಾಜ್ಯಕಾರಭಾರವನ್ನು ಸಾಗಿಸಿ ಪ್ರಜೆಗಳ ಮನಸ್ಸನ್ನು ಸಂತುಷ್ಟವಾಗಿ ಇಟ್ಟಳಲ್ಲದೆ ಪರರಾಷ್ಟ್ರೀಯ ಸಂಕಟದಿಂದಲೂ ಇಂಗ್ಲಂಡನ್ನು ರಕ್ಷಿಸಿದಳು.

ಧಾರ್ಮಿಕ ಪರಿಸ್ಥಿತಿಯೂ ಎಲಿಝಾಬೆಥ್ ಇವಳ ನೀತಿಯೂ—



ಎಲಿಝಾಬೆಥ್ ರಾಣಿ

ಪಟ್ಟಕ್ಕೆ ಬಂದ ಬಳಿಕ ಎಲಿಝಬೆಥ್ ಇವಳಿಗೆ ಧರ್ಮದ ವಿಷಯದಲ್ಲಿ ತಾನು ಯಾವ ಬಗೆಯ ನೀತಿಯನ್ನು ಸ್ವೀಕರಿಸಬೇಕೆಂಬ ಪ್ರಶ್ನೆ ಬಂದಿತು. ಮೇರಿ ಕ್ಯಾಥಲಿಕ್ ಪಂಥದ ತೀವ್ರ ಅಭಿಮಾನಿಯಾಗಿದ್ದಳು. ಆದುದರಿಂದ ಅವಳ ಆಳ್ಕೆಯಲ್ಲಿ ಇಂಗ್ಲಂಡಿನಲ್ಲಿ ರೋಮನ್ ಕ್ಯಾಥಲಿಕ್ ಪಂಥದ ಪುನಃಸ್ಥಾಪನೆಯಾಗಿ ರಾಷ್ಟ್ರದಲ್ಲಿಯ ದೊಡ್ಡದೊಡ್ಡ ಅಧಿಕಾರದ ಸ್ಥಳಗಳು ಆ ಪಂಥದ ಜನರಿಂದ ಆಕ್ರಮಿಸಲ್ಪಟ್ಟಿದ್ದುವು. ಮೇರಿಯ ಧಾರ್ಮಿಕ ಛಲನೆಗೆ ಬೇಸತ್ತು ಸಾವಿರಾರು ಪ್ರಾಟೆಸ್ಟಂಟ ಮತಾಭಿಮಾನಿಗಳು ದೇಶತ್ಯಾಗವನ್ನು ಮಾಡಿದ್ದರು. ಎಲಿಝಬೆಥ್ ಇವಳು ಪ್ರಾಟೆಸ್ಟಂಟ ಪಂಥದವಳು. ಆದರೆ ಪ್ರಾಟೆಸ್ಟಂಟ ಪಂಥದ ಉಗ್ರವಾದಿಗಳ ಮತದಂತೆ ನಡೆಯಲು ಅವಳಿಗೆ ಇಷ್ಟವಿರಲಿಲ್ಲ. ಎರಡೂ ಪಂಥಗಳ ಜನರಿಗೆ ಸಾಧಾರಣವಾಗಿ ಮಾನ್ಯವಾಗಬಹುದಾದ ತತ್ವಗಳನ್ನನುಸರಿಸಿ ಒಂದು ಮಧ್ಯವರ್ತಿಯಾದ ಪಂಥವನ್ನು ಸ್ಥಾಪಿಸುವುದರ ಕಡೆಗೆ ಅವಳ ಒಲವಿದ್ದಿತು. ಹೀಗೆ ಯಾರ ಮನಸ್ಸನ್ನೂ ನೋಯಿಸಡೆ ರಾಜ್ಯಕಾರಭಾರವನ್ನು ನಡೆಯಿಸಬೇಕೆಂದು ಅವಳು ನಿಶ್ಚಯಿಸಿದಳಾದರೂ ರೋಮನ್ ಕ್ಯಾಥಲಿಕ್ ಪಂಥದವರ ದುರಾಗ್ರಹಕ್ಕೆ ಅವಳ ಮನಸ್ಸು ಹೇಸಿತಾದುದರಿಂದ ಪ್ರಾಟೆಸ್ಟಂಟ ಪಂಥವೇ ಅವಳಿಗೆ ಹೆಚ್ಚು ಇಷ್ಟವಾಗಿ ತೋರಿತು. ಮೇರಿಯ ಆಳ್ಕೆಯಲ್ಲಿ ಧರ್ಮಾಧಿಕಾರಿಗಳ ಸ್ಥಳಗಳು ಕ್ಯಾಥಲಿಕ್ ಪಂಥದ ಬಿಶಪರ ಅಧೀನವಾಗಿದ್ದುವು. ಲನೆಯ ಹೆನ್ರಿ ಅನ್ ಬುಲೀನ ಇವಳನ್ನು ಮದುವೆಯಾದುದು ಪೋಪನಿಗೆ ಇಷ್ಟವಿರಲಿಲ್ಲ, ಆದುದರಿಂದ ಅವನು ಎಲಿಝಬೆಥ ಇವಳಿಗೆ ಇಂಗ್ಲಂಡಿನ ಪಟ್ಟಕ್ಕೆ ಅಧಿಕಾರವಿಲ್ಲವೆಂದು ವಾದಿಸಿದನು. ಹೀಗಾದುದರಿಂದ ಎಲಿಝಬೆಥ ಇವಳು ಮೇರಿಯ ಛಲನೆಗೆ ಬೇಸತ್ತು ದೇಶತ್ಯಾಗವನ್ನು ಮಾಡಿದ ಪ್ರಾಟೆಸ್ಟಂಟ ಪಂಥದ ಬಿಶಪರನ್ನು ಇಂಗ್ಲಂಡಿಗೆ ಮರಳಿ ಕರೆಯಿಸಿ ಅವರನ್ನು ಬೇರೆ ಬೇರೆ ಸ್ಥಳಗಳಲ್ಲಿ ಬಿಶಪರಾಗಿ ನಿಯೋಜಿಸಿದಳು.

ಅಕ್ಟ ಆಫ್ ಸುಪ್ರಿಮಸಿ ಮತ್ತು ಅಕ್ಟ ಆಫ್ ಯುನಿಫಾರ್ಮಿಟಿ (೧೫೫೯)—ಎಲಿಝಬೆಥ್ ಇವಳಿಗೆ ವಿಲಿಯಮ್ ಸೆಸಿಲ್ (ಬರ್ಲೆ) ಎಂಬ ನಿಃಸ್ವಾರ್ಥಿಯೂ ಕರ್ತವ್ಯನಿಷ್ಠನೂ ಆದ ಮಂತ್ರಿಯ ಸಾಹಾಯ್ಯವು ದೊರೆತುದರಿಂದ ಅವಳಿಗೆ ರಾಜ್ಯಕಾರಭಾರವನ್ನು ಒಳಿತಾಗಿ ನಡೆಯಿಸಲು ಶಕ್ಯವಾಯ್ತು. ಅವಳು ಪಟ್ಟಕ್ಕೆ ಬಂದ ಬಳಿಕ ನೆರೆದ ಪಾರ್ಲಿಮೆಂಟ ಸಭೆ ಧಾರ್ಮಿಕ ವಿಷಯದ ಪ್ರಶ್ನವನ್ನು ತನ್ನ ಕೈಯಲ್ಲಿ ತೆಗೆದುಕೊಂಡು "ಅಕ್ಟ ಆಫ್ ಸುಪ್ರಿಮಸಿ" ಎಂಬ ಕಾಯ್ದೆಯನ್ನು ಮಾಡಿತು. ಈ ಕಾಯ್ದೆಯಿಂದ ಇಂಗ್ಲಂಡಿನಲ್ಲಿಯ

ಪೋಪನ ಧಾರ್ಮಿಕ ಸತ್ತೆ ಅಳಿದು ಧಾರ್ಮಿಕ ವಿಷಯದ ಎಲ್ಲ ಅಧಿಕಾರವು ಇಂಗ್ಲಂಡಿನ ರಾಜ್ಯಕರ್ತನ ಕೈಯಲ್ಲಿಯೇ ಬಂದಿತು (೧೫೫೯). **ಅಕ್ಟ ಅಫ್ ಯುನಿಫಾರ್ಮಿಟಿ** (Uniformity=ಒಂದೇ ರೀತಿಯಾಗಿರುವುದು) ಎಂಬ ಇನ್ನೊಂದು ಕಾಯ್ದೆ ಮಾಡಲ್ಪಟ್ಟಿತು. ಈ ಕಾಯ್ದೆಯಂತೆ ೬ನೆಯ ಎಡವರ್ಡನ ಆಳ್ಕೆಯಲ್ಲಿ ರಚಿಸಲ್ಪಟ್ಟಿದ್ದ ಪ್ರಾರ್ಥನೆಯ ಪುಸ್ತಕದಲ್ಲಿ ಕೆಲವು ಕಿರುಕುಳ ಹೆಚ್ಚು ಕಡಿಮೆಗಳು ಮಾಡಲ್ಪಟ್ಟು ಹೊಸದೊಂದು ಪ್ರಾರ್ಥನಾ ಪುಸ್ತಕವು ನಿರ್ಮಿಸಲ್ಪಟ್ಟಿತು, ಮತ್ತು ಚರ್ಚುಗಳಲ್ಲಿ ಅದೇ ಪುಸ್ತಕವು ಉಪಯೋಗಿಸಲ್ಪಡಬೇಕೆಂದು ನಿರ್ಣಯಿಸಲ್ಪಟ್ಟಿತು. ಚರ್ಚಿನಲ್ಲಿ ಪ್ರಾರ್ಥನೆಗೆ ಬಾರದಿದ್ದವರು ಒಂದು ಶಿಲಿಂಗು ದಂಡವನ್ನು ಕೊಡಬೇಕೆಂದೂ ನಿಯಮವಾಯ್ತು.

**ಪ್ಯುರಿಟನ್ ಪಂಥದವರು**—ಎಲಿಝಾಬೆಥ್ ಇವಳ ಮಧ್ಯವರ್ತಿಯಾದ ಧಾರ್ಮಿಕ ನೀತಿ ಪ್ರಾಟೆಸ್ಟಂಟ ಪಂಥದಲ್ಲಿಯ ಶೀಘ್ರಗಾಮಿಗಳಿಗೆ ಮಾನ್ಯವಿರಲಿಲ್ಲ. ಅವಳು ಮಾಡಿದ ಧಾರ್ಮಿಕ ಸುಧಾರಣೆ ಅಪೂರ್ಣವಾದುದೆಂದು ಅವರಿಗೆ ತೋರಿತು. ಮೇರಿಯ ಆಳ್ಕೆಯಲ್ಲಿ ಈ ಜನರು ದೇಶತ್ಯಾಗವನ್ನು ಮಾಡಿದ್ದರು. ಅವರಲ್ಲಿ ಕೆಲವರು **ಜಿನೇವಾ** ಎಂಬಲ್ಲಿ ಹೋಗಿದ್ದರು. ಅಲ್ಲಿಯ ಪ್ರಸಿದ್ಧ ಧರ್ಮಸುಧಾರಕನಾದ **ಕ್ಯಾಲವಿನ್** ಇವನ ಮತದ ಪರಿಣಾಮವು ಅವರ ಮನಸ್ಸಿನ ಮೇಲೆ ಬಹಳವಾಗಿ ಆಗಿದ್ದಿತು. ಧಾರ್ಮಿಕ ವಿಷಯಗಳಲ್ಲಿ ಕ್ಲರ್ಜಿ, ಬಿಶಪ್, ಆರ್ಚಬಿಶಪ್, ಮೊದಲಾದ ಅಧಿಕಾರಿಗಳ ಆವಶ್ಯಕತೆ ಸ್ವಲ್ಪವೂ ಇಲ್ಲ, ಆಯಾ ಸ್ಥಳಗಳಲ್ಲಿಯ ಅನುಭವಿಕರೂ ವಯೋವೃದ್ಧರೂ (ಪ್ರೆಸ್‌ಬಿಟರ್ಸ) ಆದ ಜನರ ಮಂಡಳಗಳೇ ಧಾರ್ಮಿಕ ವ್ಯವಸ್ಥೆಯನ್ನು ನೋಡಿಕೊಳ್ಳಬೇಕು, ಎಲ್ಲರು ಸರಲವೃತ್ತಿಯವರೂ ಪವಿತ್ರಾಚರಣೆಗಳೂ ಆಗಬೇಕು. ಚರ್ಚುಗಳಲ್ಲಿ ಚಿತ್ರಗಳನ್ನು ಇಡಕೂಡದು ಎಂದು ಕ್ಯಾಲ್ವಿನನ ಮತವು. **ಜಾನ್ ನಾಕ್ಸ** ಎಂಬ ಸ್ಕಾಟಿಶ್ ಮನುಷ್ಯನು ಕ್ಯಾಲ್ವಿನನ ಅನುಯಾಯಿಯಾದನು. ಅವನು ಸ್ಕಾಟಲಂಡಿನಲ್ಲಿ ಧರ್ಮಸುಧಾರಣೆಯ ಆಂದೋಲನವನ್ನು ಆರಂಭಿಸಿದನು. ಸ್ಕಾಟಲಂಡಿನಲ್ಲಿಯ ಧರ್ಮಪಂಥಕ್ಕೆ **ಪ್ರೆಸ್‌ಬಿಟೇರಿಯನ್** ಪಂಥವೆಂದು ಹೆಸರು ಬಂದಿತು. ಫ್ರಾನ್ಸಿನಲ್ಲಿಯ ಕ್ಯಾಲ್ವಿನನ ಅನುಯಾಯಿಗಳಿಗೆ **ಹ್ಯೂಗೆನಾಟ್ಸ** ಎಂದೂ ಇಂಗ್ಲಂಡಿನಲ್ಲಿಯ ಅನುಯಾಯಿಗಳಿಗೆ **ಪ್ಯುರಿಟನ್ಸ** ಎಂದೂ ಹೆಸರು. ಪ್ಯುರಿಟನ್ ಜನರು ಸರಲವರ್ತನದವರೂ ಉಚ್ಚ ವಿಚಾರದವರೂ ಆಗಿದ್ದರು. ಕೀಳುಬಗೆಯ ಮನೋರಂಜನೆಗಳು ಅವರಿಗೆ ಇಷ್ಟವಾಗಿರಲಿಲ್ಲ. ಅಕ್ಟ ಆಫ್ ಯುನಿಫಾರ್ಮಿಟಿ ಕಾಯ್ದೆಯಿಂದ ನಿಯತವಾದ ಪ್ರಾರ್ಥನೆಯ ಪುಸ್ತಕದಂತೆ ಪ್ರಾರ್ಥನೆಯನ್ನು ಮಾಡಲು

ಚರ್ಚುಗಳಿಗೆ ಹೋಗುವುದು ಅವರಿಗೆ ಸಮ್ಮತವಿರಲಿಲ್ಲ. ಆದುದರಿಂದ ಅವರೂ ಕ್ಯಾಥಲಿಕ್ ಪಂಥದವರಂತೆ ದಂಡವನ್ನು ಕೊಡಬೇಕಾಗುತ್ತಿತ್ತು.

**ಫ್ರಾನ್ಸಿನ ಮತ್ತು ಸ್ಕಾಟಲಂಡಿನ ಪರಿಸ್ಥಿತಿ**— ಇಂಗ್ಲಂಡಿನ ಪ್ರಾಟೆಸ್ಟಂಟ ಪಂಥವನ್ನು ಸ್ಥಾಪಿಸಲು ಎಲಿಝಾಬೆಥ್ ಇವಳು ಮಾಡುತ್ತಿರುವ ಪ್ರಯತ್ನಗಳಿಂದ ರೋಮನ್ ಕ್ಯಾಥಲಿಕ್ ಪಂಥದ ಅನುಯಾಯಿಗಳಾದ ಫ್ರಾನ್ಸ್ ಮತ್ತು ಸ್ಪೇನ ಈ ರಾಷ್ಟ್ರಗಳಿಗೆ ಅಸಮಾಧಾನವಾಯ್ತು. ಅವು ಇಂಗ್ಲಂಡಿನ ಮೇಲೆ ದಾಳಿಯನ್ನು ತರಬಹುದೆಂಬ ಭೀತಿಯಿದ್ದಿತು. ಇ. ಸ. ೧೫೫೯ರಲ್ಲಿ ಫ್ರಾನ್ಸಿಸನು ಫ್ರಾನ್ಸಿನ ಪಟ್ಟಕ್ಕೆ ಬಂದನು. ಸ್ಕಾಟ್‌ಲಂಡಿನ ರಾಣಿಯಾದ ಮೇರಿ ಆತನ ಹೆಂಡತಿಯಾದುದರಿಂದ ಅವಳು ಫ್ರಾನ್ಸಿನ ರಾಣಿಯಾದಳು. ಅವಳು ಕ್ಯಾಥಲಿಕ್ ಪಂಥದವಳು. ೮ನೆಯ ಹೆನ್ರಿಯ ಮತ್ತು ಅನ್ ಬುಲೀನ ಇವರ ಲಗ್ನಕ್ಕೆ ಪೋಪನ ಸಮ್ಮತಿಯಿದ್ದಿಲ್ಲವಾದುದರಿಂದ ಎಲಿಝಾಬೆಥ್ ಇವಳಿಗೆ ಇಂಗ್ಲಂಡಿನ ಪಟ್ಟಕ್ಕೆ ಅಧಿಕಾರವಿರದೆ ೭ನೆಯ ಹೆನ್ರಿಯ ಮಗಳಾದ ಮಾರ್ಗಾರೆಟ್ ಇವಳ ಮೊಮ್ಮಗಳು ತಾನಾದುದರಿಂದ ತನಗೆ ಆ ಅಧಿಕಾರವಿರುವುದೆಂದು ಮೇರಿ ಹೇಳಿಕೊಂಡಳು. ಈ ಸಮಯದಲ್ಲಿ ಸ್ಕಾಟಲಂಡಿನಲ್ಲಿಯೂ ಕ್ಯಾಥೊಲಿಕ್ ಮತ್ತು ಪ್ರಾಟೆಸ್ಟಂಟ ಈ ಎರಡು ಪಕ್ಷಗಳಿದ್ದು ಕ್ಯಾಥೊಲಿಕ್ ಪಕ್ಷದ ನೇತೃತ್ವವು ಮೇರಿಯ ತಾಯಿಯಾದ ಗಾಯಿಸದ ಮೇರಿಯ ಕಡೆಗೆ ಇದ್ದಿತು. ಅವಳು ಫ್ರಾನ್ಸಿನ ರಾಜಕನ್ಯೆಯಾದುದರಿಂದ ಅವಳ ಒಲವು ಫ್ರಾನ್ಸಿನ ಕಡೆಗಿದ್ದಿತು. ಜಾನ್ ನಾಕ್ಸನು ಪ್ರಾಟೆಸ್ಟಂಟ ಪಕ್ಷದ ಮುಂದಾಳುವಾಗಿದ್ದನು. ಕ್ಯಾಥೊಲಿಕ್ ಪಂಥದವರಿಗೆ ಫ್ರಾನ್ಸಿನ ಬೆಂಬಲವು ಇದ್ದಿತಾದುದರಿಂದ ಅವರಿಗೆ ಯಶವು ದೊರೆತರೆ ಇಂಗ್ಲಂಡಿನಲ್ಲಿ ಎಲಿಝಾಬೆಥ್ ಇವಳಿಗೆ ಹಾನಿತಟ್ಟುವ ಸಂಭವವಿದ್ದಿತು. ಆದುದರಿಂದ ಜಾನ್ ನಾಕ್ಸನ ಪ್ರಾಟೆಸ್ಟಂಟ ಪಕ್ಷಕ್ಕೆ ಸಾಹಾಯ್ಯವೀಯಲು ಎಲಿಝಾಬೆಥ್ ಇವಳು ನಿಶ್ಚಯಿಸಿದಳು. ಇಂಗ್ಲಂಡಿನಿಂದ ಸಾಹಾಯ್ಯವು ದೊರೆತುದರಿಂದ ಜಾನ್ ನಾಕ್ಸನಿಗೆ ಜಯವು ದೊರೆತಿತು. ಅವನು ಲಿಥ್ ಪಟ್ಟಣವನ್ನು ವಶಪಡಿಸಿಕೊಂಡನು. ಆದುದರಿಂದ ಸ್ಕಾಟಲಂಡಿನಲ್ಲಿ ಇರುತ್ತಿದ್ದ ಫ್ರೆಂಚರು ಎಡಿಂಬರೊ ಎಂಬಲ್ಲಿ ಒಪ್ಪಂದವನ್ನು ಮಾಡಿಕೊಂಡರು (೧೫೬೦). ಈ ಒಪ್ಪಂದದಿಂದ ಫ್ರೆಂಚರು ಸ್ಕಾಟಲಂಡಿನಿಂದ ಹೊರಟು ಹೋಗಬೇಕೆಂದು ಗೊತ್ತಾಯಿತು. ಅದರಿಂದ ಎಲಿಝಾಬೆಥ್ ಇವಳಿಗೆ ಸ್ವಲ್ಪ ಮಟ್ಟಿಗೆ ಮನಃಸ್ವಾಸ್ಥ್ಯವು ಉಂಟಾಯಿತು.

**ಎಲಿಝಾಬೆಥ್ ಮತ್ತು ಸ್ಕಾಟಲಂಡಿನ ರಾಣಿ ಮೇರಿ**— ಈ ಬಗೆಯಾಗಿ

ಸ್ಕಾಟಲಂಡಿನ ಪರಿಸ್ಥಿತಿ ಎಲಿಝಾಬೆಥ್ ಇವಳಿಗೆ ಅನುಕೂಲವಾಗುತ್ತಿರಲು ಫ್ರಾನ್ಸಿನ ಅರಸನಾದ ೨ನೆಯ ಫ್ರಾನ್ಸಿಸನು ಅಕಸ್ಮಾತ್ತಾಗಿ ಮರಣಹೊಂದಿದನು (೧೫೬೦). ಆದುದರಿಂದ ಅವನ ಹೆಂಡತಿಯಾದ ಸ್ಕಾಟಲಂಡಿನ ರಾಣಿ ಮೇರಿ ಸ್ಕಾಟಲಂಡಿಗೆ ತಿರುಗಿ ಬರಬೇಕಾಯಿತು. ಅವಳು ೧೫೬೦ರಲ್ಲಿ ಆದ ಎಡಿಂಬರೊ-ಒಪ್ಪಂದವು ತನಗೆ ಮಾನ್ಯವಿಲ್ಲೆಂದು ಸಾರಿದಳು. ಆಗ ಎಲಿಝಾಬೆಥ್ ಇವಳೂ ತನ್ನ ತರುವಾಯದಲ್ಲಿ ಮೇರಿಗೆ ಇಂಗ್ಲಂಡಿನ ಪಟ್ಟಕ್ಕೆ ಅಧಿಕಾರವಿಲ್ಲವೆಂದು ಪ್ರಕಟಗೊಳಿಸಿದಳು. ಆ ತರುವಾಯದಲ್ಲಿ ಸ್ಕಾಟಲಂಡಿನ ರಾಣಿ ಮೇರಿ ಮತ್ತು ಇಂಗ್ಲಂಡಿನ ರಾಣಿ ಎಲಿಝಾಬೆಥ್ ಈ ಇಬ್ಬರು ಸ್ತ್ರೀಯರಲ್ಲಿ ಮುಂದೆ ಸುಮಾರು ೨೭ ವರುಷಗಳ ವರೆಗೆ ಪರಸ್ಪರ ವಿರೋಧವು ಉಳಿದು, ಅನೇಕ ಸಂಚುಗಳು ನಡೆದುವು. ಎಲಿಝಾಬೆಥ್ ಇವಳು ಪ್ರಾಟೆಸ್ಟಂಟ ಪಕ್ಷದ ಅಭಿಮಾನಿಯಾಗಿದ್ದು, ಅವಳು ಕೈಕೊಂಡ ನೀತಿ ರಾಷ್ಟ್ರೀಯವಾಗಿದ್ದಿತು. ಆದರೆ ಮೇರಿ ರೋಮನ್ ಕ್ಯಾಥೊಲಿಕ ಪಕ್ಷದ ತೀವ್ರ ಅನುಯಾಯಿಯಾಗಿದ್ದಳು. ಇಂಗ್ಲಂಡ್ ಮತ್ತು ಸ್ಕಾಟಲಂಡ್ ದೇಶಗಳಲ್ಲಿ ಪೋಪನ ಸತ್ತೆ ಪುನಃ ಸ್ಥಾಪಿತವಾಗಬೇಕೆಂದು ಅವಳ ಮನೀಷೆಯಾಗಿತ್ತು.

**ಫ್ರಾನ್ಸಿನಲ್ಲಿ ಮತ್ತು ಸ್ಕಾಟಲಂಡಿನಲ್ಲಿ ಅಂತಃಕಲಹಗಳು** — ಈ ಸಮಯದಲ್ಲಿ ಫ್ರಾನ್ಸ್ ಮತ್ತು ಸ್ಕಾಟಲಂಡ್ ಈ ದೇಶಗಳಲ್ಲಿ ಧರ್ಮದ ವಿಷಯದಲ್ಲಿ ಅಂತಃಸ್ಥ ಕಲಹಗಳು ಪ್ರಾರಂಭವಾಗಿದ್ದುವು. ಈ ದೇಶಗಳಲ್ಲಿಯ ಧರ್ಮಸುಧಾರಣೆಗೆ ಸಾಹಾಯ್ಯವನ್ನಿತ್ತು ತನ್ನ ಉದ್ದೇಶವನ್ನು ನೆರವೇರಿಸುವುದು ಇಷ್ಟವೆಂಬು ಎಲಿಝಾಬೆಥ್ ಇವಳಿಗೆ ತೋರಿತು. ಫ್ರಾನ್ಸಿನಲ್ಲಿಯ ಪ್ರಾಟೆಸ್ಟಂಟ ಪಂಥದವರಿಗೆ ಹ್ಯೂಗೆನಾಟ್ಸ ಎಂದು ಹೆಸರು. ಅವರಿಗೆ ಎಲಿಝಾಬೆಥ್ ರಾಣಿ ಸಾಹಾಯ್ಯವನ್ನು ಕಳುಹಿದಳು. ಆದರೆ ಈ ಕಾರ್ಯದಲ್ಲಿ ಯಶಸ್ಸು ದೊರೆಯದೆ ೧೫೬೪ರಲ್ಲಿ ಫ್ರಾನ್ಸಿನೊಡನೆ ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು. ೧೫೬೫ರಲ್ಲಿ ಮೇರಿ ತನ್ನ ಬಳಗದವನಾದ ಹೆನ್ರಿ ಡಾರ್ನ್ಲೆ* ಎಂಬವನನ್ನು ಮದುವೆಯಾದಳು. ಡಾರ್ನ್ಲೆ ಕ್ಯಾಥೊಲಿಕ್ ಪಂಥದ ತೀವ್ರ ಅಭಿಮಾನಿಯಾಗಿದ್ದನು. ಇಂಗ್ಲಂಡಿನ ಪಟ್ಟಕ್ಕೆ ಅವನಿಗೆ ಅಲ್ಪ ಅಧಿಕಾರವು ಇದ್ದಿತು. ಆದುದರಿಂದ ಈ ಮದುವೆ ಎಲಿಝಾಬೆಥ್ ಇವಳಿಗೆ ಇಷ್ಟವಾಗಿರಲಿಲ್ಲ. ಈ ಕಾರಣದಿಂದ ಅವಳು ಸ್ಕಾಟಲಂಡಿನಲ್ಲಿಯ ಅರ್ಲ ಆಫ್ ಮರೆ ಇವನಿಗೆ ಉತ್ತೇಜನವನ್ನು ಇತ್ತುದರಿಂದ ಅವನು ಮೇರಿಯ ವಿರುದ್ಧವಾಗಿ ಶಸ್ತ್ರವೆತ್ತಿದನು. ಆದರೆ ಮೇರಿ ಆ ಬಂಡನ್ನು

*ಮುಂದಿನ ಪುಟದಲ್ಲಿಯ ವಂಶವೃಕ್ಷವನ್ನು ನೋಡಿರಿ.

ಮುರಿದು ಮರೆ ಇವನನ್ನು ಸೋಲಿಸಿದಳು. ಆದುದರಿಂದ ಅವನು ಆಶ್ರಯ ಕ್ಕೋಸುಗ ಇಂಗ್ಲಂಡಿಗೆ ಓಡಬೇಕಾಯಿತು. ಈ ಬಂಡನ್ನು ಮುರಿದುದರಿಂದ ಸ್ಕಾಟಲಂಡಿನಲ್ಲಿ ಮೇರಿಯ ವರ್ಚಸ್ಸು ಹೆಚ್ಚಿತು. ಆದರೆ ಅವಳು ಆ ಮೇಲೆ ಮಾಡಿದ ದುಷ್ಟಕೃತಿಗಳಿಂದ ಸ್ಕಾಟಿಶ್ ಜನರ ಬೆಂಬಲವು ಅವಳಿಗೆ ಇಲ್ಲ ದಾಯಿತು. ಆದುದರಿಂದ ಅವಳು ಇಂಗ್ಲಂಡಿಗೆ ಹೋಗಿ ಎಲಿಝಬೆಥ್ ಇವಳ ಆಶ್ರಯವನ್ನು ಪಡೆಯಬೇಕಾಯಿತು. ಮೇರಿಗೆ ಡಾರ್ನ್ಲೆ ಇವನಿಂದ ಜೇಮ್ಸ್ ನೆಂಬ ಮಗನು ಹುಟ್ಟಿದನು (೧೫೬೬). ಡಾರ್ನ್ಲೆ ಮನಸ್ಸಿನಿಂದ ದುರ್ಬಲ ನಾಗಿದ್ದನು. ಅವನು ಮೇರಿಗೆ ಬೇಕಾದವನಾದ ರಿಟ್ಝಿಯೊ ಎಂಬ ಇಟ್ಯಾಲಿ ಯನನನ್ನು ಕೊಂದನಾದುದರಿಂದ ಅವನ ವಿಷಯದಲ್ಲಿ ಮೇರಿಗೆ ತಿರಸ್ಕಾರವು ಹುಟ್ಟಿತು. ಮುಂದೆ ಜೇಮ್ಸ್ ಹೆಪ್‌ಬರ್ನ್ (ಅರ್ಲ ಆಫ್ ಬಾಥ್‌ವೆಲ್) ಎಂಬ ವನು ಒಳಸಂಚನ್ನು ಹೂಡಿ ಡಾರ್ನ್ಲೆಯನ್ನು ಕೊಲಿಸಿದನು (೧೫೬೭). ಡಾರ್ನ್ಲೆಯ ಕೊಲೆಯಾದ ಬಳಿಕ ೧೫೬೭ರಲ್ಲಿ ಮೇರಿ ಜೇಮ್ಸ್ ಹೆಪ್‌ಬರ್ನ ನನ್ನು ಮದುವೆಯಾದಳು. ಆದುದರಿಂದ ಡಾರ್ನ್ಲೆಯ ಕೊಲೆಗೋಸುಗ ಈತನು ರಚಿಸಿದ ಒಳಸಂಚಿನಲ್ಲಿ ಮೇರಿಯ ಅಂಗವಿದ್ದಿರಬಹುದೆಂದು ಜನರಿಗೆ ಸ್ವಾಭಾವಿಕ ವಾಗಿ ಎನಿಸಲಾರಂಭಿಸಿತು.

ಮೇರಿಯ ಈ ಬಗೆಯ ದುಷ್ಕೃತ್ಯವನ್ನು ಕಂಡು ಅಖಿಲ ಸ್ಕಾಟಿಶ್ ಜನ ತೆಯೇ ಅವಳ ವಿರುದ್ಧವಾಗಿ ಎದ್ದಿತು. ಮೇರಿ ರೋಮನ್ ಕ್ಯಾಥಲಿಕ್ ಪಂಥ

---

ಡಾರ್ನ್ಲೆಗೆ ಇಂಗ್ಲಂಡಿನ ಪಟ್ಟಕ್ಕೆ ಅಲ್ಪ ಅಧಿಕಾರವು ಇದ್ದಿತು. ಅದು ಹೇಗೆಂಬುದನ್ನು ತೋರಿ ಸುವ ವಂಶವೃಕ್ಷವು:—



ದವಳಾಗಿದ್ದಳು. ಆದರೆ ಸ್ಕಾಟಲಂಡಿನಲ್ಲಿ ಬಹುಜನ ಸಮಾಜವು ಪ್ರಾಟೆಸ್ಟಂಟ ಪಂಥದ ಅಭಿಮಾನಿಯಾಗಿದ್ದಿತು. ಸ್ಕಾಟಲಂಡಿನಲ್ಲಿಯ ಪ್ರಾಟೆಸ್ಟಂಟ ಪಂಥಕ್ಕೆ ಪ್ರೆಸ್ಬಿಟೇರಿಯನ್ ಪಂಥವೆಂದು ಹೆಸರು. ಈ ಪಂಥದ ಜನರು ಮೇರಿರಾಣಿಯನ್ನು ಪಟ್ಟದಿಂದ ತಳ್ಳಿ ಕಾರಾಗೃಹದಲ್ಲಿರಿಸಿ (೧೫೬೭) ಅವಳ ಮಗನಾದ ಜೇಮ್ಸನಿಗೆ ಪಟ್ಟಗಟ್ಟಿದರು. ಆಗ ಅವನು ಕೇವಲ ಒಂದು ವರುಷದವನಿದ್ದನು. ಅರ್ಲ ಆಫ್ ಮರೆ ಇವನು ರಾಜಪಾಲಕನಾಗಿ ನಿಯೋಜಿಸಲ್ಪಟ್ಟನು. ೧೫೬೮ರಲ್ಲಿ ಮೇರಿ ಕ್ಯಾಥಲಿಕ್ ಪಂಥದ ಜನರ ಸಾಹಾಯ್ಯದಿಂದ ಕಾರಾಗೃಹದಿಂದ ಪಾರಾಗಿ ಬಂದು ತನ್ನ ಶತ್ರುಗಳ ಮುಯ್ಯನ್ನು ತೀರಿಸಲು ಪ್ರಯತ್ನಿಸಿದಳು. ಆದರೆ ಅವಳಿಗೆ ಇದರಲ್ಲಿ ಯಶಸ್ಸು ದೊರೆಯಲಿಲ್ಲ. ಆದುದರಿಂದ ಅವಳು ಇಂಗ್ಲಂಡಿಗೆ ಓಡಿಹೋಗಬೇಕಾಯಿತು. ಎಲಿಝಾಬೆಥ್ ಇವಳು ಮೇರಿಯನ್ನು ಇಂಗ್ಲಂಡಿನ ಉತ್ತರದ ಸೀಮೆಯ ಮೇಲಿನ **ಕಾರ್ಲಿಸ್ಲೆ** ಎಂಬ ಕೋಟೆಯಲ್ಲಿ ಸೆರೆಯಲ್ಲಿಟ್ಟಳು.

**ಎಲಿಝಾಬೆಥ್ ಇವಳ ವಿರುದ್ಧ ಸಂಚು**—ಮೇರಿಯನ್ನು ಸೆರೆಯಲ್ಲಿಡುವುದು ಒಂದು ಗಂಡಾಂತರವೇ ಆಗಿದ್ದಿತು. ಏಕೆಂದರೆ, ಮೇರಿ ಕ್ಯಾಥಲಿಕ್ ಪಂಥದವಳಾಗಿದ್ದು ಎಲಿಝಾಬೆಥ್ ಇವಳ ತರುವಾಯದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಅವಳದೇ ಅಧಿಕಾರವಿದ್ದಿತಾದುದರಿಂದ ಕ್ಯಾಥಲಿಕ್ ಪಂಥದವರು ಎಲಿಝಾಬೆಥ್ ಇವಳ ವಿರುದ್ಧವಾಗಿ ಇಂಗ್ಲಂಡಿನಲ್ಲಿ ಸಂಚುಗಳನ್ನು ರಚಿಸತೊಡಗಿದರು. ೧೫೬೯ರಲ್ಲಿ ಉತ್ತರದ ಕಡೆಯ ಕೆಲವು ಕ್ಯಾಥಲಿಕ್ ಸರದಾರರು ಮೇರಿಯನ್ನು ಸೆರೆಯಿಂದ ಬಿಡಿಸಲೋಸುಗ ಬಂಡನ್ನು ಹೂಡಿದರು. ಆದರೆ ಎಲಿಝಾಬೆಥ್ ಇವಳು ಅದನ್ನು ಒಡನೆಯೆ ಮುರಿದಳು. ೧೫೭೦ರಲ್ಲಿ ಸ್ಕಾಟಲಂಡಿನಲ್ಲಿ ಎಲಿಝಾಬೆಥ್ ರಾಣಿಯ ಪಕ್ಷಗಟ್ಟಿದ ಅರ್ಲ ಮರೆ ಇವನನ್ನು ಒಬ್ಬ ಕ್ಯಾಥೊಲಿಕ ಪಂಥದ ಮನುಷ್ಯನು ಕೊಂದನು. ಅದೇ ವರ್ಷ **ಪೋಪನು (೫ನೆಯ ಪಾಯಸನು)** ಎಲಿಝಾ**ಬೆಥ್ ರಾಣಿಯನ್ನು ಧರ್ಮಬಹಿಷ್ಕೃತೆಯಾಗಿ ಮಾಡಿ**, ರಾಜ್ಯಪದದಿಂದ ಅವಳು ತಳ್ಳಲ್ಪಟ್ಟಿರುವಳೆಂದು ಸಾರಿದನು (೧೫೭೦) ಮತ್ತು ಅವಳ ಪ್ರಜೆಗಳಿಗೆ ಅವಳ ಸತ್ತೆಯನ್ನು ಅಲ್ಲಗಳೆಯಲು ಸ್ವಾತಂತ್ರ್ಯವಿತ್ತನು. ಈ ಸಮಯದಲ್ಲಿ ಇಂಗ್ಲಂಡಿನ ಸುದೈವದಿಂದ ಫ್ರಾನ್ಸ್ ಮತ್ತು ಸ್ಪೇನ ಈ ಎರಡು ಕ್ಯಾಥೊಲಿಕ್ ಪಂಥದ ರಾಷ್ಟ್ರಗಳಿಗೆ ತಮ್ಮ ಅಂತಃಸ್ಥ ರಾಜಕಾರಣದ ಕಡೆಗೆ ಲಕ್ಷ್ಯವನ್ನೀವುದು ಅವಶ್ಯವಾಗಿದ್ದಿತಾದುದರಿಂದ ಇಂಗ್ಲಂಡಿಗೆ ದಾಳಿಯಿಕ್ಕುವುದು ಅವುಗಳಿಗೆ ಶಕ್ಯವಾಗಿರಲಿಲ್ಲ. ಆದರೆ ಇಂಗ್ಲಂಡಿನಲ್ಲಿಯೆ ಎಲಿಝಾಬೆಥ್ ಇವಳ ವಿರುದ್ಧವಾಗಿ ಸಂಚು

ಗಳು ನಡೆದುವು. ನಾರ್ಫಕದ ಸರದಾರನು ೧೫೭೧ರಲ್ಲಿ ಒಂದು ಸಂಚನ್ನು ರಚಿಸಿದನು. ಈ ಸಂಚಿನ ಯೋಜನೆಯಂತೆ ಆರು ಸಾವಿರ ಸ್ಪ್ಯಾನಿಯರ್ಡ ಸೈನಿಕರು ನೆದರ್ಲಂಡಿನೊಳಗಿಂದ ಇಂಗ್ಲಂಡಿಗೆ ಬರಬೇಕೆಂದಿದ್ದಿತು. ಈ ಸೈನಿಕರು ಬಂದೊಡನೆ ಇಂಗ್ಲಂಡಿನಲ್ಲಿಯ ಕ್ಯಾಥಲಿಕ್ ಪಂಥದವರೆಲ್ಲರು ಬಂಡನ್ನು ಹೂಡಿ ಎಲಿಝಬೆಥ್ ಇವಳನ್ನು ಪಟ್ಟದಿಂದ ತಳ್ಳಿ ಅವಳನ್ನು ಸೆರೆಯಲ್ಲಿಟ್ಟು ಮೇರಿಗೆ ಪಟ್ಟಗಟ್ಟಬೇಕೆಂದು ನಿರ್ಣಯವಾಗಿತ್ತು, ಮತ್ತು ನಾರ್ಫಕದ ಸರದಾರನೊಡನೆ ಮೇರಿಯ ಲಗ್ನವಾಗಬೇಕೆಂದೂ ಇದ್ದಿತು. ಆದರೆ ಎಲಿಝಬೆಥ್ ಇವಳ ಮುಖ್ಯಮಂತ್ರಿಯಾದ ವಿಲಿಯಮ್ ಸೆಸಿಲನ ದಕ್ಷತೆಯಿಂದ ಈ ಸಂಚು ಗೊತ್ತಾಗಿ, ನಾರ್ಫಕನು ಶೂಲಕ್ಕೇರಿಸಲ್ಪಟ್ಟನು (೧೫೭೨). ಇದೇ ಬಗೆಯಾಗಿ ರಿಡೊಲ್ಫಿ ಎಂಬ ಇಟ್ಯಾಲಿಯನ್ ವ್ಯಾಪಾರಸ್ಥನು (೧೫೭೧), ಥ್ರಾಕ್ ಮಾರ್ಟನ್ ಇವನು (೧೫೮೪), ಮತ್ತು ಬಬಿಂಗಟನ್ ಇವನು (೧೫೮೬) ರಚಿಸಿದ ಸಂಚುಗಳೆಲ್ಲವು ಬೈಲಿಗೆ ಬಂದುವು. ಬಬಿಂಗಟನ್ ಇವನ ಸಂಚಿನಲ್ಲಿ ಮೇರಿಯ ಅಂಗವಿದ್ದಿತಾದುದರಿಂದ ಅವಳಿಗೆ ಮರಣಶಿಕ್ಷೆ ವಿಧಿಸಲ್ಪಟ್ಟಿತು. ಈ ಬಗೆಯಾಗಿ ೧೮ ವರ್ಷಗಳನ್ನು ಸೆರೆಮನೆಯಲ್ಲಿ ಕಳೆದ ಬಳಿಕ ೧೫೮೭ರಲ್ಲಿ ಸ್ಕಾಟಲಂಡಿನ ರಾಣಿ ಮೇರಿ ಶೂಲಕ್ಕೇರಿಸಲ್ಪಟ್ಟಳು.

ಮೇರಿಯ ಮರಣದ ತರುವಾಯದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ಅವಳಿಗಿದ್ದ ಅಧಿಕಾರವು ಅವಳ ಮಗನಿಗೆ ಎಂದರೆ ಸ್ಕಾಟಲಂಡಿನ ಅರಸನಾದ ಜೇಮ್ಸನಿಗೆ ಬಂದಿತು. ಜೇಮ್ಸನು ಪ್ರಾಟೆಸ್ಟಂಟ ಪಂಥದವನಿದ್ದನಾದುದರಿಂದ ಎಲಿಝಬೆಥ್ ಇವಳ ಬದಲು ಅವನಿಗೆ ರಾಜಪದವು ಪ್ರಾಪ್ತವಾದರೆ ಕ್ಯಾಥಲಿಕ್ ಪಂಥದವರಿಗೆ ಲಾಭವಿರಲಿಲ್ಲ. ಆದುದರಿಂದ ಅವರು ಎಲಿಝಬೆಥ್ ಇವಳ ವಿರುದ್ಧವಾಗಿ ಒಳಸಂಚುಗಳನ್ನು ಹೂಡುವುದನ್ನು ಬಿಟ್ಟುಬಿಟ್ಟರು.

ಇಂಗ್ಲಂಡು ಮತ್ತು ಸ್ಪೇನವು—ಯುರೋಪದಲ್ಲಿಯ ಯಾವ ರಾಷ್ಟ್ರದಿಂದಲೂ ಆಗ ಇಂಗ್ಲಂಡಿಗೆ ಹಾನಿತಟ್ಟುವ ಸಂಭವವಿದ್ದರೆ ಅದು ಸ್ಪೇನದಿಂದಲೆ. ಸ್ಪೇನ ರಾಷ್ಟ್ರವು ಬಲಾಢ್ಯವಾಗಿದ್ದಿತಲ್ಲದೆ ಅಲ್ಲಿಯ ಅರಸನಾದ ೨ನೆಯ ಫಿಲಿಪನು ಕರ್ತೃತ್ವಶಾಲಿಯಾಗಿದ್ದು ರೋಮನ್ ಕ್ಯಾಥಲಿಕ್ ಪಂಥದ ತೀವ್ರ ಅಭಿಮಾನಿಯಾಗಿದ್ದನು. ಆದುದರಿಂದ ಪ್ರಾಟೆಸ್ಟಂಟ ಪಂಥದ ಅನುಯಾಯಿಯಾದ ಇಂಗ್ಲಂಡನ್ನು ನಾಶಗೊಳಿಸಲು ಆತನ ಪ್ರಯತ್ನಗಳು ನಡೆದಿದ್ದುವು. ಅವನ ಸಾಮ್ರಾಜ್ಯದಲ್ಲಿಯ ನೆದರಲಂಡಿನಲ್ಲಿಯ ಪ್ರಾಟೆಸ್ಟಂಟ ಪಂಥದ ಡಚ್ಚರು ಅವನ ವಿರುದ್ಧವಾಗಿ ಬಂಡನ್ನು ಹೂಡಿದುದರಿಂದ ಇಷ್ಟು ದಿವಸಗಳ ವರೆಗೆ

ಇಂಗ್ಲಂಡಿನ ಕಡೆಗೆ ಲಕ್ಷ್ಯವನ್ನೀಯಲು ಆತನಿಗೆ ಅವಕಾಶವು ದೊರೆತಿದ್ದಿಲ್ಲ. ಆದರೆ ಮುಂದೆ ಮುಂದೆ ಡಚ್ಚ್ ಜನರಿಗೆ ಎಲಿಝಾಬೆಥ್ ಇವಳಿಂದಲೆ ಸಾಹಾಯ್ಯವು ದೊರೆಯಲಾರಂಭಿಸಿದುದರಿಂದ ಅವನು ಇಂಗ್ಲಂಡಿನ ವಿರುದ್ಧವಾಗಿ ಶಸ್ತ್ರವನ್ನು ಹಿಡಿಯಬೇಕಾಯಿತು. ಸ್ಪೇನ ಇಂಗ್ಲಂಡುಗಳ ನಡುವೆ ಧರ್ಮದ ವಿಷಯದಲ್ಲಿ ಮನಸ್ತಾಪವು ಉಂಟಾಗಿರಲು ಹೊಸದಾಗಿ ದೊರೆತ ಅಮೇರಿಕೆ ಮತ್ತು ವೆಸ್ಟ ಇಂಡೀಜ ನಡುಗಡ್ಡೆಗಳ ವಿಷಯದಲ್ಲಿ ಮತ್ತು ಇಲ್ಲಿಯ ವ್ಯಾಪಾರದ ವಿಷಯದಲ್ಲಿ ಎರಡು ರಾಷ್ಟ್ರಗಳಲ್ಲಿ ವೈಮನಸ್ಯವು ಉಂಟಾಯ್ತು.

**ಚ್ಯಾನ್ಸೆಲರ, ಫ್ರೊಬಿಶರ ಮತ್ತು ಡೇವಿಸ ಇವರ ಸಮುದ್ರಪರ್ಯಟನವು**—ಸ್ಪೇನ ಮತ್ತು ಪೋರ್ತುಗಾಲ ಇವುಗಳಲ್ಲಿಯ **ಕೋಲಂಬಸ ಮತ್ತು ವಾಸ್ಕೋ-ಡಿ-ಗಾಮಾ** ಎಂಬ ಸಾಹಸಿಗಳು ಅಮೇರಿಕೆಯನ್ನು (೧೪೯೨) ಮತ್ತು ಹಿಂದುಸ್ಥಾನವನ್ನು (೧೪೯೮) ಶೋಧಿಸಿದ್ದರು, ಮತ್ತು **ಮ್ಯಾಗೆಲನ್** (೧೫೨೦—೨೨) ಎಂಬ ಪೋರ್ತುಗೀಜನು ಅನೇಕ ಸಂಕಟಗಳನ್ನು ಇದಿರಿಸಿ ಭೂಪ್ರದಕ್ಷಿಣೆಯನ್ನು ಮಾಡಿದ್ದನು. ಈ ದೂರದೂರದ ಪ್ರದೇಶಗಳಲ್ಲಿ ವ್ಯಾಪಾರವನ್ನು ಮಾಡಿ ಅಲ್ಲಿ ವಸಾಹತುಗಳನ್ನು ಸ್ಥಾಪಿಸಲು ತಮಗೆ ಅಧಿಕಾರವುಂಟೆಂದು ಸ್ಪೇನ ಮತ್ತು ಪೋರ್ತುಗಾಲ ರಾಷ್ಟ್ರಗಳಿಗೆ ಎನಿಸುತ್ತಿತ್ತು. ಈ ಅಧಿಕಾರವನ್ನು ದೃಢಪಡಿಸಲು ಈ ರಾಷ್ಟ್ರಗಳ ಅರಸರು ಕ್ರೈಸ್ತರ ಜಗದ್ಗುರುವಾದ ಪೋಪನಿಂದ ಆಜ್ಞಾಪತ್ರವನ್ನು ಪಡೆದರು. ಅದರಲ್ಲಿ ಹೊಸದಾಗಿ ಶೋಧಿಸಲ್ಪಟ್ಟ ಈ ಪ್ರದೇಶಗಳು ಮತ್ತು ಅವುಗಳ ಜಲಮಾರ್ಗಗಳು ಈ ಎರಡು ರಾಷ್ಟ್ರಗಳಲ್ಲಿ ವಿಭಾಗಿಸಲ್ಪಟ್ಟಿವೆ ಎಂದೂ ಉಳಿದ ಯಾವ ರಾಷ್ಟ್ರವೂ ಈ ರಾಷ್ಟ್ರಗಳ ಸಮ್ಮತಿ ಇಲ್ಲದೆ ಈ ಜಲಮಾರ್ಗವನ್ನು ಉಪಯೋಗಿಸಕೂಡದೆಂದೂ ವಿಧಿಸಲ್ಪಟ್ಟಿತ್ತು. ಆದುದರಿಂದ ಪೌರ್ವಾತ್ಯ ದೇಶಗಳೊಡನೆ ವ್ಯಾಪಾರವನ್ನು ಮಾಡಲು ಬೇರೆಯೊಂದು ಜಲಮಾರ್ಗವನ್ನು ಶೋಧಿಸುವುದು ಅವಶ್ಯವೆಂದೆಣಿಸಿ ಉಳಿದ ಯುರೋಪಿಯನ್ ರಾಷ್ಟ್ರಗಳಲ್ಲಿಯ ಸಾಹಸಿಗಳು ಪ್ರಯತ್ನಿಸತೊಡಗಿದರು. ಇಂಗ್ಲಂಡಿನಲ್ಲಿಯ **ಚ್ಯಾನ್ಸೆಲರ** ಎಂಬ ಸಾಹಸಿ ಈಶಾನ್ಯದಿಕ್ಕಿನಿಂದ ಪೂರ್ವದಿಕ್ಕಿನ ಕಡೆಗೆ ಹೋಗುವ ಜಲಮಾರ್ಗವನ್ನು ಹುಡುಕಲು ೧೫೫೩ರಲ್ಲಿ ಸಮುದ್ರಪ್ರವಾಸವನ್ನು ಕೈಕೊಂಡಿದ್ದನು. ಆದರೆ ಉತ್ತರದಲ್ಲಿಯ ಆರ್ಕ್ಟಿಕ್ ಸಮುದ್ರವು ಯಾವಾಗಲೂ ಹಿಮಮಯವಾಗಿರುವುದರಿಂದ ರಸಿಯಾ ದೇಶದ ಉತ್ತರದ ಕಡೆಯ ಆರ್ಚೆಂಜಲ ಎಂಬ ಬಂದರವನ್ನು ಕಂಡಬಳಿಕ ಮುಂದುವರಿವುದನ್ನು ಅವನು ಬಿಡಬೇಕಾಯಿತು; ಮತ್ತು ಈಶಾನ್ಯದಿಕ್ಕಿನಿಂದ ಪೂರ್ವದ ಕಡೆಗೆ ಹೋಗುವ ಜಲ

ಮಾರ್ಗವು ದೊರೆವುದು ಶಕ್ಯವಿಲ್ಲವೆಂದು ಸಿದ್ಧವಾಯ್ತು. ಇದಾದಬಳಿಕ ಎಷ್ಟೋ ವರ್ಷಗಳ ವರೆಗೆ ಈ ವಿಷಯದಲ್ಲಿ ಪ್ರಯತ್ನಗಳಾಗಲಿಲ್ಲ. ಮುಂದೆ ೧೫೭೬—೭೮ರಲ್ಲಿ ಮಾರ್ಟಿನ್ ಫ್ರೊಬಿಶರ್ ಮತ್ತು ೧೫೮೫—೮೭ರಲ್ಲಿ ಜಾನ್ ಡೇವಿಸ್ ಈ ಸಾಹಸಿಗಳು ವಾಯುವ್ಯದಿಕ್ಕಿನಿಂದ ಪೌರ್ವಾತ್ಯ ದೇಶಗಳಿಗೆ ಹೋಗುವ ಜಲಮಾರ್ಗವನ್ನು ಕಾಣಲು ಪ್ರವಾಸವನ್ನು ಕೈಕೊಂಡರು. ಆದರೆ ೧೪೯೭ರಲ್ಲಿ ಕ್ಯಾಬೆಟ್ ಎಂಬ ಇಂಗ್ಲಿಶ್ ಮನುಷ್ಯನು ಶೋಧಿಸಿದ ಉತ್ತರ ಅಮೇರಿಕೆಗಿಂತ ಮುಂದೆ ಹೋಗಲು ಫ್ರೊಬಿಶರನಿಗೆ ಶಕ್ಯವಾಗಲಿಲ್ಲ. ಅಮೇರಿಕೆಯ ಸೀಮೆಯ ಬಳಿಗೆ ಹೋದಬಳಿಕ ಅವನು ತಿರುಗಬೇಕಾಯಿತು. ಫ್ರೊಬಿಶರನಂತೆ ಡೇವಿಸನು ಪ್ರವಾಸವನ್ನು ಮಾಡಿದನು. ಆದರೆ ಗ್ರೀನಲಂಡ ನಡುಗಡ್ಡೆಯ ಪ್ರದೇಶವನ್ನು ಶೋಧಿಸಿ ಅವನು ಅಲ್ಲಿಗೇ ಕೈಬಿಟ್ಟನು. ಈ ಮೂವರು ಸಾಹಸಿಗಳಂತೆ ಇತರ ಅನೇಕ ಸಮುದ್ರಪ್ರವಾಸಿಗಳು ಒಂದೇ ಸವನೆ ಪ್ರಯತ್ನಿಸುತ್ತಿದ್ದರು. ಈ ಸಾಹಸಿಗಳ ಉದ್ದೇಶವು ಕೈಗೂಡದಿದ್ದರೂ ಪ್ರಕ್ಷುಬ್ಧವಾದ ಸಾಗರಗಳಲ್ಲಿ ಪ್ರತಿಕೂಲವಾದ ಪರಿಸ್ಥಿತಿಯನ್ನಿದಿರಿಸಿ ಸಾಹಸದಿಂದ ಪ್ರವಾಸವನ್ನು ಮಾಡುವ ಪಾಠವನ್ನು ಕಲಿವ ಸಂಧಿ ಇಂಗ್ಲಿಶ್ ಸಮುದ್ರಪ್ರವಾಸಿಗಳಿಗೆ ದೊರೆತುದಾದುದರಿಂದ ಮುಂದೆ ಸ್ಪೇನದಂತಹ ಬಲಾಢ್ಯವಾದ ರಾಷ್ಟ್ರವನ್ನಿದಿರಿಸಿ ಸಮುದ್ರದ ಮೇಲೆ ತನ್ನ ವರ್ಚಸ್ಸನ್ನು ಸ್ಥಾಪಿಸಲು ಇಂಗ್ಲಂಡಿಗೆ ಅನುಕೂಲವಾಯ್ತು.

**ಕಡಲುಗಳ್ಳತನವು**—ಪೂರ್ವದಕಡೆಗೆ ಹೋಗುವ ಜಲಮಾರ್ಗವನ್ನು ಶೋಧಿಸಲು ಪ್ರಯತ್ನಗಳು ನಡೆದಿರುವಾಗ ಸ್ಪೇನದ ವಸಾಹತುಗಳೊಡನೆ ವ್ಯಾಪಾರವನ್ನು ಮಾಡುತ್ತಿದ್ದ ಸ್ಪೇನದ ವ್ಯಾಪಾರಸ್ಥರ ಹಡಗುಗಳನ್ನು ಮುತ್ತಿ ಬೆಳ್ಳಿಬಂಗಾರಗಳಿಂದ ತುಂಬಿದ ಅವರ ಹಡಗುಗಳನ್ನು ಸಮುದ್ರದಲ್ಲಿಯೆ ಸುಲಿಯಲು ಸಾಹಸಿಗಳಾದ ಸಮುದ್ರತೀರದ ಇಂಗ್ಲಿಶ್ ಜನರ ಪ್ರಯತ್ನಗಳು ನಡೆಯುತ್ತಿದ್ದುವು. ಈ ಬಗೆಯಾಗಿ ಸಮುದ್ರದಲ್ಲಿ ಆಗುವ ಈ ಸುಲಿಗೆಯ ವ್ಯವಸಾಯಕ್ಕೆ "ಕಡಲುಗಳ್ಳತನವು" ಎಂದು ಹೆಸರು. ಈ ವ್ಯವಸಾಯದಲ್ಲಿ ಇಂಗ್ಲಂಡ್ ಮತ್ತು ಹಾಲೆಂಡ್ ಈ ದೇಶಗಳಲ್ಲಿಯ ಸಾಹಸಿಗಳೂ ಫ್ರಾನ್ಸಿನಲ್ಲಿಯ ಪ್ರಾಟೆಸ್ಟಂಟ ಪಂಥದ ಹ್ಯೂಗೆನಾಟ್ಸ ಜನರೂ ತೊಡಗಿದ್ದರು. ಈ ಕಡಲ್ಗಳ್ಳತನದಲ್ಲಿ ಕೀಳರೂ ಕಿಡುಕರೂ ಇದ್ದಂತೆ ಸಂಭಾವಿತರೂ ದೊಡ್ಡ ಮನೆತನದವರೂ ಆದ ಎಷ್ಟೊ ನಾವಿಕರು ಕೂಡಿದ್ದರು. ಈ ಸಾಹಸಿಗಳಿಗೆ "ಸೀ ಡಾಗ್ಸ" (Sea dogs—ಕಡಲ್ನಾಯಿಗಳು) ಎಂದು ಹೆಸರು ಬಂದಿತು. ಸ್ಪೇನದಂತಹ ಬಲಾಢ್ಯ ರಾಷ್ಟ್ರದೊಡನೆ ಸಮುದ್ರದ ಮೇಲೆ ಹೋರಾಡುವುದು ಸ್ವಲ್ಪ ಕಠಿಣವೆಂದು ಇಂಗ್ಲಿಶರಿಗೆ ಎನಿಸುತ್ತಿತ್ತು.

## ಯುರೋಪದ ರಾಷ್ಟ್ರಗಳಲ್ಲಿಯ ಸಾಹಸಿಗಳಾದ ನಾವಿಕರು ಮಾಡಿದ ಜಲಪರ್ಯಟನಗಳು.(೧೪೯೦ ರಿಂದ ೧೬೦೦)



ಈ ಕಡಲ್ಗಳ್ಳತನದಿಂದ ಸ್ಪೇನದ ಸಮುದ್ರಪ್ರಭುತ್ವಕ್ಕೆ ಆಘಾತವು ತಟ್ಟುತ್ತಿದ್ದುದರಿಂದ ಕಡಲ್ಗಳ್ಳರ ವಿಷಯದಲ್ಲಿ ಇಂಗ್ಲಂಡಿನ ಜನರಲ್ಲಿ ಸಹಾನುಭೂತಿಯಿತ್ತು.

**ಹಾಕಿನ್ಸ್, ಡ್ರೇಕ್, ಮತ್ತು ಸರ್ ವಾಲ್ಟರ್ ರ್ಯಾಲೆ ಇವರ ಜಲಪರ್ಯಟನಗಳು**—ಈ ಕಾಲದಲ್ಲಿ ಆಫ್ರಿಕೆಯ ಪಶ್ಚಿಮ ತೀರದಲ್ಲಿ ವಾಸಿಸುತ್ತಿದ್ದ ನಿಗ್ರೋಜನರನ್ನು ಹಿಡಿದು ತಂದು ಗುಲಾಮರಾಗಿ ಮಾಡಿ ಅವರನ್ನು ಅಮೇರಿಕೆಯೊಳಗಿನ ಸ್ಪೇನದ ವಸಾಹತುಗಳಲ್ಲಿ ಮಾರುವ ಅಧಿಕಾರವು ಪೋರ್ತುಗೀಜರಿಗೆ ಇದ್ದಂತಾಗಿದ್ದಿತು. ಆಗ ಗುಲಾಮರ ವ್ಯಾಪಾರವನ್ನು ಮಾಡುವ ವ್ಯವಸಾಯವು ಅಯೋಗ್ಯವೆಂದು ತಿಳಿಯಲ್ಪಟ್ಟಿರಲಿಲ್ಲ. ಆದುದರಿಂದ ಈ ವ್ಯವಸಾಯವನ್ನು ತಾನೂ ಮಾಡಬೇಕೆಂದು ೧೫೬೨ರಲ್ಲಿ ಮತ್ತು ೧೫೬೪ರಲ್ಲಿ ಹಾಕಿನ್ಸನು ಎರಡು ಜಲಪರ್ಯಟನಗಳನ್ನು ಮಾಡಿದನು. ಆದರೆ ಈ ವಿಷಯದಲ್ಲಿ ಅವನಿಗೆ ಪೋರ್ತುಗೀಜ ಮತ್ತು ಸ್ಪ್ಯಾನಿಶ್ ವ್ಯಾಪಾರಸ್ಥರಿಂದ ಅತಿಶಯವಾಗಿ ತೊಂದರೆಯಾಯಿತು. ಮುಂದೆ ೧೫೬೭—೬೮ರಲ್ಲಿ ಹಾಕಿನ್ಸನು ಇದೇ ಉದ್ದೇಶದಿಂದ ಮೂರನೆಯ ಸಲ ಜಲಪರ್ಯಟನವನ್ನು ಕೈಕೊಂಡನು. ಈ ಸಲ ಫ್ರಾನ್ಸಿಸ್ ಡ್ರೇಕನೆಂಬ ಸಾಹಸಿ ಅವನ ಒಂದು ಹಡಗದ ಕಪ್ತಾನನಾಗಿದ್ದನು. ಒಮ್ಮೆ ಅಮೇರಿಕೆಯಲ್ಲಿಯ ಸ್ಪೇನದ ವಸಾಹತಿಯ ಬಳಿಯಲ್ಲಿ ಹಾಕಿನ್ಸನ ಹಡಗು ವೈಮರೆತಿರುವಾಗ ಸ್ಪ್ಯಾನಿಶ್ ಹಡಗುಪಡೆಯ ಅಧಿಕಾರಿ ಒಪ್ಪಂದದ ಕರಾರುಗಳನ್ನು ಮುರಿದು ಅದಕ್ಕೆ ದಾಳಿಯಿಕ್ಕಿದನು. ಆದರಿಂದ ಹಾಕಿನ್ಸನಿಗೆ ಬಹಳ ಹಾನಿಯಾಗಿ ಅವನು ಮರಳಿ ಬರಬೇಕಾಯಿತು. ಇದರಿಂದ ಹಾಕಿನ್ಸ್ ಮತ್ತು ಡ್ರೇಕ್ ಇವರಿಗೆ ಸ್ಪೇನದ ವಿಷಯದಲ್ಲಿ ತಿರಸ್ಕಾರವೂ ದ್ವೇಷವೂ ಉಂಟಾಗಿ ಅವರು ಸ್ಪೇನದ ಸಮುದ್ರಸತ್ತೆಯನ್ನು ಮಣ್ಣುಗೂಡಿಸಲು ಪ್ರಯತ್ನಿಸತೊಡಗಿದರು. ೧೫೭೨ರಲ್ಲಿ ಡ್ರೇಕನು ಅಮೇರಿಕೆಯಲ್ಲಿಯ ಸ್ಪೇನದ ವಸಾಹತಿಗೆ ದಾಳಿಯಿಕ್ಕಿ ಅಲ್ಲಿಯ ಸಂಪತ್ತನ್ನು ಕೆಲಮಟ್ಟಿಗೆ ಸುಲಿದುಕೊಂಡು ಬಂದನು. ೧೫೭೭ರಲ್ಲಿ ಅವನು ಮತ್ತೆ ಜಲಪರ್ಯಟನವನ್ನು ಕೈಕೊಂಡನು. ಆಗ ಅವನು ಅಮೇರಿಕೆಯ ಪಶ್ಚಿಮಸಮುದ್ರತೀರಕ್ಕೆ ಹೋಗಿ ಅಲ್ಲಿಂದ ಹಾಗೆಯೆ ಮುಂದೆ ತನ್ನ ಹಡಗನ್ನು ಪಶ್ಚಿಮಕ್ಕೆ ಹೊರಳಿಸಿ ಆವರೆಗೂ ಅಜ್ಞಾತವಾದ ಪ್ಯಾಸಿಫಿಕ್ ಮಹಾಸಾಗರದ ಕಡೆಗೆ ಬಂದನು. ಅನಂತರದಲ್ಲಿ ಬಗೆಬಗೆಯ ಸಂಕಟಗಳನ್ನು ಅವನು ಇದಿರಿಸುತ್ತ ಮೂರು ವರುಷಗಳ ವರೆಗೆ ಪ್ರವಾಸಮಾಡಿ ೧೫೮೦ರಲ್ಲಿ ಭೂಪ್ರದಕ್ಷಿಣೆಯನ್ನು ಮಾಡುತ್ತ ಇಂಗ್ಲಂಡಿಗೆ ಮರಳಿದನು. ಈ ಜಲಪರ್ಯಟನದಿಂದ ಇಂಗ್ಲಂಡಿನಲ್ಲಿ ಅವನ ಕೀರ್ತಿ ಎಲ್ಲೆಲ್ಲಿಯೂ ಬಹಳವಾಗಿ ಹಬ್ಬಿತು. ಎಲಿಝಬೆಥ್ ರಾಣಿ ಅವನ **ಗೋಲ್ಡನ್**

ಹಿಂದ ಎಂಬ ಹಡಗಿನ ಮೇಲೆ ಬಂದು ಅವನಿಗೆ "ನಾಯಿಟ್" ಎಂದರೆ "ಸರದಾರ" ಎಂಬ ಬಹುಮಾನದ ಬಿರುದನಿತ್ತಳು. ಡ್ರೇಕನಂತೆ ಸರ್ ವಾಲ್ಟರ




ಫ್ರಾನ್ಸಿಸ್ ಡ್ರೇಕ

ರ್ಯಾಲೆ ಎಂಬ ಇನ್ನೊಬ್ಬ ಸಾಹಸಿಯಾದ ಜಲಪ್ರವಾಸಿ ಇದ್ದನು. ಅವನು

ಉತ್ತರ ಅಮೇರಿಕೆಯಲ್ಲಿ ಎಲಿಝಾಬೆಥ್ ರಾಣಿಯ ಹೆಸರಿನಿಂದ ವರ್ಜಿನಿಯಾ ಎಂಬ ವಸಾಹತನ್ನು ಸ್ಥಾಪಿಸಲು ಯತ್ನಿಸಿದನು (೧೫೮೪). ಆದರೆ ಅವನಿಗೆ ಯಶವು ದೊರೆಯಲಿಲ್ಲ.

**ಜೆಸುಯಿಟ್ ಜನರ ಆಂದೋಲನವು**—ಇಂಗ್ಲಂಡಿನಲ್ಲಿ ಅದೆ ತಲೆಯೆತ್ತುತ್ತಿದ್ದ ಜೆಸುಯಿಟ್ ಪಂಥದಿಂದ ಎಲಿಝಾಬೆಥ್ ಇವಳಿಗೆ ತೊಂದರೆಯಾಗುವ ಸಂಭವವಿದ್ದಿತು. ಇಂಗ್ಲಂಡಿನಲ್ಲಿ ಧರ್ಮಸುಧಾರಣೆಯಾಗಿ ಪ್ರಾಟೆಸ್ಟಂಟ ಪಂಥದ ಸ್ಥಾಪನೆಯಾಗಲು, ಅನೇಕ ರೋಮನ ಕ್ಯಾಥೊಲಿಕರು ದೇಶತ್ಯಾಗವನ್ನು ಮಾಡಿ ಕ್ಯಾಥಲಿಕ್ ಪಂಥಕ್ಕೆ ಮಾನವಿತ್ತ ದೇಶಗಳಿಗೆ ಹೋಗಿ ಅಲ್ಲಿ ಧರ್ಮಾಧಿಕಾರಿಗಳ ಅಧಿಕಾರವನ್ನು ಸಂಪಾದಿಸಿದರು. ಪರರಾಷ್ಟ್ರಗಳಲ್ಲಿ ಅವರು ಹೀಗೆ ಇರುತ್ತಿರುವಾಗ ಇಗ್ನೇಸಿಯಸ್ ಲಾಯೋಲಾ ಎಂಬ ಸ್ಪ್ಯಾನಿಶ್ ಮನುಷ್ಯನು ಸ್ಥಾಪಿಸಿದ ಜೆಸುಯಿಟ್ ಪಂಥವನ್ನು ಅವರು ಸ್ವೀಕರಿಸಿದರು. ಕೈಸ್ತರಲ್ಲದ ಜನಾಂಗಗಳಲ್ಲಿ ಹೋಗಿ ನಿಂತು ಅಲ್ಲಿ ಕೈಸ್ತಧರ್ಮದ ಪ್ರಸಾರವನ್ನು ಮಾಡುವುದು ಈ ಪಂಥದ ಮುಖ್ಯ ಉದ್ದೇಶವಿತ್ತು. ಈ ಪಂಥದವರಿಗೆ ಪೋಪನಲ್ಲಿ ಸಂಪೂರ್ಣ ವಿಶ್ವಾಸವಿದ್ದಿತು, ಮತ್ತು ಅವನ ಎಲ್ಲ ಆಜ್ಞೆಗಳನ್ನು ಪ್ರಮಾಣವಾಗಿ ತಿಳಿವೆವೆಂದು ಅವರು ವಚನವಿತ್ತಿದ್ದರು. ಸರಲವರ್ತನವೂ ಉದಾತ್ತವಿಚಾರವೂ ಅವರ ಧ್ಯೇಯವು. ಅವರಲ್ಲಿ ಎಷ್ಟೋ ಜನರು ಪರರಾಷ್ಟ್ರಗಳಲ್ಲಿ ಕೆಲಕಾಲವನ್ನು ಕಳೆದ ಬಳಿಕ ಮತ್ತೆ ತಮ್ಮ ದೇಶಕ್ಕೆ ಹೋಗಿ ಅಲ್ಲಿ ಕ್ಯಾಥಲಿಕ್ ಪಂಥದ ಪ್ರಸಾರವನ್ನು ಮಾಡಬಯಸಿ ಇಂಗ್ಲಂಡಿಗೆ ಮರಳಿ ಬಂದರು. ಈ ಬಗೆಯಾಗಿ ಜೆಸುಯಿಟ್ ಕ್ಯಾಥಲಿಕ್ ಜನರ ಸಂಖ್ಯೆ ಇಂಗ್ಲಂಡಿನಲ್ಲಿ ಬಹಳವಾಗಿ ಬೆಳೆಯ ತೊಡಗಿತು. ಈ ಪರಿಸ್ಥಿತಿಯಲ್ಲಿ ೧೫೭೦ರಲ್ಲಿ ಪೋಪನು ಒಂದು ಆಜ್ಞಾಪತ್ರವನ್ನು ಪ್ರಕಟಿಸಿ ಎಲಿಝಾಬೆಥ್ ರಾಣಿ ಧರ್ಮಬಹಿಷ್ಕೃತೆಯಾಗಿರುವಳೆಂದೂ ಇಂಗ್ಲಂಡಿನ ಪಟ್ಟದಿಂದ ಅವಳು ತಳ್ಳಲ್ಪಟ್ಟಿರುವಳೆಂದೂ ಸಾರಿದನು. ಇದರಿಂದ ಇಂಗ್ಲಂಡಿನಲ್ಲಿಯ ಪೋಪನ ಅನುಯಾಯಿಗಳ ಸ್ಥಿತಿ ಬಹು ವಿಚಿತ್ರವಾಯಿತು. ಪೋಪನ ಅನುಯಾಯಿಗಳಾಗಿ ಉಳಿದು ಎಲಿಝಾಬೆಥ್ ಇವಳ ಪ್ರಭುತ್ವವನ್ನು ಮಾನ್ಯಮಾಡುವುದು ಅವರಿಗೆ ಶಕ್ಯವಿರಲಿಲ್ಲ. ಜೆಸುಯಿಟ್ ಪಂಥದ ಆಂದೋಲನವನ್ನು ಹಾಗೆಯೆ ಸಾಗಗೊಟ್ಟರೆ, ರೋಮನ್ ಕ್ಯಾಥೊಲಿಕ್ ರಾಷ್ಟ್ರಗಳಿಂದ ಇಂಗ್ಲಂಡಿನ ಮೇಲೆ ದಾಳಿ ಬಂದರೆ ಇಂಗ್ಲಂಡಿನಲ್ಲಿಯ ಈ ಜನರು ಬಂಡುಮಾಡದೆ ಉಳಿಯರೆಂದು ಎಲಿಝಾಬೆಥ್ ಇವಳಿಗೆ ಭೀತಿಯುಂಟಾಯಿತು. ಆದುದರಿಂದ ಅವಳು ಜೆಸುಯಿಟ್ ಪಂಥದವರ ಆಂದೋಲನವನ್ನು ಮುರಿದಿಕ್ಕಲು ಅವರಲ್ಲಿಯ ಕೆಲವು

ಮುಂದಾಳುಗಳನ್ನು ಸೆರೆಹಿಡಿದು ರಾಜದ್ರೋಹದ ಆರೋಪವನ್ನಿಟ್ಟು ಅವರನ್ನು ಕಠೋರವಾದ ಶಿಕ್ಷೆಗೆ ಗುರಿಮಾಡಿದುದಲ್ಲದೆ ಕೆಲವರನ್ನು ಶೂಲಕ್ಕೇರಿಸಿದಳು. ೧೫೬೧ರಲ್ಲಿ ಪಾರ್ಲಿಮೆಂಟ ಸಭೆ ಇಂಗ್ಲಂಡಿನ **ಎಪಿಸ್ಕೊಪೇಲಿಯನ್*** ಧರ್ಮ ಪಂಥದಂತೆ ಪ್ರಾರ್ಥನೆಮಾಡಲು ಒಪ್ಪದ ಜನರ ವಿರುದ್ಧವಾಗಿ ಉಗ್ರವಾದ ಕಾಯದೆಯನ್ನು ಮಾಡಿತು. ಈ ಕಾಯದೆಯನ್ನು ಮುರಿದವರ ವಿಚಾರಣೆಗೋಸುಗ ಎಲಿಝಬೆಥ್ ರಾಣಿ **"ಹಾಯ್ ಕಮಿಶನ್ ಕೋರ್ಟನ್ನು"** ಸ್ಥಾಪಿಸಿದಳು (೧೫೬೩).

**ಹಾಯ್ ಕಮಿಶನ್ ಕೋರ್ಟು**—ಹಾಯ್ ಕಮಿಶನ್ ಕೋರ್ಟು ಕ್ಯಾಥಲಿಕ್ ಪಂಥದವರಿಗೆ ಶಿಕ್ಷೆಯನ್ನು ವಿಧಿಸುತ್ತಿತ್ತು. ಅದರಂತೆ ಧಾರ್ಮಿಕ ವಿಷಯದಲ್ಲಿ ಹೆಚ್ಚಿನ ಸುಧಾರಣೆಯಾಗಬೇಕೆಂಬ **ಪ್ಯುರಿಟನ್ಸ್, ಡಿಸೆಂಟರ್ಸ** (ಇಂಗ್ಲಂಡಿನ ಧರ್ಮಪಂಥದಿಂದ ಬೇರೆಯಾದವರು), **ನಾನ್‌ಕನ್‌ಫಾರ್ಮಿಸ್ಟ್ಸ** (ಇಂಗ್ಲಂಡಿನ ಧರ್ಮಪಂಥವನ್ನು ಮನ್ನಿಸದಿದ್ದವರು) ಮೊದಲಾದ ಶೀಘ್ರಗಾಮಿಗಳಾದ ಪ್ರಾಟೆಸ್ಟಂಟ ಪಂಥದವರಿಗೂ ಈ ಕೋರ್ಟಿನಿಂದ ಶಿಕ್ಷೆಯಾಗುತ್ತಿತ್ತು. ಆದರೆ ಪ್ಯುರಿಟನ್ ಪಂಥವು ಇದರಿಂದ ಮುರಿಯದೆ ಅದರ ಪ್ರಭಾವವೂ ಪ್ರಸಾರವೂ ಬೆಳೆಯತೊಡಗಿದುವು.

**ಎಲಿಝಬೆಥ್ ರಾಣಿಯಿಂದ ಡಚ್ಚರಿಗೆ ಸಾಹಾಯ್ಯವು**—ನೆದರ್ಲಂಡ ದೇಶವು ಸ್ಪೇನದ ಸಾಮ್ರಾಜ್ಯಕ್ಕೊಳಪಟ್ಟಿದ್ದಿತು. ಈ ದೇಶದಲ್ಲಿ ೧೭ ಸಂಸ್ಥಾನಗಳಿದ್ದುವು. ಅವುಗಳಲ್ಲಿ ದಕ್ಷಿಣದ ೧೦ ಸಂಸ್ಥಾನಗಳು ರೋಮನ್ ಕ್ಯಾಥಲಿಕ್ ಪಂಥದವು ಮತ್ತು ಉತ್ತರದ ೭ ಸಂಸ್ಥಾನಗಳು ಪ್ರಾಟೆಸ್ಟಂಟ ಪಂಥದವು ಆಗಿದ್ದುವು. ಅಲ್ಲಿಯ ಪ್ರಾಟೆಸ್ಟಂಟ ಪಂಥದ ಉಚ್ಚಾಟನವನ್ನು ಮಾಡಲು ಸ್ಪೇನದ ರಾಜನಾದ ೨ನೆಯ ಫಿಲಿಪನು **ಡ್ಯೂಕ ಆಫ್ ಪಾರ್ಮಾ** ಎಂಬವನನ್ನು ನೆದರಲಂಡಿನ ಗವರ್ನರನಾಗಿ ಮಾಡಿ ಕಳುಹಿದನು. ಸ್ಪೇನದ ದಬ್ಬಾಳಿಕೆಗೆ ನೆದರಲಂಡಿನಲ್ಲಿಯ ಜನರು ಬೇಸತ್ತಿದ್ದರು. ಈಗ ಧಾರ್ಮಿಕ ವಿಷಯದಲ್ಲಿಯೂ ಅದರಿಂದ ತಮಗೆ ಪೀಡೆಯಾಗಬಹುದೆಂದು ಆಲೋಚಿಸಿ ಪ್ರಾಟೆಸ್ಟಂಟ ಪಂಥದ ಏಳು ಸಂಸ್ಥಾನಗಳು ತಮ್ಮೊಳಗೆ ಒಂದಾಗಿ (೧೫೭೯) **ಆರೇಂಜದ ವಿಲಿಯಮ್** ಎಂಬವನ ನೇತೃತ್ವದಲ್ಲಿ ಸ್ಪೇನದ ವಿರುದ್ಧವಾಗಿ ಬಂಡನ್ನು ಹೂಡಿದುವು. ಇವುಗಳಲ್ಲಿ ಹಾಲಂಡ ಸಂಸ್ಥಾನವು

---

*ಎಪಿಸ್ಕೊಪೇಲಿಯನ್—ಇಂಗ್ಲಂಡಿನಲ್ಲಿ ಧರ್ಮಸುಧಾರಣೆಯಾಗಿ ಅಲ್ಲಿ ಸ್ಥಾಪಿತವಾದ ಧರ್ಮಪಂಥಕ್ಕೆ ಎಪಿಸ್ಕೊಪೇಲಿಯನ್ ಪಂಥವೆಂದು ಹೆಸರು. ಈ ಪಂಥದಲ್ಲಿ ಚರ್ಚಿಗೆ ಸಂಬಂಧಪಟ್ಟ ವ್ಯವಸ್ಥೆ ಬಿಶಪ್ ಎಂಬ ಧರ್ಮಾಧಿಕಾರಿಯ ಮುಖಾಂತರವಾಗಿ ನಡೆಯುತ್ತದೆ.

ಪ್ರಮುಖವಾಗಿದ್ದಿತ್ತು. ಆದುದರಿಂದ ನೆದರಲಂಡಿನಲ್ಲಿಯ ಈ ಸಂಯುಕ್ತ ಸಂಸ್ಥಾನಗಳಿಗೆ **ಹಾಲಂಡೆಂದೂ** ಅಲ್ಲಿಯ ಜನರಿಗೆ **ಡಚ್** ಎಂದೂ ಹೆಸರುಗಳು ಬಂದುವು. ಡಚ್ಚರು ಸ್ಪೇನದ ವಿರುದ್ಧವಾಗಿ ತಮಗೆ ಸಾಹಾಯ್ಯವನ್ನೀಯ ಬೇಕೆಂದು ಎಲಿಝಬೆಥ್ ಇವಳನ್ನು ಕೇಳಿದರು. ಡಚ್ಚರಿಗೆ ಸಾಹಾಯ್ಯಮಾಡಿದರೆ ಜೆಸುಯಿಟ್ ಮತ್ತು ರೋಮನ್ ಕ್ಯಾಥಲಿಕ್ ಪಂಥದ ಜನರ ಸಾಹಾಯ್ಯದಿಂದ ಇಂಗ್ಲಂಡಿನ ಮೇಲೆ ದಾಳಿಮಾಡಬೇಕೆಂಬ ಸ್ಪೇನದ ಉದ್ದೇಶವನ್ನು ಮುರಿದೊಗೆಯಲು ಅನುಕೂಲವಾಗಬಹುದೆಂದು ಬಗೆದು ಎಲಿಝಬೆಥ್ ಇವಳು ಡಚ್ಚರ ಸಾಹಾಯ್ಯಕ್ಕೆ ಸೈನ್ಯವನ್ನು ಕಳುಹಿದಳು (೧೫೮೫). ಈ ಸೈನ್ಯದ ಸೇನಾಪತಿ ಡಡ್ಲೆ, **ಅರ್ಲ ಆಫ್ ಲೆಸ್ಟರ್** ಇವನಾಗಿದ್ದನು. ಆದರೆ ಲೆಸ್ಟರನಿಗೆ ಡಚ್ಚ ಜನರ ಯಾವ ಹಿತವನ್ನೂ ಸಾಧಿಸುವುದಾಗಲಿಲ್ಲ. **ಸರ್ ಫಿಲಿಪ್ ಸಿಡ್ನಿ*** ಮೊದಲಾದ ಇಂಗ್ಲಿಶರು ಡಚ್ಚರಿಗೆ† ಬಹಳವಾಗಿ ಸಾಹಾಯ್ಯವನ್ನಿತ್ತರು. ಸ್ಪೇನದ ಸಮುದ್ರಸತ್ತೆಯನ್ನು ಕುಗ್ಗಿಸಲು ಎಲಿಝಬೆಥ್ ಇವಳು ಸ್ಪೇನದ ವಶದಲ್ಲಿದ್ದ ಅಮೇರಿಕೆಯ ಬಳಿಯ ವೆಸ್ಟ ಇಂಡೀಜ ನಡುಗಡ್ಡೆಗಳಿಗೆ ದಾಳಿಯಿಕ್ಕಲು ಡ್ರೇಕನ ನೇತೃತ್ವದಲ್ಲಿ ಒಂದು ಹಡಗುಪಡೆಯನ್ನು ಕಳುಹಿದಳು. ಈ ಬಗೆಯಾಗಿ ಇಂಗ್ಲಂಡ ಮತ್ತು ಸ್ಪೇನ ಈ ರಾಷ್ಟ್ರಗಳಲ್ಲಿ ವ್ಯಾಪಾರ, ವಸಾಹತು, ಸಮುದ್ರಪ್ರಭುತ್ವ ಮತ್ತು ಧಾರ್ಮಿಕ ಪ್ರಶ್ನೆ ಇವುಗಳ ವಿಷಯದಲ್ಲಿ ಪರಸ್ಪರ ಮನಸ್ತಾಪವು ಹೆಚ್ಚಿತು. ಈ ವಿಷಯದಲ್ಲಿ ಒಮ್ಮೆ ಕೊನೆಯ ನಿರ್ಣಯವನ್ನು ಮಾಡಲು ಈ ಎರಡೂ ರಾಷ್ಟ್ರಗಳು ಬೇಗನೆ ಯುದ್ಧಕ್ಕೆ ತೊಡಗುವುವೆಂಬ ಮಾತು ಸ್ಪಷ್ಟವಾಗಿ ತೋರಿತು.

**ಇಂಗ್ಲಂಡಿಗೆ ದಾಳಿಯಿಕ್ಕಲು ಫಿಲಿಪನ ಯೋಜನೆ**—೧೫೮೮ರಲ್ಲಿ

---

* ಸಿಡ್ನಿ—ಸರ್ ಫಿಲಿಪ್ ಸಿಡ್ನಿ ಇವನು ಯುದ್ಧಕುಶಲನೂ ಲೇಖಕನೂ ಪರೋಪಕಾರಿಯೂ ಒಂದು ಪ್ರಸಿದ್ಧನಾಗಿದ್ದನು. ಇವನು ೧೫೮೬ರಲ್ಲಿ ಝುಟಫೇನದ ಯುದ್ಧದಲ್ಲಿ ಮರಣಹೊಂದಿದನು. ಸಾಯುವ ಕಾಲದಲ್ಲಿ ಅವನ ಔದಾರ್ಯದ ಮತ್ತು ಸ್ವಾರ್ಥತ್ಯಾಗದ ದರ್ಶಕವಾದ ಈ ಕೆಳಗಿನ ಸಂಗತಿ ಯುದ್ಧದಲ್ಲಿ ಜರುಗಿತು.

ಯುದ್ಧದಲ್ಲಿ ಗಾಯಗೊಂಡು ಸಿಡ್ನಿ ಬೇರೆಡೆಗೆ ಒಯ್ಯಲ್ಪಡುತ್ತಿರುವಾಗ ನೀರಡಿಸಿ ನೀರನ್ನು ಬೇಡಿದನು. ನೀರಿನ ಬಟ್ಟಲನ್ನು ತನ್ನ ತುಟಿಗೆ ಹಚ್ಚುವ ಸಮಯದಲ್ಲಿ ಸಮೀಪದಲ್ಲಿಯೇ ಗಾಯಗೊಂಡು ಬಿದ್ದ ಒಬ್ಬ ಸೈನಿಕನ ಕಡೆಗೆ ಅವನ ದೃಷ್ಟಿ ಹೋಯಿತು. ಆತನು ನೀರಡಿಸಿ ತಾನು ಕುಡಿಯುತ್ತಿದ್ದ ಬಟ್ಟಲಕಡೆಗೆ ಆತುರವಾಗಿ ನೋಡುತ್ತಿದ್ದುದು ಅವನ ಲಕ್ಷ್ಯದಲ್ಲಿ ಬಂದಿತು. ಒಡನೆಯೆ ಅವನು ಆ ಬಟ್ಟಲನ್ನು ಆ ಸೈನಿಕನಿಗೆ ಕೊಡಿಸಿ, "ನನ್ನ ಬವಣೆಗಿಂತ ನಿನ್ನದು ಹೆಚ್ಚಿನದು, ನೀನೆ ಈ ನೀರನ್ನು ಕುಡಿಯಬೇಕು' ಎಂದು ನುಡಿದನು.

† ೧೫೯೭ರಲ್ಲಿ ಡಚ್ಚರು ಸ್ಪಾನಿಯರ್ಡರನ್ನು ಸೋಲಿಸಿದರು; ಮತ್ತು ೧೬೦೯ರಲ್ಲಿ ಸ್ಪೇನವು ಅವರ ಸ್ವಾತಂತ್ರ್ಯವನ್ನು ಮನ್ನಿಸಿತು.

ಸ್ಕಾಟಲಂಡಿನ ರಾಣಿ ಮೇರಿ ಶೂಲಕ್ಕೇರಿಸಲ್ಪಟ್ಟಿದ್ದಳು. ಅವಳು ಸಾಯುವ ಪೂರ್ವದಲ್ಲಿ ಇಂಗ್ಲಂಡಿನ ಪಟ್ಟಕ್ಕೆ ತನ್ನನ್ನೇ ಅಧಿಕಾರಿಯಾಗಿ ನಿರ್ಣಯಿಸಿದಳೆಂದು ಸ್ಪೇನದ ರಾಜನಾದ **ಎರಡನೆಯ ಫಿಲಿಪನು** ಹೇಳತೊಡಗಿದನು. ಸಮುದ್ರ ಪ್ರಭುತ್ವ, ವಸಾಹತುಗಳು ಮತ್ತು ಧರ್ಮ ಇವೇ ಮೊದಲಾದುವುಗಳ ವಿಷಯ ವಾಗಿ ಮೊದಲೆ ಮನಸ್ತಾಪವಿದ್ದಿತು. ಈ ಕಾರಣದಿಂದಲೂ ಪ್ರಾಟೆಸ್ಟಂಟ ಪಂಥವನ್ನು ಸಮೂಲವಾಗಿ ಕಿತ್ತೊಗೆಯಬೇಕೆಂಬ ಉದ್ದೇಶದಿಂದಲೂ ಫಿಲಿಪನು ಸಮುದ್ರಯುದ್ಧಮಾಡಿ ಇಂಗ್ಲಂಡಿನ ಬಲವನ್ನು ಮುರಿಯಬೇಕೆಂದು ಯೋಚಿಸಿ ದನು. ಪ್ರಸಿದ್ಧನೂ ಕರ್ತೃತ್ವಶಾಲಿಯೂ ಸಮುದ್ರಯುದ್ಧದಲ್ಲಿ ಕುಶಲನೂ ಆದ **ಮ್ಯಾರ್ಕ್ವಿಸ ಸಾಂಟಾ ಕ್ರೂಜ** ಎಂಬವನನ್ನು ಫಿಲಿಪನು ಸ್ಪೇನದ ಹಡಗುಪಡೆಯ ಆಡ್ಮಿರಲನಾಗಿ (ಹಡಗುಪಡೆಯ ಸೇನಾಪತಿಯಾಗಿ) ನಿಯೋಜಿಸಿದನು, ಮತ್ತು ಅವನ ನೇತೃತ್ವದಲ್ಲಿ ಸಮುದ್ರಯುದ್ಧದ ಸಿದ್ಧತೆಯನ್ನು ಪ್ರಾರಂಭಿಸಿದನು. ದೂರದ ಸ್ಥಳಗಳಲ್ಲಿ ಯುದ್ಧದ ಹಡಗುಗಳೆಲ್ಲವೂ ಈ ದಾಳಿಗೋಸುಗ ಕ್ಯಾಡಿಝ್ ಮತ್ತು ಲಿಸ್ಬನ್* ಬಂದರಗಳಿಗೆ ತರಿಸಲ್ಪಟ್ಟುವು. ಸ್ಪೇನದ ಬಳಿಯಲ್ಲಿ ಸ್ಪ್ಯಾನಿಶ್ ಹಡಗುಪಡೆಯನ್ನು ಒಂದೆಡೆಯಲ್ಲಿ ತಂದು, ಆ ಬಳಿಕ ಇಂಗ್ಲಿಶ್ ಚ್ಯಾನಲಿನ ಮೇಲೆ ಪ್ರಭುತ್ವವನ್ನು ಸ್ಥಾಪಿಸಿ, ನೆದರ್ಲಂಡಿನಲ್ಲಿದ್ದ ಸ್ಪ್ಯಾನಿಶ್ ಸೈನ್ಯವನ್ನು ಇಂಗ್ಲಂಡಿಗೆ ಒಯ್ದು ಅಲ್ಲಿ ಇಂಗ್ಲಿಶ್ ಸೈನ್ಯದೊಡನೆ ಭೂಯುದ್ಧವನ್ನು ಮಾಡಬೇಕೆಂದು ಸಾಂಟಾ ಕ್ರೂಜನ ಯೋಜನೆ ಇದ್ದಿತು.

ದಾಳಿ ಬರುವುದೆಂಬ ಸುದ್ದಿ ಇಂಗ್ಲಂಡಿಗೆ ತಿಳಿದೊಡನೆ ಅದನ್ನು ಇದಿರಿಸಲು ಸಿದ್ಧತೆ ಪ್ರಾರಂಭವಾಯಿತು. ಶತ್ರುಗಳ ಪ್ರಚಂಡವಾದ ಹಡಗುಪಡೆಯ ದಾಳಿ ಬರುವುದಕ್ಕೆ ಮೊದಲೆ ಶತ್ರುಗಳಲ್ಲಿ ಹೊಕ್ಕು ಅವರನ್ನು ನಾಶಗೊಳಿಸಬೇಕೆಂದು ಡ್ರೇಕನು ಯೋಜಿಸಿದನು. ಅವನು ತನ್ನ ಕೇವಲ ಮೂವತ್ತು ಹಡಗುಗಳೊಡನೆ ಹೊರಟು ಕ್ಯಾಡಿಜ್ ಬಂದರದ ಬಳಿಯಲ್ಲಿರುವ ಸ್ಪೇನದ ಯುದ್ಧದ ಮತ್ತು ವ್ಯಾಪಾರದ ಹಡಗುಗಳ ಮೇಲೆ ದಾಳಿಯಿಟ್ಟು ಎಷ್ಟೋ ಹಡಗುಗಳನ್ನು ನಾಶಗೊ ಳಿಸಿದನು (ಎಪ್ರಿಲ್ ೧೫೮೭). ಆ ಬಳಿಕ ತಿರುಗಿ ಬರುವಾಗ ಅವನು ಪೋರ್ತುಗಾಲದ ತೀರದ ಬಳಿಯಲ್ಲಿ ಅಮೇರಿಕೆಯಿಂದ ಬೆಳ್ಳಿ, ಬಂಗಾರ, ರತ್ನ, ರೇಶಿಮೆ ಮೊದಲಾದ ಬೆಲೆಯುಳ್ಳ ವಸ್ತುಗಳನ್ನು ತುಂಬಿಕೊಂಡು ಬರುತ್ತಿರುವ ಸ್ಪೇನದ

---

* ಪೋರ್ತುಗಾಲದ ರಾಜಧಾನಿ. ಪೋರ್ತುಗಾಲ ದೇಶವು ೧೫೮೦ರಿಂದ ೧೬೪೦ರ ವರೆಗೆ ಸ್ಪೇನದ ಪ್ರಭುತ್ವಕ್ಕೆ ವಶವಾಗಿದ್ದಿತು.

ಒಂದು ವ್ಯಾಪಾರದ ಹಡಗಿನ ಮೇಲೆ ದಾಳಿಯಿಟ್ಟನು. ಆ ಸುಲಿಗೆಯಿಂದ ಅವನಿಗೆ ಬಹಳ ಸಂಪತ್ತು ದೊರೆತಿತು.

**ಸ್ಪೇನದ "ಅಜಿಂಕ್ಯ"ವಾದ ಹಡಗುಪಡೆ**—ಸ್ಪೇನದ ಹಡಗುಪಡೆ ಒಂದೆಡೆಯಲ್ಲಿ ಬರುವ ಮೊದಲೆ ಸಾಂಟಾ ಕ್ರೂಜನು ಮರಣಹೊಂದಿದನು. ಆಗ **ಡ್ಯೂಕ ಮೆಡಿನಾ ಸಿಡೋನಿಯಾ** ಎಂಬವನು ಈ ಹಡಗುಪಡೆಯ ಆಡ್ಮಿರಲನಾದನು. ಮೆಡಿನಾ ಸಿಡೋನಿಯಾ ಇವನು ಸ್ಪೇನದಲ್ಲಿಯ ಒಬ್ಬ ಸರದಾರನಾಗಿದ್ದನು. ಆದರೆ ಅವನಿಗೆ ಸಮುದ್ರಯುದ್ಧದ ಜ್ಞಾನವು ಸ್ವಲ್ಪವೂ ಇರಲಿಲ್ಲ. ೧೫೮೮ರ ಜುಲೈ ತಿಂಗಳಲ್ಲಿ ಈ ಹಡಗುಪಡೆ ಇಂಗ್ಲಂಡಿಗೆ ದಾಳಿಯಿಕ್ಕಲು ಹೊರಟಿತು. ಈ ಹಡಗುಪಡೆಯ ಬಲದಿಂದ ಇಂಗ್ಲಂಡನ್ನು ಆಯಾಸವಿಲ್ಲದೆ ಗೆಲ್ಲಲು ಬರಬಹುದೆಂದು ಫಿಲಿಪನಿಗೆ ಎನಿಸಿತಾದುದರಿಂದ **ಅಜಿಂಕ್ಯವಾದ ಹಡಗುಪಡೆ** ಎಂಬ ಹೆಸರನ್ನು ಸ್ಪ್ಯಾನಿಶ್ ಜನರು ಅದಕ್ಕೆ ಕೊಟ್ಟರು. ಈ ಹಡಗುಪಡೆಯಲ್ಲಿ ೧೩೦ ಹಡಗುಗಳಿದ್ದುವು; ಅವುಗಳಲ್ಲಿ ೮,೦೦೦ ನಾವಿಕರೂ ೧೯,೦೦೦ ಸೈನಿಕರೂ ಕೂಡಿ ೨೭,೦೦೦ ಜನರಿದ್ದರು. ನೆದರ್ಲಂಡಿನಲ್ಲಿ **ಡ್ಯೂಕ್ ಆಫ್ ಪಾರ್ಮಾ** ಎಂಬ ಸೇನಾಪತಿಯ ಬಳಿಯಲ್ಲಿಯ ೩೧,೦೦೦ ಸೈನಿಕರು ಈ ಹಡಗುಪಡೆಯನ್ನು ಕೂಡುವವರಿದ್ದರು. ಹೀಗೆ ಒಟ್ಟುಗೂಡಿದ ೫೮,೦೦೦ ಸೈನಿಕರು ಇಂಗ್ಲಂಡಿಗೆ ಹೋಗಿ ಅಲ್ಲಿ ಯುದ್ಧಮಾಡಿ ಅದನ್ನು ಗೆಲ್ಲಬೇಕೆಂದು ಫಿಲಿಪನ ಯೋಜನೆ ಇದ್ದಿತು.

**ಇಂಗ್ಲಂಡಿನ ಹಡಗುಪಡೆ**—ಸ್ಪೇನದಿಂದ ಈ ಹಡಗುಪಡೆಯು ದಾಳಿ ಬರುವುದೆಂಬ ಸುದ್ದಿ ತಿಳಿದೊಡನೆ ಅದನ್ನು ಇದಿರಿಸಲು ಇಂಗ್ಲಂಡು ಬಲವಾಗಿ ಪ್ರಯತ್ನಿಸಿತು. ಕ್ಯಾಥೊಲಿಕ್ ಮತ್ತು ಪ್ರಾಟೆಸ್ಟಂಟ ಪಂಥಗಳ ಜನರು ತಮ್ಮತಮ್ಮೊಳಗಿನ ಧಾರ್ಮಿಕ ಮತಭೇದಗಳನ್ನು ಮರೆತು ತಮ್ಮ ರಾಷ್ಟ್ರದ ಮೇಲೆ ಬರುವ ಪರಚಕ್ರವನ್ನು ಇದಿರಿಸಲು ಸಿದ್ಧರಾದರು. ಇಂಗ್ಲಿಶ್ ಸೈನ್ಯಕ್ಕೆ ಉತ್ತೇಜನವೀಯಲು ಎಲಿಝಾಬೆಥ್ ಇವಳು ಕುದುರೆಯೇರಿ ಟಿಲಬರಿ (ಟೇಮ್ಸನದಿಯ ಮುಖದ ಬಳಿಯಲ್ಲಿ) ಎಂಬಲ್ಲಿದ್ದ ಸೈನ್ಯದ ಶಿಬಿರದ ಕಡೆಗೆ ಹೋದಳು, ಮತ್ತು ಅಲ್ಲಿ ಸೈನಿಕರನ್ನು ಉದ್ದೇಶಿಸಿ ಭಾಷಣಮಾಡಿದಳು. (ಪರಿಶಿಷ್ಟ ೨ರಲ್ಲಿ ಈ ಭಾಷಣದ ಅವತರಣವನ್ನು ನೋಡಿರಿ.) ಎಡೆಯೆಡೆಯಲ್ಲಿ ಹೊಸ ಸೈನ್ಯಗಳು ಸಿದ್ಧಗೊಳಿಸಲ್ಪಟ್ಟುವು, ಮತ್ತು ಅವುಗಳಿಗೆ ಯುದ್ಧಶಿಕ್ಷಣವನ್ನು ಕೊಡುವ ವ್ಯವಸ್ಥೆ ಮಾಡಲ್ಪಟ್ಟಿತು. ಆದರೆ ಭೂಮಿಯ ಮೇಲೆ ಸ್ಪ್ಯಾನಿಶ್ ಸೈನ್ಯವು ಪ್ರಬಲವಾಗಿದ್ದಿತಾದುದರಿಂದ ಸ್ಪೇನವನ್ನು ಇದಿರಿಸುವುದಾದರೆ ಸಮುದ್ರದ ಮೇಲೆಯೇ ಇದಿರಿಸುವುದು ಹಿತವೆಂದು ಇಂಗ್ಲಂಡಿನಲ್ಲಿಯ ಯುದ್ಧತಜ್ಞರಿಗೆ ತೋರಿತು. ಆದುದರಿಂದ ಸ್ಪ್ಯಾನಿಶ್




ಸ್ಪಾನಿಷ್ ಹಡಗುಪಡೆ ಆಕ್ರಮಿಸಿದ ಮಾರ್ಗವು. ೧೫೮೮.

ಹಡಗುಪಡೆಯನ್ನು ಇದಿರಿಸಲಿಕ್ಕೆ ತಮ್ಮ ಹಡಗುಪಡೆಯನ್ನು ಸಜ್ಜುಗೊಳಿಸಲು ಇಂಗ್ಲಂಡು ಪರಾಕಾಷ್ಟೆಯ ಪ್ರಯತ್ನವನ್ನು ಮಾಡಿತು. ಯುದ್ಧದ ಮತ್ತು ವ್ಯಾಪಾರದ ಹಡಗುಗಳು ಕೂಡಿ ೧೯೭ ಹಡಗುಗಳ ಪಡೆಯನ್ನು ಇಂಗ್ಲಂಡು ಸಿದ್ಧಗೊಳಿಸಿತು. ಸ್ಪೇನದ ಹಡಗುಗಳಂತೆ ಇಂಗ್ಲಂಡಿನ ಹಡಗುಗಳು ದೊಡ್ಡವಾಗಿರದೆ ಸಣ್ಣವಿದ್ದುದರಿಂದ ಶತ್ರುಗಳ ಹಡಗುಗಳಿಗಿಂತ ಇವುಗಳ ವೇಗವು ಹೆಚ್ಚಾಗಿದ್ದಿತು. ಈ ಹಡಗುಗಳಲ್ಲಿ ನಾವಿಕರೂ ಸೈನಿಕರೂ ಕೂಡಿ ೧೫,೦೦೦ ಜನರಿದ್ದರು. ಆದರೆ ನೌಕಾ ಯುದ್ಧದಲ್ಲಿ ಇವರು ಅನುಭವಿಗಳಾಗಿದ್ದುದಲ್ಲದೆ ಇವರಲ್ಲಿ ಅನೇಕರು ಈ ಮೊದಲು ಸ್ಪೇನದ ವ್ಯಾಪಾರದ ಹಡಗುಗಳನ್ನು ಮುತ್ತಿ ವಿಜಯವನ್ನು ಸಂಪಾದಿಸಿದ್ದರು. **ಲಾರ್ಡ ಹಾವರ್ಡನೆಂಬ** ರೋಮನ್ ಕ್ಯಾಥಲಿಕ್ ಪಂಥದವನು ಇಂಗ್ಲಿಶ್ ಹಡಗುಪಡೆಯ ಆಡ್ಮಿರಲನಾದನು. ಮತ್ತು **ಡ್ರೇಕ, ಹಾಕಿನ್ಸ, ಫ್ರೊಬಿಶರ್** ಮೊದಲಾದ ಅನುಭವಿಕರಾದ ನಾವಿಕರು ಅವನಿಗೆ ಸಾಹಾಯ್ಯಕರಾಗಿದ್ದರು. ಪ್ಲೀಮಥ ಬಂದರದ ಬಳಿಯಲ್ಲಿ ಇಂಗ್ಲಂಡಿನ ಹಡಗುಪಡೆಯು ಬೀಡಾಯಿತು. ೧೫೮೮ರಲ್ಲಿ ಜುಲೈ೧೯ನೆಯ ತಾರೀಖಿನ ದಿವಸ ಸ್ಪ್ಯಾನಿಶ್ ಹಡಗುಪಡೆ ಡೋವ್ಹರದ ಸಾಮುದ್ರಧುನಿಯೊಳಗಿಂದ ಇಂಗ್ಲಿಶ ಚ್ಯಾನಲದ ಕಡೆಗೆ ಹೋಗಲಾರಂಭಿಸಿತು, ಆದರೂ ಸ್ಪೇನದ ಈ ಪ್ರಚಂಡ ಹಡಗುಪಡೆಯನ್ನು ತಡೆಯಲು ಇಂಗ್ಲಿಶ ಹಡಗುಪಡೆ ಪ್ರಯತ್ನಿಸಲಿಲ್ಲ. ಜುಲೈ ೨೬ನೆಯ ತಾರೀಖಿನ ದಿವಸ ಸ್ಪ್ಯಾನಿಶ್ ಹಡಗುಪಡೆ ಕ್ಯಾಲೆಯ ಬಳಿಯಲ್ಲಿ ಬೀಡುಬಿಟ್ಟಿತು. ಬಳಿಕ ಡ್ಯೂಕ್ ಆಫ್ ಪಾರ್ಮಾ ಇವನ ನೇತೃತ್ವದಲ್ಲಿ ನೆದರ್ಲಂಡಿನಲ್ಲಿದ್ದ ೩೦,೦೦೦ ನುರಿತ ಸೈನಿಕರನ್ನು ತನ್ನ ಹಡಗುಗಳಲ್ಲಿ ತುಂಬಿಕೊಂಡು ಅವರೊಡನೆ ಇಂಗ್ಲಂಡಿನ ದಂಡೆಯ ಮೇಲೆ ಇಳಿಯಬೇಕೆಂದು ಸ್ಪ್ಯಾನಿಶ್ ಆಡ್ಮಿರಲನಾದ ಮೆಡಿನಾ ಸಿಡೋನಿಯಾ ಇವನು ಯೋಚಿಸಿದ್ದನು. ತಾನು ಈ ಸೈನ್ಯದೊಡನೆ ಇಂಗ್ಲಂಡಿಗೆ ಬಂದೊಡನೆ ರೋಮನ್ ಕ್ಯಾಥೊಲಿಕ್ ಜನರು ತನಗೆ ನೆರವಾಗುವರೆಂದು ಅವನು ನಿರೀಕ್ಷಿಸಿದ್ದನು. ಸ್ಪ್ಯಾನಿಶ್ ಹಡಗುಪಡೆಯನ್ನು ಸಮರಾಂಗಣದಲ್ಲಿ ಇದಿರಿಸದೆ "ತಂತ್ರ ಯುದ್ಧ" (Guerilla war-fare)ದಿಂದ ಅದನ್ನು ಹಣ್ಣಿಗೆ ತರಬೇಕೆಂದು ಇಂಗ್ಲಿಶರು ನಿಶ್ಚಯಿಸಿದರು. ಜುಲೈ ತಾರೀಖು ೨೮ನೆಯ ದಿವಸ ರಾತ್ರಿಯಲ್ಲಿ ಸ್ಪ್ಯಾನಿಶ್ ಹಡಗುಪಡೆಯವರು ಮೈಮರೆತು ನಿಂತಿರುವಾಗ ಲಾರ್ಡ ಹಾವರ್ಡನು ಮದ್ದು ತುಂಬಿದ ತನ್ನ ಎಂಟು ಹಡಗುಗಳಿಗೆ ಕೊಳ್ಳಿಯಿಟ್ಟು ಅವನ್ನು ಸ್ಪೇನದ ಹಡಗುಪಡೆಯ ಮಧ್ಯದಲ್ಲಿ ಬಿಟ್ಟುಬಿಟ್ಟನು. ಈ ಉರಿವ ಹಡಗುಗಳಿಂದ ಎಷ್ಟೋ ಸ್ಪ್ಯಾನಿಶ್ ಹಡಗುಗಳಿಗೆ ಬೆಂಕಿ ತಗಲಿ ಅವೂ ಉರಿಯಲಾರಂಭಿಸಿದುವು. ಇದರಿಂದ

ಎಲ್ಲೆಲ್ಲಿಯೂ ಗೊಂದಲವೆದ್ದಿತು! ಸ್ಪಾನಿಶ್ ಹಡಗುಪಡೆಯಲ್ಲಿಯ ಕಟ್ಟು ಒಡೆದು ಎಲ್ಲೆಲ್ಲಿಯೂ ಅವ್ಯವಸ್ಥಿತೆ ಉಂಟಾಗಿ ಹಡಗುಗಳು ದಿಕ್ಕುಗೆಟ್ಟು ಓಡಾಡಲಾರಂಭಿಸಿದುವು. ಈ ಸಂಧಿಯನ್ನು ಸಾಧಿಸಿ ಇಂಗ್ಲಿಶ್ ಹಡಗುಗಳು ಸ್ಪಾನಿಶ್ ಹಡಗುಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ಮುತ್ತಿ ಹೋರಾಡ ತೊಡಗಿದುವು. ಈ ಹೋರಾಟವು ಸುಮಾರು ಎಂಟು ಗಂಟೆಗಳ ವರೆಗೆ ನಡೆಯಿತು. ಮದ್ದುಗುಂಡುಗಳ ಸಂಗ್ರಹವು ಇಂಗ್ಲಿಶ ಹಡಗುಗಳ ಮೇಲೆ ಸಾಕಷ್ಟಿದ್ದಿತು. ಆದರೆ ಸ್ಪೇನದ ಹಡಗುಗಳು ದೊಡ್ಡವಾಗಿದ್ದು ತೋಫುಗಳೂ ಮದ್ದುಗಳೂ ಸಾಕಷ್ಟಿರಲಿಲ್ಲ. ಇದಲ್ಲದೆ ಇಂಗ್ಲಿಶರು ಇಂಗ್ಲಿಶ್ ಚ್ಯಾನಲನ್ನು ಸಂಪೂರ್ಣವಾಗಿ ಬಲ್ಲವರಾಗಿದ್ದರು. ಆಯಕಟ್ಟಿನ ಸ್ಥಳಗಳು ಅವರಿಗೆ ಗೊತ್ತಿದ್ದುವು. ಆದರೆ ಸ್ಪಾನಿಶ್ ಜನರಿಗೆ ಈ ಲಾಭವು ಇರಲಿಲ್ಲ. ಯುದ್ಧವು ಪ್ರಾರಂಭವಾದ ಬಳಿಕ ಬಲವಾದ ಬಿರುಗಾಳಿಗಳು ಎದ್ದು ಸ್ಪಾನಿಶ್ ಜನರಿಗೆ ಬಲು ಹಾನಿಯಾಯಿತು. ಆಗ ಡ್ಯೂಕ್ ಆಫ್ ಪಾರ್ಮಾ ಇವನ ವಶದಲ್ಲಿಯ ನೆದರಲಂಡಿನಲ್ಲಿಯ ಸೈನ್ಯವನ್ನು ಒಯ್ಯಬೇಕೆಂಬ ವಿಚಾರವನ್ನು ಬಿಟ್ಟು ಮೆಡಿನಾ ಸಿಡೋನಿಯಾ ಇವನು ತನ್ನ ಹಡಗುಪಡೆಯನ್ನು ಉತ್ತರದಿಕ್ಕಿಗೆ ಒಯ್ದನು. ಆದರೆ ಬಿರುಗಾಳಿಯ ಬಲವು ಕಡಿಮೆಯಾಗದೆ ಬಹಳವಾಗಿ ಹೆಚ್ಚಿತಾದುದರಿಂದ ಸ್ಪಾನಿಶ್ ಹಡಗುಪಡೆಯ ಹಡಗುಗಳು ಬಿರುಗಾಳಿಗೆ ಸಿಕ್ಕಿ ಉತ್ತರದ ಕಡೆಗೆ ತೇಲುತ್ತ ನಡೆದುವು. ಆ ಬಳಿಕ ಸ್ಕಾಟಲಂಡಿನ ಉತ್ತರದಲ್ಲಿ ಗಾಳಿಮಳೆಗಳು ಒದಗಿದುದರಿಂದ ಸ್ಪಾನಿಶ್ ಹಡಗುಪಡೆ ದುರ್ದೆಶೆಗೆ ಗುರಿಯಾಯಿತು. ಈ ಬಗೆಯಾಗಿ ಸ್ಪೇನದ ೧೩೦ ಹಡಗುಗಳಲ್ಲಿ ಕೇವಲ ಹರುಕುಮುರುಕಾದ ೪೫ ಹಡಗುಗಳು ಮಾತ್ರ ಸ್ಪೇನಕ್ಕೆ ತಿರುಗಿ ಬಂದುವು.

**ಪರಿಣಾಮವು**— ಈ ಬಗೆಯಾಗಿ ಸ್ಪೇನದ ಬಲಾಢ್ಯವಾದ ಹಡಗುಪಡೆಯ ವಿಧ್ವಂಸವಾದುದರಿಂದ ಇನ್ನು ಮುಂದೆ ಇಂಗ್ಲಂಡಿಗೆ ಹಡಗುಪಡೆಯ ದಾಳಿಯ ಭೀತಿ ತಪ್ಪಿತು. ಪ್ರಾಟೆಸ್ಟಂಟ ಪಂಥಕ್ಕೆ ಹೆದರಿಕೆ ಉಳಿಯಲಿಲ್ಲ. ನೆದರಲಂಡಿನಲ್ಲಿಯ ಡಚ್ಚರು ಸ್ವತಂತ್ರರಾದರು. ಸ್ಪೇನದ ಸಮುದ್ರಪ್ರಭುತ್ವವು ಕಳೆಗುಂದಲಾರಂಭಿಸಿತು. ಇಂಗ್ಲಂಡಿನ ನಾವಿಕಸತ್ತೆ (Naval power) ಬೆಳೆಯಲಾರಂಭಿಸಿತು.

## ಉದ್ಯೋಗ-ವ್ಯವಸಾಯಗಳ ಮತ್ತು ವ್ಯಾಪಾರದ ಮೇಲೆ ನಿಯಂತ್ರಣವು

(೧) **ಉಮೇದ್ವಾರಿಯ ಕಾಯ್ದೆ** (Statute of Apprentices or Arificers)–ಮಧ್ಯಯುಗದಲ್ಲಿ ಉದ್ಯೋಗ-ವ್ಯವಸಾಯಗಳ ಮತ್ತು ವ್ಯಾಪಾರದ ಮೇಲೆ ನಿಯಂತ್ರಣವನ್ನಿಡಲು ಬೇರೆ ಬೇರೆ ಪಟ್ಟಣಗಳಲ್ಲಿ ವ್ಯವಸಾಯಗಳನ್ನು ಮತ್ತು ವ್ಯಾಪಾರವನ್ನು ಮಾಡುವ ಜನರ ಸಂಘಗಳು ಸ್ಥಾಪಿಸಲ್ಪಟ್ಟುವು (೪೬ನೆಯ ಪುಟವನ್ನು ನೋಡಿರಿ). ಆದರೆ ಅವುಗಳಿಂದ ಮಾಡಲ್ಪಟ್ಟ ನಿಯಮಗಳಲ್ಲಿ ಏಕಸೂತ್ರತ್ವವು ಇರಲಿಲ್ಲ. ಆದುದರಿಂದ ಏಕಸೂತ್ರತ್ವವು ಉಂಟಾಗಲು, ತರುಣರಿಗೆ ಯೋಗ್ಯವಾದ ವ್ಯವಸಾಯ ಶಿಕ್ಷಣವು ದೊರೆಯಲು, ಮತ್ತು ಆ ಶಿಕ್ಷಣವನ್ನು ಪಡೆಯದಿದ್ದವರಿಗೆ ನುರಿತ ಕೆಲಸಗಾರರಂತೆ ಸ್ವತಂತ್ರವಾಗಿ ವ್ಯವಸಾಯವನ್ನು ಕೈಕೊಳ್ಳಲಿಕ್ಕೆ ಅಡ್ಡಿಮಾಡಲು, ಮತ್ತು ಮಾಲುಗಳ ನಿರ್ಮಾಣವು ಉತ್ತಮವಾಗಲು ಎಲಿಝಬೆಥ್ ರಾಣಿಯ ಸೂಚನೆಯಿಂದ ಪಾರ್ಲಿಮೆಂಟು ೧೫೬೩ರಲ್ಲಿ 'ಉಮೇದ್ವಾರಿಯ ಕಾಯ್ದೆ'ಯನ್ನು ಮಾಡಿತ್ತು. ಈ ಕಾಯ್ದೆಯಿಂದ ಯಾವನಿಗೂ ಏಳು ವರ್ಷಗಳವರೆಗಾದರೂ ವ್ಯವಸಾಯಶಿಕ್ಷಣವನ್ನು ಪಡೆದ ಹೊರ್ತು ಸ್ವತಂತ್ರವಾಗಿ ವ್ಯವಸಾಯವನ್ನು ಮಾಡಲು ಪ್ರತಿಬಂಧವು ಮಾಡಲ್ಪಟ್ಟಿತು. ಈ ಕಾಯ್ದೆ ೨೫೦ ವರ್ಷಗಳ ವರೆಗೆ ಪ್ರಚಾರದಲ್ಲಿತ್ತು. ಅದು ೧೮೧೩ರಲ್ಲಿ ರದ್ದುಗೊಳಿಸಲ್ಪಟ್ಟಿತು. ಸರಕಾರದಿಂದ ಸಾರ್ವತ್ರಿಕ ಶಿಕ್ಷಣದ ಅನುಕೂಲತೆಗಳನ್ನು ಒದಗಿಸಲಾಗದ ಆ ಕಾಲದಲ್ಲಿ ದೇಶದಲ್ಲಿಯ ಬಾಲಕರಲ್ಲಿಯೂ ತರುಣರಲ್ಲಿಯೂ ವ್ಯವಸಾಯ ಶಿಕ್ಷಣದ ಕಡೆಗೆ ಪ್ರವೃತ್ತಿಯನ್ನು ಹುಟ್ಟಿಸಲು ಈ ಕಾಯ್ದೆಯಿಂದ ಬಹು ಉಪಯೋಗವಾಯ್ತು.

(೨) **ಸರ್ವಾಧಿಕಾರ ಪದ್ಧತಿ** (Monopolies)—ಯಾವುದಾದರೂ ಒಂದು ವ್ಯಾಪಾರವನ್ನಾಗಲಿ ವ್ಯವಸಾಯವನ್ನಾಗಲಿ ಮಾಡಲು "ಸರ್ವಾಧಿಕಾರ"ವನ್ನು ಕೊಡಲು ರಾಜನಿಗೆ ಅಧಿಕಾರವಿರುವುದೆಂದು ಮಧ್ಯಯುಗದ ಕಾಲದಿಂದ ತಿಳಿಯಲ್ಪಡುತ್ತಿತ್ತು. ಈ ಬಗೆಯ ಸರ್ವಾಧಿಕಾರಗಳನ್ನು ಮಾರಿ ರಾಜರು ಹಣವನ್ನು ಸಂಪಾದಿಸುತ್ತಿದ್ದರು. ಟ್ಯೂಡರ ಕಾಲದಲ್ಲಿ ವಿಶೇಷತಃ ಎಲಿಝಬೆಥ್ ಇವಳ ಕಾಲದಲ್ಲಿ ದೇಶದಲ್ಲಿ ವಿಧವಿಧದ ವ್ಯವಸಾಯಗಳು ಹುಟ್ಟಬೇಕೆಂದು, ಹೊಸ ಶೋಧಗಳು ಒದಗಬೇಕೆಂದು, ಮತ್ತು ದೂರದೂರದ ಹೊಸ ಪ್ರದೇಶಗಳೊಡನೆ ವ್ಯಾಪಾರವು ಪ್ರಾರಂಭವಾಗಬೇಕೆಂದು ಕೆಲವು ವರ್ಷಗಳ ವರೆಗೆ ಯಾವನೊಬ್ಬ ವ್ಯಕ್ತಿಗಾ

ಗಲಿ ಯಾವುದೊಂದು ಮಂಡಳಕ್ಕಾಗಲಿ (ಕಂಪನಿ) ಯಾವುದಾದರೊಂದು ವ್ಯವಸಾಯವನ್ನು ಇಲ್ಲವೆ ವ್ಯಾಪಾರವನ್ನು ಮಾಡಲು 'ಸರ್ವಾಧಿಕಾರವು' ಕೊಡಲ್ಪಡುತ್ತಿತ್ತು. ಇಂತಹ ಸರ್ವಾಧಿಕಾರಗಳನ್ನು ಪಡೆದವರು ವ್ಯವಸಾಯದಲ್ಲಿ ತಮ್ಮ ಹಣವನ್ನು ತೊಡಗಿಸಬೇಕಾಗುತ್ತಿದ್ದುದರಿಂದಲೂ ಒಮ್ಮೊಮ್ಮೆ ಹಾನಿಯಾಗುವ ಸಂಭವವಿರುತ್ತಿದ್ದುದರಿಂದಲೂ ಈ ಸರ್ವಾಧಿಕಾರಿಗಳ ವಿಷಯದಲ್ಲಿ ಅಷ್ಟೊಂದು ತಕರಾರುಗಳು ಇರುತ್ತಿರಲಿಲ್ಲ. ಆದರೆ ಜನರಿಗೆ ನಿತ್ಯವೂ ಬೇಕಾಗುವ ವಸ್ತುಗಳನ್ನು ತಯಾರಿಸುವ ವ್ಯವಸಾಯಗಳ ಅಥವಾ ಆ ವಸ್ತುಗಳ ವ್ಯಾಪಾರದ ಸರ್ವಾಧಿಕಾರಗಳನ್ನು ಅರಸರು ತಮ್ಮ ಪ್ರೇಮಕ್ಕೆ ಪಾತ್ರರಾದ ಸರದಾರರಿಗೆ ಮಾರಲಾರಂಭಿಸಲು, ಆಗ ಮಾತ್ರ ಜನರಲ್ಲಿ ಅಸಂತೋಷವು ಹುಟ್ಟಿತು. ಪಾರ್ಲಿಮೆಂಟಾದರೂ ಈ ಪಕ್ಷಪಾತದ ವಿರುದ್ಧವಾಗಿ ತಕರಾರು ಮಾಡಿತು. ಇದನ್ನು ಕಂಡು ಎಲಿಝಬೆಥ್ ಇವಳು ಕೆಲವು ಸರ್ವಾಧಿಕಾರಗಳನ್ನು ರದ್ದುಗೊಳಿಸಿದಳು.

**ಬಡವರೂ ನಿರಾಶ್ರಿತರೂ ಆದ ಜನರ ವಿಷಯದಲ್ಲಿ ಕಾಯ್ದೆ** (Poor Law) ೧೬೦೧—ಮಧ್ಯಯುಗದಲ್ಲಿ ಬಡವರೂ ನಿರಾಶ್ರಿತರೂ ಆದ ಜನರಿಗೆ ಅನ್ನವಸ್ತ್ರಗಳನ್ನು ಕೊಟ್ಟು ಸಾಹಾಯ್ಯಮಾಡುವುದು ಚರ್ಚುಗಳ, ಧರ್ಮಮಠಗಳ ಮತ್ತು ಪರೋಪಕಾರಿಗಳಾದ ವ್ಯಕ್ತಿಗಳ ಧರ್ಮಬುದ್ಧಿಯನ್ನು ಅವಲಂಬಿಸಿದ ಕಾರ್ಯವೆಂದೂ ಇದು ಸರಕಾರದ ಕೆಲಸವು ಅಲ್ಲವೆಂದೂ ಜನರು ತಿಳಿಯುತ್ತಿದ್ದರು. ಆದರೆ ಮುಂದೆ ಮುಂದೆ ಸರದಾರರ ಐಶ್ವರ್ಯವು ಕಡಿಮೆಯಾದುದರಿಂದ ಅನೇಕರಿಗೆ ಅವರಲ್ಲಿ ನೌಕರಿ ದೊರೆಯದಂತಾಯ್ತು, ಮಠಗಳು ಜಪ್ತಾದುದರಿಂದ ಅನೇಕರು ಅನಾಥರಾದರು, ಒಕ್ಕಲತನವು ಕಡಿಮೆಯಾಗಿ ಕುರಿಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ವ್ಯವಸಾಯವು ಪ್ರಾರಂಭವಾದುದರಿಂದ ಅನೇಕ ಒಕ್ಕಲಿಗರು ಉದ್ಯೋಗವಿಲ್ಲದೆ ಕುಳಿತರು. ಇವರೆಲ್ಲರಿಗೂ ಕುರುಡಕುಂಟರಂತೆಯೂ ಅಂಗಹೀನರಂತೆಯೂ ತಿರಿದುಂಬ ಹೊತ್ತು ಬಂದಿತು. ಕೆಲವರಂತು ಕಳವುಸುಲಿಗೆಗಳನ್ನು ಮಾಡಲಾರಂಭಿಸಿದರು. ಇದರಿಂದ ಜನರಿಗೆ ಬಲು ತೊಂದರೆಯಾಗಲಾರಂಭಿಸಿತು. ಆದುದರಿಂದ ಈ ವಿಷಯದಲ್ಲಿ ಪಾರ್ಲಿಮೆಂಟು ೧೬೦೧ರಲ್ಲಿ ಬಡವರ ಕಾಯ್ದೆಯನ್ನು (Poor Law) ಮಾಡಿತು. ಈ ಕಾಯ್ದೆಯಿಂದ ಹಳ್ಳಿಗಳಲ್ಲಿ ಮತ್ತು ನಗರಗಳಲ್ಲಿ ಸರಕಾರವು ನಿಯೋಜಿಸಿದ ಶಾಂತತಾರಕ್ಷಕ ಅಧಿಕಾರಿಗಳು (Justices of the Peace) ಆ ಆ ಹದ್ದಿನಲ್ಲಿಯ ಜನರಿಂದ ಬಡವರಿಗೋಸುಗ ಕರವನ್ನು (Rates) ತೆಗೆದುಕೊಂಡು ಆ ಹಣದಿಂದ

ಬಡವರೂ ನಿರಾಶ್ರಿತರೂ ಆದ ಜನರಿಗೆ ಸಾಹಾಯ್ಯಮಾಡಬೇಕೆಂದು ಗೊತ್ತಾಯ್ತು. ಈ ಯೋಜನೆಯಿಂದ ಅನಾಥರಿಗೆ ಅನ್ನವಸ್ತ್ರಗಳನ್ನು ಕೊಡುವ, ಗಟ್ಟಿಗರನ್ನು ಕೆಲಸಕ್ಕೆ ಹಚ್ಚುವ, ಮತ್ತು ಕೆಲಸಮಾಡಲು ಒಪ್ಪದವರನ್ನು ಶಿಕ್ಷೆಗೆ ಗುರಿಮಾಡುವ ಇವೇ ಮೊದಲಾದ ಕೆಲಸಗಳು ಆಗತೊಡಗಿದುವು.

**ಪ್ರಿವಿ ಕೌನ್ಸಿಲ್ ಮತ್ತು ಶಾಂತತಾರಕ್ಷಕ ಅಧಿಕಾರಿಗಳು**—ಎಲಿಝಬೆಥ್ ಇವಳ ಆಳ್ಕೆಯಲ್ಲಿ ರಾಜ್ಯಕಾರಭಾರದ ಎಲ್ಲ ಸೂತ್ರಗಳು ಅವಳಿಂದ ನಿಯೋಜಿತವಾದ ಪ್ರಿವಿ ಕೌನ್ಸಿಲಿನ ಕೈಯಲ್ಲಿ ಇದ್ದುವು. ಪಾರ್ಲಿಮೆಂಟಿನಲ್ಲಿ ಬರುವ ಕಾಯ್ದೆಗಳ ಕಚ್ಚಾ ಮಸೂದೆ (Bills)ಗಳನ್ನು ಮತ್ತು ರಾಣಿಯ ಆಜ್ಞೆಯಿಂದ ಜಾಹೀರಮಾಡಲ್ಪಡಬೇಕಾದ ಜಾಹೀರನಾಮೆಗಳನ್ನು ಸೂಚಿಸುವ ಕೆಲಸವು ಇದೇ ಕೌನ್ಸಿಲಿಗೆ ಒಪ್ಪಿತ್ತು. ಈ ಕೌನ್ಸಿಲಿನ ಸದಸ್ಯರು ಸ್ಟಾರ ಚೇಂಬರ ಕೋರ್ಟಿನ ಸದಸ್ಯರೂ ಆಗಿರುತ್ತಿದ್ದರು. ಬೇರೆ ಬೇರೆ ಜಿಲ್ಲೆಗಳಲ್ಲಿ (Counties) 'ಶಾಂತತಾರಕ್ಷಕ' ಅಧಿಕಾರಿಗಳು (Justices of the Peace) ಈ ಪ್ರಿವಿ ಕೌನ್ಸಿಲಿನಿಂದ ನಿಯೋಜಿಸಲ್ಪಡುತ್ತಿದ್ದರು. ಈ ಅಧಿಕಾರಿಗಳು ಸ್ಥಾನಿಕ ವಿಷಯಗಳಿಗಾಗಿ ಈ ಕೌನ್ಸಿಲಿಗೆ ಜವಾಬದಾರರಾಗಿರುತ್ತಿದ್ದರು; ಮತ್ತು ಅವರು ಜಿಲ್ಲೆಯಲ್ಲಿ ಶಾಂತತೆಯನ್ನು ರಕ್ಷಿಸುವದು, ಚಿಕ್ಕ ಪುಟ್ಟ ಅಪರಾಧಗಳನ್ನು ಮಾಡಿದವರನ್ನು ವಿಚಾರಣೆಗೆ ಗುರಿಮಾಡಿ ಅವರಿಗೆ ಶಿಕ್ಷೆಯನ್ನು ಮಾಡುವದು, ಬಡಜನರ ವ್ಯವಸ್ಥೆಯನ್ನು ಮಾಡುವುದು, ಮಾರ್ಗಗಳನ್ನೂ ಸೇತುವೆಗಳನ್ನೂ ಸರಿಯಾಗಿಡುವುದು, ಮೊದಲಾದ ಹಲವು ಬಗೆಯ ಸ್ಥಾನಿಕ ಕೆಲಸಗಳನ್ನು ಮಾಡುತ್ತಿದ್ದರು. ಈ ಅಧಿಕಾರಿಗಳಿಗೆ ಸಂಬಳವಿರುತ್ತಿರಲಿಲ್ಲ. ಆದರೆ ಸಮಾಜದಲ್ಲಿ ಅವರಿಗೆ ಮಾನ ಮರ್ಯಾದೆಗಳು ದೊರೆಯುತ್ತಿದ್ದುವು ಮತ್ತು ಸ್ಥಾನಿಕ ವಿಷಯಗಳಲ್ಲಿ ಮಹತ್ವದ ಸ್ಥಾನವು ಅವರಿಗಿರುತ್ತಿತ್ತು. ಆದುದರಿಂದ ಅನೇಕರು ಈ ಕೆಲಸವನ್ನು ಮಾಡಲು ಮುಂದೆ ಬರುತ್ತಿದ್ದರು.

**ಎಲಿಝಬೆಥ್ ರಾಣಿಯ ಆಳ್ಕೆಯಲ್ಲಿಯ ಪಾರ್ಲಿಮೆಂಟು**—ಎಲಿಝಬೆಥ್ ರಾಣಿಯ ಆಳ್ಕೆಯಲ್ಲಿ ಪಾರ್ಲಿಮೆಂಟಿನಲ್ಲಿ ಕಾಮನ್ಸ ಸಭೆಯ ಸತ್ತೆ ಬೆಳೆಯುತ್ತ ನಡೆಯಿತು. ಕಾಮನ್ಸ ಸಭೆಯಲ್ಲಿಯ ಅನೇಕ ಸಭಾಸದರು ಪ್ರಾಟೆಸ್ಟಂಟರಿದ್ದರು. ಅವರ ಮೇಲೆ ಪ್ಯೂರಿಟನ್ ಮತದ ವರ್ಚಸ್ಸು ಇದ್ದಿತು. ಧಾರ್ಮಿಕ ವಿಷಯದಲ್ಲಿದ್ದಂತೆ ರಾಜಕೀಯ ವಿಷಯದಲ್ಲಿಯೂ ತಮಗೆ ಸ್ವಾತಂತ್ರ್ಯವಿರಬೇಕೆಂದು ಅವರು ಬಯಸಿದರು. ಎಲಿಝಬೆಥ್ ರಾಣಿ ವ್ಯವಹಾರಚತುರೆಯೂ ಕುಶಾಗ್ರಬುದ್ಧಿಯವಳೂ ಕರ್ತೃತ್ವಶಾಲಿನಿಯೂ ಆಗಿದ್ದಳು. ಮತ್ತು

ಪಾರ್ಲಿಮೆಂಟಿನ ಮತವನ್ನು ತಾನು ಯಾವಾಗ ಅನುಸರಿಸಬೇಕು, ಮತ್ತು ಪಾರ್ಲಿಮೆಂಟನ್ನು ತನ್ನ ಇಚ್ಛೆಯನ್ನು ಅನುಸರಿಸುವಂತೆ ಯಾವಾಗ ಮಾಡಬೇಕು ಎಂಬುದನ್ನು ಅವಳು ಸರಿಯಾಗಿ ತಿಳಿದಿದ್ದಳು. ರಾಷ್ಟ್ರದ ಉತ್ಕರ್ಷವಾಗ ಬೇಕೆಂಬ ಆಕಾಂಕ್ಷೆ ಅವಳಿಗಿದ್ದಿತಾದುದರಿಂದ ಅವಳ ಮತ್ತು ಪಾರ್ಲಿಮೆಂಟಿನ ನಡುವೆ ವಿರೋಧವು ಉಂಟಾಗಲಿಲ್ಲ.

**ಐರ್ಲಂಡ್**—ಎಲಿಝಾಬೆಥ್ ಇವಳ ಆಳ್ಕೆಯ ಕೊನೆಯ ಭಾಗದಲ್ಲಿ ಐರ್ಲಂಡಿನಲ್ಲಿ **ಹ್ಯೂ ಓ ನೆಲ್** ಮತ್ತು **ಅರ್ಲ ಆಫ್ ಟಾಯರೋನ್** ಇವರ ನೇತೃತ್ವದಲ್ಲಿ ಬಂಡು ಎದ್ದಿತು (೧೫೯೮). ಅದನ್ನು ಮುರಿಯಲು ಎಲಿಝಾಬೆಥ್ ರಾಣಿ ತನ್ನ ವಿಶ್ವಾಸಕ್ಕೆ ಪಾತ್ರಸಾದ **ಅರ್ಲ ಆಫ್ ಎಸೆಕ್ಸ** ಇವನನ್ನು ಕಳುಹಿದಳು. ಆದರೆ ಅವನು ಓ ನೆಲನ ಬಲವನ್ನು ಮುರಿಯದೆ ಅವನೊಡನೆ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದವು ಎಲಿಝಾಬೆಥ್ ಇವಳಿಗೆ ಸರಿದೋರಲಿಲ್ಲ. ಆದುದ್ದರಿಂದ ಅವಳು ಎಸೆಕ್ಸನನ್ನು ತಿರುಗಿ ಕರೆಕಳಿಸಿಕೊಂಡು **ಲಾರ್ಡ ಮೌಂಟ್ ಜಾಯ್** ಎಂಬವನನ್ನು ಐರ್ಲಂಡಿಗೆ ಕಳುಹಿದಳು. ಅವನು ೧೬೦೧ರಲ್ಲಿ ಬಂಡನ್ನು ಮುರಿದು ಶಾಂತತೆಯನ್ನು ಸ್ಥಾಪಿಸಿದನು.

**ರಾಷ್ಟ್ರೀಯತ್ವವು, ರಾಜ್ಯಕರ್ತನೆ ರಾಷ್ಟ್ರದ ಮುಖವು**—ಮಧ್ಯಯುಗದಲ್ಲಿ ಇಂಗ್ಲಂಡಿನಲ್ಲಿ ಸರದಾರರು, ಧರ್ಮಾಧಿಕಾರಿಗಳು ಮತ್ತು ಬೇರೆ ಬೇರೆ ಊರುಗಳಲ್ಲಿಯ ವ್ಯಾಪಾರಸ್ಥರ ಸಂಘಗಳು ಇವರಿಗೆ ಎಷ್ಟೊ ಸ್ವತಂತ್ರ ಅಧಿಕಾರವು ಇತ್ತು. ಇದರಿಂದ ರಾಜಸತ್ತೆ ದುರ್ಬಲವಾಗಿತ್ತು. ಆದರೆ ಟ್ಯೂಡರರ ಕಾಲದಲ್ಲಿ ೭ನೆಯ ಹೆನ್ರಿ ಸರದಾರರ ಸತ್ತೆಯನ್ನು ನಷ್ಟಗೊಳಿಸಿದನು; ೮ನೆಯ ಹೆನ್ರಿ ಪೋಪನ ಧಾರ್ಮಿಕಸತ್ತೆಯನ್ನು ಉಚ್ಚಾಟನಗೊಳಿಸಿ ಧಾರ್ಮಿಕಸತ್ತೆ ರಾಜ್ಯಕರ್ತನಲ್ಲಿ ಉಳಿವಂತೆ ಮಾಡಿದನು; ಎಲಿಝಾಬೆಥ್ ರಾಣಿ ವ್ಯಾಪಾರಸ್ಥರ ಸಂಘಗಳು ಉಪಭೋಗಿಸುತ್ತಿದ್ದ ವ್ಯಾಪಾರೋದ್ಯೋಗಗಳ ನಿಯಂತ್ರಣಾಧಿಕಾರವನ್ನು ತಾನೇ ತೆಗೆದುಕೊಂಡಳು. ಇದರಿಂದ ದೇಶದಲ್ಲಿಯ ರಾಜಕೀಯ, ಧಾರ್ಮಿಕ ಮತ್ತು ಔದ್ಯೋಗಿಕ ವಿಷಯಗಳ ನಿಯಂತ್ರಣವು ರಾಜ್ಯಕರ್ತನ ಕಡೆಗೆ ಬಂದಿತು ಮತ್ತು ರಾಜ್ಯಕರ್ತನೆ ರಾಷ್ಟ್ರದ ಮುಖವೆಂಬ ಭಾವನೆ ದೃಢವಾಯ್ತು ಮತ್ತು ರಾಷ್ಟ್ರೀಯತ್ವದ ಕಲ್ಪನೆ ವಿಕಾಸಗೊಂಡಿತು.

**ಇನ್ನುಳಿದ ಸಂಗತಿಗಳು**—ಎಲಿಝಾಬೆಥ್ ರಾಣಿಯ ಆಳ್ಕೆಯಲ್ಲಿ ವ್ಯಾಪಾರೋದ್ಯೋಗಗಳ ಬೆಳೆವಣಿಗೆ ವೇಗದಿಂದ ಸಾಗಿತು. ೧೫೬೨ರಲ್ಲಿ ಸರ ಜಾನ್ ಹಾಕಿನ್ಸನು ಆಫ್ರಿಕೆಯ ಪಶ್ಚಿಮ ತೀರದ ಪ್ರದೇಶಗಳಲ್ಲಿ ಗುಲಾಮರ ವ್ಯಾಪಾರ

ವನ್ನು ಪ್ರಾರಂಭಿಸಿದನು. ೧೫೮೩ರಲ್ಲಿ ತುರ್ಕಸ್ಥಾನದೊಡನೆ ವ್ಯಾಪಾರವು ಪ್ರಾರಂಭವಾಯ್ತು. ೧೬೦೦ರಲ್ಲಿ ಪೂರ್ವದ ಕಡೆಯ ನಡುಗಡ್ಡೆಗಳೊಡನೆಯೂ ಪ್ರದೇಶಗಳೊಡನೆಯೂ ವ್ಯಾಪಾರಮಾಡಲು **ಈಸ್ಟ ಇಂಡಿಯಾ ಕಂಪನಿಗೆ** ಅಧಿಕಾರಪತ್ರವು ಕೊಡಲ್ಪಟ್ಟಿತು.

ಎಲಿಝಾಬೆಥ್ ಇವಳು ಆಳುತ್ತಿರುವಾಗ ವಾಙ್ಮಯಕ್ಷೇತ್ರದಲ್ಲಿ ಸ್ಪೆನ್ಸರ, ಡ್ರ್ಯಾಯಡನ್, ಶೇಕ್‌ಸ್ಪೀಯರ, ಬೇಕನ್, ರ್‍ಯಾಲೆ ಮೊದಲಾದ ವಿದ್ವಾಂಸರು ಪ್ರಸಿದ್ಧಿಯನ್ನು ಪಡೆದರು. ಅವರು ಉತ್ತಮೋತ್ತಮ ಗ್ರಂಥಗಳನ್ನು ಪ್ರಕಟಿಸಿ ಇಂಗ್ಲಿಶ್ ವಾಙ್ಮಯವನ್ನು ವೃದ್ಧಿಗೊಳಿಸಿದರು. ಇವರಲ್ಲಿ ಶೇಕ್‌ಸ್ಪೀಯರನು ಜಗದ್ವಿಖ್ಯಾತನಾದ ಕವಿಯಾಗಿದ್ದನು. ಆತನು ತನ್ನ ಅಪ್ರತಿಮವಾದ ನಾಟಕಗಳಿಂದ ಇಂಗ್ಲಂಡಿನ ಹೆಸರನ್ನು ಅಮರವಾಗಿ ಮಾಡಿದನು. ಈ ಬಗೆಯಾಗಿ ಎಲಿಝಾಬೆಥ್ ರಾಣಿಯ ಆಳ್ಕೆಯಲ್ಲಿ ಇಂಗ್ಲಂಡು ಎಲ್ಲ ವಿಧದಿಂದಲೂ ಉನ್ನತಿಯನ್ನು ಪಡೆದಿತಾದುದರಿಂದ ಅವಳ ಆಳ್ಕೆ 'ಸುವರ್ಣಯುಗ'ವೆಂದು ಯಥಾರ್ಥವಾದ ಹೆಸರನ್ನು ಪಡೆಯಿತು. ಹೀಗೆ ಇಂಗ್ಲಂಡು ಪ್ರಗತಿಯ ಮಾರ್ಗದಲ್ಲಿ ವೇಗದಿಂದ ಸಾಗುತ್ತಿರುವಾಗ ಎಲಿಝಾಬೆಥ್ ರಾಣಿ ೧೬೦೩ರಲ್ಲಿ ಮಾರ್ಚ ತಿಂಗಳಲ್ಲಿ ಮರಣಹೊಂದಿದಳು.

---

## ಸಾರಾಂಶವು

### ಎಲಿಝಾಬೆಥ್ (೧೫೫೮—೧೬೦೩).

ಎಲಿಝಾಬೆಥ್ ರಾಣಿ ಅನುಸರಿಸಿದ ನೀತಿ:—

(ಅ) ಧಾರ್ಮಿಕ ನೀತಿ:—ಇಂಗ್ಲಂಡಿನಲ್ಲಿ ಪೋಪನ ಧಾರ್ಮಿಕ ವರ್ಚಸ್ಸನ್ನು ನಷ್ಟಗೊಳಿಸುವುದು. ಇಂಗ್ಲಂಡಿನಲ್ಲಿ ಪ್ರಾಟೆಸ್ಟಂಟ ಪಂಥವನ್ನು ಸ್ಥಾಪಿಸುವುದು. ಇಂಗ್ಲಂಡಿನ ರಾಜ್ಯಕರ್ತರು ಧಾರ್ಮಿಕ ವಿಷಯದಲ್ಲಿಯೂ ಇಂಗ್ಲಂಡಿನ ಮುಖ್ಯಾಧಿಕಾರಿಗಳಾಗಿ ಗಣಿಸಲ್ಪಡುವುದು.

(ಆ) ರಾಜಕೀಯ:—ಇಂಗ್ಲಂಡಿನಲ್ಲಿ ಅಂತಃಸ್ಥ ಕಲಹಗಳನ್ನು ಇಲ್ಲದಾಗಿ ಮಾಡುವುದು. ಒಳಸಂಚುಗಳನ್ನು ಮುರಿವುದು. ಇಂಗ್ಲಂಡಿನ ಬಲವನ್ನು ಹೆಚ್ಚಿಸಿ ಎಲ್ಲೆಡೆಗಳಲ್ಲಿ ಇಂಗ್ಲಂಡಿನ ವರ್ಚಸ್ಸನ್ನು ಬೆಳೆಯಿಸುವುದು.

(ಇ) ಉಳಿದ ಸಂಗತಿಗಳು:—ವ್ಯಾಪಾರ, ವಾಙ್ಮಯ, ಕಲೆ ಮತ್ತು ಜಲಪ್ರವಾಸ ಈ ವಿಷಯಗಳಲ್ಲಿ ಇಂಗ್ಲಿಶ್ ಜನತೆಗೆ ಪ್ರೋತ್ಸಾಹನವನ್ನು ಕೊಡುವುದು.

(ಅ) ಧಾರ್ಮಿಕ ನೀತಿ:— ಧಾರ್ಮಿಕ ವಿಷಯದಲ್ಲಿ ಮಂದಗಾಮಿ ಪ್ರಾಟೆಸ್ಟಂಟ ಮತಾನುಸರಣವು. ಎಪಿಸ್ಕೊಪೇಲಿಯನ್ ಪಂಥದ ಸ್ಥಾಪನೆ. ಇದಕ್ಕೋಸುಗ ಈ ಕೆಳಗಿನ ಮಾತುಗಳು ಮಾಡಲ್ಪಟ್ಟವು.

ಅಕ್ಟ ಆಫ್ ಸುಪ್ರಿಮಸಿ ಮತ್ತು ಅಕ್ಟ ಆಫ್ ಯುನಿಫಾರ್ಮಿಟಿ (೧೫೫೯). ಇಂಗ್ಲಂಡಿನ ಎಪಿಸ್ಕೊಪೇಲಿಯನ್ ಪಂಥದಂತೆ ನಡೆಯದಿದ್ದ ರೋಮನ್ ಕ್ಯಾಥಲಿಕ್, ಜೆಸುಯಿಟ್, ಪ್ಯುರಿಟನ್ ಪಂಥದವರಿಗೆ ಶಾಸನಮಾಡಲು 'ಹಾಯ್ ಕಮಿಶನ್ ಕೋರ್ಟಿನ' ಸ್ಥಾಪನೆ (೧೫೮೩). ಎಲಿಝಾಬೆಥ್ ರಾಣಿಯ ಈ ಕೃತ್ಯಗಳಿಗೋಸುಗ ಅವಳಿಗೆ ಶಾಸನಮಾಡಲು ಪೋಪನು ಈ ಕೆಳಗಿನ ಉಪಾಯಗಳನ್ನು ಯೋಜಿಸಿದನು.

(೧) ಅನ್ ಬುಲೀನ್ ಇವಳೊಡನೆ ಆದ ಆನೆಯ ಹೆನ್ರಿಯ ಲಗ್ನವು ಕಾಯ್ದೆಯಂತೆ ಆಗಿಲ್ಲವಾದುದರಿಂದ ಎಲಿಝಾಬೆಥ್ ಇವಳಿಗೆ ಇಂಗ್ಲಂಡಿನ ಪಟ್ಟಕ್ಕೆ ಅಧಿಕಾರವಿಲ್ಲೆಂದು ಅವನು ಸಾರಿದನು, ಮತ್ತು ಆ ಅಧಿಕಾರವು ಸ್ಕಾಟಲಂಡಿನ ರಾಣಿ ಮೇರಿ ಅವಳಿಗೆ ಉಂಟೆಂದು ಹೇಳಿದನು.

(೨) ಎಲಿಝಾಬೆಥ್ ಇವಳು ಧರ್ಮಬಹಿಷ್ಕೃತೆಯೂ ರಾಜ್ಯಪದಚ್ಯುತೆಯೂ ಮಾಡಲ್ಪಟ್ಟಿರುವಳೆಂದು ಪ್ರಕಟಿಸಿದನು (೧೫೭೦).

(ಆ) ರಾಜಕೀಯ ನೀತಿ:— ಇಂಗ್ಲಂಡಿನಲ್ಲಿ ಅಂತಃಸ್ಥ ಕಲಹಗಳನ್ನು ಇಲ್ಲದಾಗಿ ಮಾಡಿ ಒಳಸಂಚುಗಳನ್ನು ಮುರಿದು ಇಂಗ್ಲಂಡಿನ ಬಲವನ್ನು ಹೆಚ್ಚಿಸಿ ಎಲ್ಲೆಡೆಗಳಲ್ಲಿ ಇಂಗ್ಲಂಡಿನ ವರ್ಚಸ್ಸನ್ನು ಬೆಳೆಯಿಸಲು ಈ ಕೆಳಗಿನ ಉಪಾಯಗಳು ಯೋಜಿಸಲ್ಪಟ್ಟವು.

(೧) ಮುರಿಯಲ್ಪಟ್ಟ ಒಳಸಂಚುಗಳು:—
(ಅ) ನಾರ್ಫಕನ ಸಂಚು (೧೫೭೧); (ಆ) ರಿಡಾಲ್ಫಿಯ ಸಂಚು (೧೫೭೧); (ಇ) ಥ್ರಾಕ್ ಮಾರ್ಟನನ ಸಂಚು (೧೫೮೪); (ಈ) ಬ್ಯಾಬಿಂಗ್ಟನನ ಸಂಚು (೧೫೮೬).

(೨) ಸ್ಕಾಟಲಂಡಿನ ರಾಣಿ ಮೇರಿ ಇಂಗ್ಲಂಡಿನ ಪಟ್ಟಕ್ಕೆ ತನಗೆ ಅಧಿಕಾರವುಂಟೆಂದು ಹೇಳಿದಳಾದುದರಿಂದ ಅವಳು ಸೆರೆಯಲ್ಲಿ ಇಡಲ್ಪಟ್ಟಳು (೧೫೬೮—೧೫೮೭). ಅವಳಿಗೆ ಪಟ್ಟವನ್ನು ದೊರಕಿಸಿಕೊಡಲು ಸಂಚು· ಬ್ಯಾಬಿಂಗ್ಟನ್ ಸಂಚಿನಲ್ಲಿ ಅವಳ ಅಂಗವಿದೆಂಬ ಸಂಶಯದಿಂದ ಅವಳು ಶೂಲಕ್ಕೇರಿಸಲ್ಪಟ್ಟಳು (೧೫೮೭).

(೩) ಫ್ರಾನ್ಸ್ ಮತ್ತು ಸ್ಪೇನ ಈ ರೋಮನ್ ಕ್ಯಾಥಲಿಕ್ ರಾಷ್ಟ್ರಗಳು ಇಂಗ್ಲಂಡಿನ ವಿರುದ್ಧವಾಗಿ ಶಸ್ತ್ರವೆತ್ತಬಾರದೆಂದು ಆ ರಾಷ್ಟ್ರಗಳಲ್ಲಿ ನಡೆದಿದ್ದ ಪ್ರಾಟೆಸ್ಟಂಟ ಆಂದೋಲನಗಳಿಗೆ ಸಾಹಾಯ್ಯವು ಕೊಡಲ್ಪಟ್ಟಿತು.

(ಅ) ಫ್ರಾನ್ಸಿನಲ್ಲಿಯ ಪ್ರೊಟೆಸ್ಟಂಟ ಪಂಥದ ಹ್ಯೂಗೆನಾಟ್ಸ ಜನರಿಗೆ ಸಾಹಾಯ್ಯವು.

(ಆ) ಸ್ಪೇನ ಸಾಮ್ರಾಜ್ಯದಲ್ಲಿಯ ನೆದರ್ಲಂಡಿನ ಪ್ರೊಟೆಸ್ಟಂಟ ಪಂಥದ ಡಚ್ ಜನರಿಗೆ ಸಾಹಾಯ್ಯವು.

(೪) ಸಾಹಸಿಗಳಾದ ಜಲಪ್ರವಾಸಿಗಳಿಗೆ ಪ್ರೋತ್ಸಾಹನವು. (ಅ) ಹಿಂದುಸ್ಥಾನದ ಕಡೆಗೆ ಹೋಗುವ ಜಲಮಾರ್ಗವನ್ನು ಶೋಧಿಸಲು ಜಲಪ್ರವಾಸಗಳು.

(೧) ಮಾರ್ಟಿನ್ ಫ್ರೊಬಿಶರ್ ಇವನ ವಾಯುವ್ಯದಿಕ್ಕಿನ ಜಲಪ್ರವಾಸವು (೧೫೭೬–೭೮): (೨) ಜಾನ್ ಡೆವಿಸ್ ಇವನ ವಾಯುವ್ಯದಿಕ್ಕಿನ ಪ್ರವಾಸವು (೧೫೮೫–೮೭).

(ಆ) ಹಾಕಿನ್ಸ, ಡ್ರೇಕ್, ರ್‍ಯಾಲೆ ಇವರು ಸ್ಪೇನದ ವ್ಯಾಪಾರದ ಹಡಗುಗಳ ಮೇಲೆ ಮಾಡಿದ ದಾಳಿಗಳು, ಡ್ರೇಕನ ಭೂಪ್ರದಕ್ಷಿಣೆ (೧೫೭೭–೮೦). ಈ ಸಾಹಸಿಗಳಿಗೆ 'ಸರದಾರ' ಪದವಿಯನ್ನಿತ್ತು ಅವರನ್ನು ಗೌರವಿಸುವುದು ಮತ್ತು ಅವರ ಕೆಲಸಕ್ಕೆ ಉತ್ತೇಜನವನ್ನೀವುದು.

ಸ್ಪೇನದ ಬಲಾಢ್ಯವಾದ ಹಡಗುಪಡೆಯ ಪರಾಭವವು (೧೫೮೮) ಮತ್ತು ಅದರ ಪರಿಣಾಮಗಳು:—ಇಂಗ್ಲಂಡಿಗೆ ಪರಚಕ್ರದ ಹಡಗುಪಡೆಯ ದಾಳಿಯ ಭೀತಿ ತಪ್ಪಿತು. ಸ್ಪೇನದ ಸಮುದ್ರಪ್ರಭುತ್ವವು ಕಳೆಗುಂದಿತು. ಇಂಗ್ಲಂಡಿನ ನಾವಿಕ ಸತ್ತೆ ಹೆಚ್ಚಿತು. ಇಂಗ್ಲಂಡಿನ ವ್ಯಾಪಾರವು ವೃದ್ಧಿಗೊಳ್ಳಲಾರಂಭಿಸಿತು.

(೩) ಉಳಿದ ಸಂಗತಿಗಳು:— ವ್ಯಾಪಾರ, ವಾಙ್ಮಯ, ಕಲೆ ಇವುಗಳಿಗೆ ಪ್ರೋತ್ಸಾಹನವು.

(೧) ವ್ಯಾಪಾರದ ಕಂಪನಿಗಳಿಗೆ ಪ್ರೋತ್ಸಾಹನವು:—ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ (೧೬೦೦).

(೨) ಉಮೇದ್ವಾರಿಯ ಕಾಯದೆ.

(೩) ಬಡವರ ಕಾಯ್ದೆ (೧೬೦೧).

(೪) ವಾಙ್ಮಯದ ಪ್ರಗತಿ:—ಶೇಕ್ಸಪೀಯರ್ (೧೫೬೪–೧೬೧೬), ಸ್ಪೆನ್ಸರ್, ಜೇಕನ್, ರ್‍ಯಾಲೆ, ಡ್ರೈಡನ್ ಮೊದಲಾದ ವಾಙ್ಮಯ ಭಕ್ತರು ಪ್ರಸಿದ್ಧಿಯನ್ನು ಪಡೆದರು.

ಎಲಿಝಬೆಥ್ ರಾಣಿಯ ಮಂತ್ರಿಗಳು:—

ವಿಲಿಯಮ್ ಸೆಸಿಲ್ (ಲಾರ್ಡ ಬರ್ಲೆ: ೧೫೨೦–೧೫೯೮):—ಇವನು ಎಲಿಝಬೆಥ್ ರಾಣಿಯ ಮುಖ್ಯ ಮಂತ್ರಿಯಾಗಿದ್ದು ಅವಳ ವಿಶ್ವಾಸದ ಮುತ್ಸದ್ದಿಯಾಗಿದ್ದನು. ೧೫೭೨ರಲ್ಲಿ ಅವನು ಮುಖ್ಯ ಕೋಶಾಧ್ಯಕ್ಷನಾಗಿ

ನಿಯೋಜಿಸಲ್ಪಟ್ಟನು. ಎಲ್ಲ ಬಗೆಯಿಂದಲೂ ಇವನು ಬಹು ವರ್ಚಸ್ವಿಯಾಗಿದ್ದುದರಿಂದ ಎಲಿಝಾಬೆಥ್ ಇವಳು ಅವನ ಆಲೋಚನೆಯನ್ನು ಅನುಸರಿಸುತ್ತಿದ್ದಳು.

ರಾಬರ್ಟ ಸೆಸಿಲ್ (ಅರ್ಲ ಆಫ್ ಸ್ಯಾಲ್ಸಬರಿ):—ವಿಲಿಯಮ ಸೆಸಿಲನ ಮಗನಾದ ಇವನು ತನ್ನ ತಂದೆಯ ತರುವಾಯದಲ್ಲಿ ಮುಖ್ಯ ಮಂತ್ರಿಯಾದನು (೧೫೯೮) ಮತ್ತು ಅವನು ಎಲಿಝಾಬೆಥ್ ಇವಳ ತರುವಾಯದಲ್ಲಿ ಜೇಮ್ಸನ ಮುಖ್ಯ ಮಂತ್ರಿಯೂ ಆದನು.

---

# ೭ನೆಯ ಪ್ರಕರಣವು

## ಟ್ಯೂಡರ ವಂಶದವರ ಆಳ್ಕೆಯಲ್ಲಿಯ ಇಂಗ್ಲಂಡು

ಎಲಿಝಬೆಥ್ ರಾಣಿ ಮಡಿಯಲು ಇಂಗ್ಲಂಡಿನಲ್ಲಿ ಸುಮಾರು ೧೨೫ ವರ್ಷ ಗಳ ವರೆಗೆ ಆಳಿದ ಟ್ಯೂಡರ ವಂಶದ ಆಳ್ಕೆ ಮುಗಿಯಿತು. ಈ ಕಾಲದಲ್ಲಿ ಇಂಗ್ಲಂಡಿನಲ್ಲಿಯ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಹೇಗಿದ್ದಿ ತೆಂಬುದು ಈ ಪ್ರಕರಣದಲ್ಲಿ ಹೇಳಲ್ಪಟ್ಟಿದೆ.

**ರಾಜಕೀಯ ಸ್ಥಿತಿ**—ಟ್ಯೂಡರ ವಂಶದವರ ಆಳ್ಕೆಯಲ್ಲಿ ರಾಜಸತ್ತೆ ಪ್ರಬಲವೂ ಅನಿಯಂತ್ರಿತವೂ ಆಯಿತು. "ವಾರ್ ಆಫ್ ದಿ ರೋಜೆಸ್" ಎಂಬ ಯುದ್ಧದಲ್ಲಿ ಎಷ್ಟೋ ಸರದಾರರ ಮನೆತನಗಳು ಮಣ್ಣುಗೂಡಿದುದರಿಂದ ರಾಜಸತ್ತೆಯ ಮೇಲಿದ್ದ ಅವರ ವರ್ಚಸ್ಸು ಕಡಿಮೆಯಾಯಿತು. ಟ್ಯೂಡರವಂಶದ ರಾಜ್ಯಕರ್ತರು ಅನುಸರಿಸಿದ ನೀತಿಯಾದರೂ ಉಳಿದ ಸರದಾರರ ಸತ್ತೆಯನ್ನೂ ಮಹತ್ವವನ್ನೂ ಕುಗ್ಗಿಸುವಂತಹದೆ ಇದ್ದಿತು. ಅವರು ಮನ್ನೆಯರನ್ನೂ ಸರದಾರರನ್ನೂ ತಮ್ಮ ಚಾಕರಿಯಲ್ಲಿದ್ದ ಸೈನಿಕರನ್ನು ಕಡಿಮೆಮಾಡಲು ಒತ್ತಾಯಪಡಿಸಿದರು, ಅವರ ಕೋಟೆಗಳನ್ನು ಹಾಳುಗೆಡಹಿದರು, ಮತ್ತು ಉನ್ಮತ್ತರಾದ ಸರದಾರರನ್ನು ಸ್ಟಾರ ಚೇಂಬರ ಕೋರ್ಟಿಗೆ ಎಳೆದು ಅವರಿಗೆ ಉಗ್ರವಾದ ದಂಡವನ್ನು ವಿಧಿಸಿದನು. ಮದ್ದಿನ ಶೋಧವಾದುದರಿಂದ ಯುದ್ಧಗಳಲ್ಲಿ ತೋಫು ಬಂದೂಕುಗಳು ಉಪಯೋಗಿಸಲ್ಪಡಲಾರಂಭಿಸಿದುವು. ಅದರಿಂದ ಭದ್ರವಾದ ಕೋಟೆಗಳಿಗೆ ಮತ್ತು ಚಿಲಖತ್ತಿನ ಅಶ್ವಾರೋಹಿಗಳಿಗೆ ಈವರೆಗಿದ್ದ ಮಹತ್ವವು ಕಡಿಮೆಯಾಯಿತು. ಇಂಗ್ಲಂಡಿನ ಹಡಗುಪಡೆಯ ಪುನರ್ಘಟನೆಯಾಯಿತು. ಹೊಸ ಹಡಗುಗಳು ಕಟ್ಟಲ್ಪಟ್ಟುವು. ಸ್ಪೇನದ ಹಡಗುಪಡೆಯ ಪರಾಭವವಾಗಿ ಇಂಗ್ಲಂಡಿನ ನಾವಿಕ ಸತ್ತೆ ಬೆಳೆದು ಸಮುದ್ರದ ಮೇಲೆ ಇಂಗ್ಲಂಡಿನ ವರ್ಚಸ್ಸು ಹೆಚ್ಚಲಾರಂಭಿಸಿತು. ಪಾರ್ಲಿಮೆಂಟಿನಲ್ಲಿ ಲಾರ್ಡರ ಸಭೆಯಲ್ಲಿ ಆರ್ಚಬಿಶಪ್, ಬಿಶಪ್, ಧರ್ಮಮಠಗಳ ಅಧಿಪತಿಗಳು, ಈ ಮೊದಲಾದ ಧರ್ಮಾಧಿಕಾರಿಗಳ ಮತಾಧಿಕ್ಯವಿದ್ದಿತು. ಆದರೆ ಧರ್ಮಮಠಗಳು ಮುರಿಯಲ್ಪಟ್ಟುದರಿಂದ ಧರ್ಮಾಧಿಕಾರಿಗಳ ಸಂಖ್ಯೆ ಬಹು ಮಟ್ಟಿಗೆ ಕಡಿಮೆಯಾಯಿತು. ಧರ್ಮಸುಧಾರಣೆಯಾದುದರಿಂದ ಹೊಸದಾಗಿ ನಿಯೋಜಿಸಲ್ಪಟ್ಟ ಬಿಶಪ್, ಆರ್ಚಬಿಶಪ್ ಇವರು ರಾಜರಿಗೆ ಬೆಂಬಲವಿತ್ತರು. ರಾಜರ ಪ್ರೇಮಕ್ಕೆ ಪಾತ್ರರಾದವರಿಗೆ "ಲಾರ್ಡ" ಪದವಿ ದೊರೆತು, ಅವರಿಂದಲೂ

ರಾಜಸತ್ತೆಗೆ ಬೆಂಬಲವು ಬಂದಿತು. ಇದರಿಂದ ಲಾರ್ಡರ ಸಭೆ ರಾಜ್ಯಕರ್ತರ ಕೈಗೊಂಬೆಯಾಯಿತು. ಲಾರ್ಡರ ಸಭೆಯ ಸಾಹಾಯ್ಯವಿಲ್ಲದೆ ರಾಜಸತ್ತೆಯನ್ನು ವಿರೋಧಿಸಲು ಸಾಮರ್ಥ್ಯವೂ ಆತ್ಮವಿಶ್ವಾಸವೂ ಕಾಮನ್ಸ ಸಭೆಗೆ ಇರಲಿಲ್ಲ. ಆದರೆ ರಾಜ್ಯಕರ್ತರು ಮಾತ್ರ ತಮಗೆ ಬೇಕಾದ ಮಾತುಗಳನ್ನೂ ಕಾಯ್ದೆಗಳನ್ನೂ ಪಾರ್ಲಿಮೆಂಟ ಸಭೆಯ ಮುಖಾಂತರವಾಗಿ ಮಾಡಿಸಿಕೊಳ್ಳುತ್ತಿದ್ದರು. ಟ್ಯೂಡರ ವಂಶದ ರಾಜ್ಯಕರ್ತರು ಕರ್ತೃತ್ವಶಾಲಿಗಳೂ ವ್ಯವಹಾರದೃಷ್ಟಿಯವರೂ ಆಗಿದ್ದರು. ಅವರು ದೊಡ್ಡ ದೊಡ್ಡ ಸರದಾರ ಮನೆತನಗಳ ಜನರನ್ನು ತಮ್ಮ ಮಂತ್ರಿಗಳಾಗಿ ನಿಯೋಜಿಸಿಕೊಳ್ಳದೆ ಮಧ್ಯಮ ಸ್ಥಿತಿಯ ತೀಕ್ಷ್ಣಬುದ್ಧಿಯವರೂ ಕರ್ತೃತ್ವಶಾಲಿಗಳೂ ಆದ ಜನರಿಗೆ ಮಂತ್ರಿಪದವನ್ನಿತ್ತು ಅವರಿಂದ ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಎಂಪ್‌ಸನ್, ಮಾರ್ಟನ್, ವೂಲ್ಸೆ, ಕ್ರಾಮವೆಲ್, ಮೋರ ಮೊದಲಾದವರು ಮಧ್ಯಮ ವರ್ಗದವರಾಗಿದ್ದರು. ಟ್ಯೂಡರ ವಂಶದವರ ಒಲವು ಸರದಾರ ವರ್ಗದವರ ಮಹತ್ವವನ್ನು ಕುಗ್ಗಿಸುವುದು, ಇಂಗ್ಲಂಡಿನ ನಾವಿಕ ಸತ್ತೆಯನ್ನು ವರ್ಚಸ್ಸನ್ನು ಮತ್ತು ವೈಭವವನ್ನು ಬೆಳೆಯಿಸುವುದು, ಕಲಾ ಕೌಶಲ್ಯ ಉದ್ಯೋಗವ್ಯವಸಾಯಗಳು, ವ್ಯಾಪಾರ, ಜಲಪರ್ಯಟನ, ವಸಾಹತುಗಳ ಸ್ಥಾಪನೆ, ವಾಙ್ಮಯ ಮೊದಲಾದುವುಗಳಿಗೆ ಉತ್ತೇಜನವೀವುದು ಇವುಗಳ ಕಡೆಗೆ ಇದ್ದಿತಾದುದರಿಂದ ಅವರ ಪ್ರಬಲವೂ ಅನಿಯಂತ್ರಿತವೂ ಆದ ಸತ್ತೆ ಲೋಕಪ್ರಿಯವಾಗಿದ್ದಿತು.

**ಸಾಮಾಜಿಕ ಸ್ಥಿತಿ**—ಹಿಂದಿನ ಕಾಲದಲ್ಲಿ ಸರದಾರರ ಮತ್ತು ಧರ್ಮಾಧಿಕಾರಿಗಳ ವರ್ಗದವರಷ್ಟೇ ಶ್ರೀಮಂತರೂ ವಿದ್ವಾಂಸರೂ ಎಂದು ಗಣಿಸಲ್ಪಡುತ್ತಿದ್ದರು. ಆದರೆ ಈಗ ಮಧ್ಯಮವರ್ಗದ ಜನರೂ ವಿದ್ಯೆ, ಕಲೆ ಮತ್ತು ಸಂಪತ್ತು ಇವುಗಳಲ್ಲಿ ಮುಂದೆ ಬರತೊಡಗಿದರು. ಜಲಪರ್ಯಟನ, ನಾವಿಕ ಸತ್ತೆ, ವಸಾಹತು, ವ್ಯಾಪಾರೋದ್ಯೋಗ ಮೊದಲಾದುವು ಬೆಳೆದು ಅವುಗಳಲ್ಲಿ ಇವರು ತೊಡಗಿದುದರಿಂದ ಅವರ ಪರಿಸ್ಥಿತಿ ಸುಧಾರಿಸಲಾರಂಭಿಸಿತು. ಒಕ್ಕಲತನದಿಂದ ಜೀವಿಸುವವರ ಸ್ಥಿತಿ ಮಾತ್ರ ಕೆಟ್ಟಿತು. ಉಣ್ಣೆಯ ವಸ್ತ್ರಗಳನ್ನು ಮಾಡುವ ವ್ಯವಸಾಯಕ್ಕೆ ಉತ್ತೇಜನವು ದೊರೆಯಲಾರಂಭಿಸಿದುದರಿಂದ ಒಕ್ಕಲತನವನ್ನು ಬಿಟ್ಟು ಕುರಿಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ವ್ಯವಸಾಯಕ್ಕೆ ಜಮೀನದಾರರು ಮನಸ್ಸನ್ನಿತ್ತರು. ಅವರು ಎಷ್ಟೋ ರೈತರನ್ನು ತಮ್ಮ ಭೂಮಿಗಳಿಂದ ಹೊರಗಟ್ಟಿದರು. ಎಂಟನೆಯ ಹೆನ್ರಿಯ ಆಳ್ಕೆಯಲ್ಲಿ ಧರ್ಮಮಠಗಳು ಮುರಿಯಲ್ಪಟ್ಟುದರಿಂದ ಅವನ್ನು ಅವಲಂಬಿಸಿದ್ದ ಧರ್ಮಾಧಿಕಾರಿಗಳು, ರೈತರು, ಅನಾಥರು ಮತ್ತು ಪಂಗು

ಗಳು. ಆದರಂತೆ ನಿರುದ್ಯೋಗಿಗಳು ಮತ್ತು ಕಿಡುಗೇಡಿಗಳು ಇವರಿಗೆ ಆಶ್ರಯವು ತಪ್ಪಿತು. ಆದರಿಂದ ಅವರ ಸ್ಥಿತಿ ಬಹು ಹೀನವಾಯ್ತು, ಮತ್ತು ಜನತೆಯಲ್ಲಿ ನಿರುದ್ಯೋಗಿತೆ ಬೆಳೆದು ಎಲ್ಲೆಲ್ಲಿಯೂ ಅಸಂತೋಷವು ಹಬ್ಬಿತು. ಕಳವು, ಸುಲಿಗೆ, ಕದನಗಳು, ದೊಂಬೆಗಳು ಬೆಳೆಯತೊಡಗಿದುವು. ಇವುಗಳನ್ನು ತಡೆಯಲು ಎಲಿಝಾಬೆಥ್ ರಾಣಿಯ ಆಳ್ಕೆಯಲ್ಲಿ ಬಡವರಿಗೆ ಅನ್ನವಸ್ತ್ರಗಳು ದೊರೆಯಬೇಕೆಂಬ ಉದ್ದೇಶದಿಂದ 'ಬಡವರ ಕಾಯ್ದೆ' (Poor Law) ಮಾಡಲ್ಪಟ್ಟಿತು. ಆದರೆ ಇದೇ ಕಾಲದಲ್ಲಿ ಹೊಸ ಉದ್ಯೋಗವ್ಯವಸಾಯಗಳು, ವ್ಯಾಪಾರ, ವಸಾಹತುಗಳು, ಜಲಪರ್ಯಟನಗಳು ಈ ಸಂಗತಿಗಳಲ್ಲಿ ಜನರು ಮನಸ್ಸನ್ನು ಹಾಕತೊಡಗಿದುದರಿಂದ ಅನೇಕರಿಗೆ ಉದ್ಯೋಗವು ದೊರೆತು ನಿರುದ್ಯೋಗಿತೆಯ ಪ್ರಮಾಣವು ಕುಗ್ಗಿತು.

**ಜನಸಂಖ್ಯೆ**–ಇಂಗ್ಲಂಡಿನಲ್ಲಿ ಮೊದಲನೆಯ ಜನಗಣನೆ ೧೮೦೧ರಲ್ಲಿ ಆಯ್ತು. ಆಮೊದಲು ಇಂಗ್ಲಂಡಿನ ಜನಸಂಖ್ಯೆ ಎಷ್ಟಿತ್ತೆಂಬುದನ್ನು ನಿಶ್ಚಯಪೂರ್ವಕವಾಗಿ ಹೇಳಲು ಬರುವಂತಿಲ್ಲ; ಆದರೆ ಜನ್ಮ, ಮೃತ್ಯು, ಬಾಪ್ತಿಸ್ಮಾ, ಮೊದಲಾದುವುಗಳ ವಿಷಯದಲ್ಲಿ ಉಪಲಬ್ಧವಿದ್ದ ಸಂಗತಿಗಳಿಂದ ಬೇರೆ ಬೇರೆ ಕಾಲಗಳಲ್ಲಿ ಇಂಗ್ಲಂಡಿನ ಜನಸಂಖ್ಯೆ ಎಷ್ಟು ಇದ್ದಿರಬೇಕೆಂಬುದು ಸಾಧಾರಣವಾಗಿ ಗೊತ್ತಾಗುವಂತಿದೆ. ಬೇರೆ ಬೇರೆ ಕಾಲಗಳ ಜನಸಂಖ್ಯೆ ಕೆಳಗಿನಂತೆ ಇದ್ದಿತು:

| | | |
|---|---|---|
| ಇ. ಸ. | ೧೦೬೬ | ೧೫ ಲಕ್ಷ |
| „ | ೧೩೪೦ | ೪೦ ಲಕ್ಷ |
| „ | ೧೪೦೦ | ೨೫ ಲಕ್ಷ (ಪ್ಲೇಗಿನಿಂದ ಜನಸಂಖ್ಯೆ ಕಡಿಮೆ) |
| „ | ೧೫೦೦ | ೩೫ ಲಕ್ಷ |
| „ | ೧೬೦೦ | ೪೫ ಲಕ್ಷ |

**ಆರ್ಥಿಕ ಸ್ಥಿತಿ:**—(ಉದ್ಯೋಗವ್ಯವಸಾಯಗಳು, ವ್ಯಾಪಾರ, ಹಣದ ವಿನಿಮಯ, ವಸಾಹತುಗಳು ಇತ್ಯಾದಿ) ಮಧ್ಯಯುಗದಲ್ಲಿ ಒಕ್ಕಲತನವೇ ಮುಖ್ಯ ವ್ಯವಸಾಯವಾಗಿತ್ತು. ಆದರೆ ಟ್ಯೂಡರರ ಆಳ್ಕೆಯಲ್ಲಿ ಹೊಸ ಉದ್ಯೋಗಗಳು ಅಸ್ತಿತ್ವದಲ್ಲಿ ಬಂದುದರಿಂದ ವ್ಯಾಪಾರಕ್ಕೆ ಉತ್ತೇಜನವು ದೊರೆತಿತು.

**ಉದ್ಯೋಗವ್ಯವಸಾಯಗಳು**–ಸ್ಪೇನದ ಅರಸರ ಧಾರ್ಮಿಕ ಪೀಡೆಗೆ ಬೇಸತ್ತು ನೆದರ್ಲಂಡಿನ ಎಷ್ಟೋ ಪ್ರಾಟೆಸ್ಟಂಟ ಪಂಥದ ನೇಕಾರರು ಇಂಗ್ಲಂಡಿಗೆ ಬಂದು ನೆಲಸಿದರು. ಈ ನೇಕಾರರಿಗೆ ಇಂಗ್ಲಂಡಿನಲ್ಲಿ ಆಶ್ರಯವನ್ನು ಕೊಡುವಾಗ

ಪ್ರತಿಯೊಂದು ಕುಟುಂಬದಲ್ಲಿ ಒಬ್ಬನಾದರೂ ಇಂಗ್ಲಿಶ್ ಮನುಷ್ಯನಿಗೆ ಉಣ್ಣೆಯ ಬಟ್ಟೆಗಳನ್ನು ನೇಯುವ, ಒಟ್ಟೆಗಳಿಗೆ ಬಣ್ಣಹಾಕುವ ಮೊದಲಾದ ವ್ಯವಸಾಯ ವನ್ನು ಕಲಿಯಲು ಅನುಕೂಲತೆಯನ್ನು ಒದಗಿಸಿಕೊಡಬೇಕೆಂದು ನಿಯಮವು ಮಾಡಲ್ಪಟ್ಟಿತು. ಇದರಿಂದ ಇಂಗ್ಲಂಡಿನಲ್ಲಿ ನೇಯ್ಗೆಯ ವ್ಯವಸಾಯವು ಸ್ಥಾಪಿ ಸಲ್ಪಟ್ಟು ಅನೇಕ ಇಂಗ್ಲಿಶ್ ಜನರು ಅದರಲ್ಲಿ ನುರಿತವರಾದರು. ಆ ಕಾಲದಲ್ಲಿ ನೇಯ್ಗೆಯ ಕೆಲಸವು ಕೈಮಗ್ಗಗಳ ಮೇಲೆ ಸಾಗುತ್ತಿತ್ತು. ಉಣ್ಣೆಯ ಬಟ್ಟೆ ಯಂತೆ ರೇಶ್ಮೆಯ ಬಟ್ಟೆಯನ್ನು ನೇಯುವುದು, ಮಣ್ಣಿನ ಪಾತ್ರೆಗಳನ್ನು ಮತ್ತು ಕಾಜನ್ನು ತಯಾರಿಸುವುದು, ಚಾಕು ಕತ್ತರಿ ಮೊದಲಾದ ವಸ್ತುಗಳನ್ನು ನಿರ್ಮಿ ಸುವುದು, ಮುದ್ರಣಾಲಯಗಳನ್ನು ಸ್ಥಾಪಿಸುವುದು, ಹಡಗುಗಳನ್ನು ಕಟ್ಟುವುದು ಮೊದಲಾದ ವ್ಯವಸಾಯಗಳು ಪ್ರಾರಂಭವಾದುವು. ಇವುಗಳಲ್ಲಿ ಕೆಲವನ್ನು ಇಂಗ್ಲಂಡಿನಲ್ಲಿ ಬಂದು ನೆಲಸಿದ ಪರಕೀಯರು ಮೊದಲು ಪ್ರಾರಂಭಿಸಿದರು. ಎಲಿ ಝೂಬೆಥ ರಾಣಿಯ ಆಳ್ಕೆಯಲ್ಲಿ ಆದ ಉಮೇದ್ವಾರಿಯ ಕಾಯ್ದೆಯಿಂದ (Statute of Apprentices) ದೇಶದಲ್ಲಿಯ ತರುಣರಿಗೆ ಬೇರೆ ಬೇರೆ ವ್ಯವಸಾಯಗಳಲ್ಲಿ ಪ್ರಾವೀಣ್ಯವನ್ನು ಪಡೆಯಲು ಅನುಕೂಲವಾಯ್ತು.

**ವ್ಯಾಪಾರವು** – ಉದ್ಯೋಗವ್ಯವಸಾಯಗಳಂತೆ ಇಂಗ್ಲಂಡಿನ ವ್ಯಾಪಾ ರವೂ ಬೆಳೆಯಲಾರಂಭಿಸಿತು, ಮತ್ತು ಇಂಗ್ಲಿಶ್ ಹಡಗುಗಳು ವ್ಯಾಪಾರಕ್ಕೋ ಸುಗ ದೂರದೂರದ ದೇಶಗಳಿಗೆ ಹೋಗತೊಡಗಿದುವು. ವ್ಯಾಪಾರವು ಬೆಳೆದು ದರಿಂದ ಲಂಡನ್, ಬ್ರಿಸ್ಟಲ್, ಸೌದ್ಯಾಂಪ್ಟನ್ ಮೊದಲಾದ ಪಟ್ಟಣಗಳ ಮಹತ್ವವು ಬೆಳೆದು ಅವು ಊರ್ಜಿತಸ್ಥಿತಿಗೆ ಬರಲಾರಂಭಿಸಿದುವು. ರಶಿಯದೊಡನೆ ವ್ಯಾಪಾರ ವನ್ನು ಮಾಡಲು ಮಾಸ್ಕೋವ್ಹಿ ಕಂಪನಿ, ಬಾಲ್ಟಿಕ್ ಸಮುದ್ರದ ನೆರೆಯ ಪ್ರದೇಶ ಗಳೊಡನೆ ವ್ಯಾಪಾರಮಾಡಲು ಈಸ್ಟ ಲಂಡ್ ಕಂಪನಿ, ಭೂಮಧ್ಯಸಮುದ್ರದ ಪೂರ್ವ ಭಾಗದ ಪ್ರದೇಶಗಳೊಡನೆ ಮತ್ತು ಇರಾಣಿ ಆಖಾತದ ಬಳಿಯ ಪ್ರದೇಶ ಗಳೊಡನೆ ವ್ಯಾಪಾರವನ್ನು ಮಾಡಲು ಲೇವ್ಹಂಟ ಕಂಪನಿ ಮತ್ತು ಹಿಂದುಸ್ಥಾನ ಮೊದಲಾದ ಪೌರ್ವಾತ್ಯ ಪ್ರದೇಶಗಳೊಡನೆ ವ್ಯಾಪಾರವನ್ನು ಮಾಡಲು ಈಸ್ಟ ಇಂಡಿಯಾ ಕಂಪನಿ ಮೊದಲಾದ ವ್ಯಾಪಾರದ ಕಂಪನಿಗಳು ಸ್ಥಾಪಿಸಲ್ಪಟ್ಟುದ ರಿಂದ ಇಂಗ್ಲಂಡಿನ ವಿದೇಶ ವ್ಯಾಪಾರವು ಬೆಳೆಯಿತು, ಮತ್ತು ಇಟಲಿ ಮತ್ತು ಜರ್ಮನಿ ಇವುಗಳಲ್ಲಿಯ ವ್ಯಾಪಾರಸ್ಥರ ಕೈಯಲ್ಲಿ, ಈ ವರೆಗಿದ್ದ ವಿದೇಶ ವ್ಯಾಪಾ ರವು ಇಂಗ್ಲಿಶ್ ವ್ಯಾಪಾರಸ್ಥರ ಕೈಯಲ್ಲಿ ಬಂದಿತು.

**ಹಣದ ವಿನಿಮಯವು**—ಉದ್ಯೋಗವ್ಯವಸಾಯಗಳೂ ವ್ಯಾಪಾರವೂ

ಬೆಳೆದುದರಿಂದ ಹಣದ ವಿನಿಮಯವು ಅವಶ್ಯವಾಗಿ ಬೆಳೆಯಬೇಕಾಯಿತು. ಸ್ಪೇನದ ವಶದಲ್ಲಿ ಮಧ್ಯ ಮತ್ತು ದಕ್ಷಿಣ ಅಮೇರಿಕೆಯಲ್ಲಿಯ ಮೆಕ್ಸಿಕೊ, ಪೇರು ಮೊದಲಾದ ಪ್ರದೇಶಗಳು ಬಂದುವು. ಅಲ್ಲಿ ಬೆಳ್ಳಿಯ ಕಣಗಳು ದೊರೆತುದರಿಂದ ಬಹಳ ಬೆಳ್ಳಿ ಮೊದಲು ಸ್ಪೇನದಲ್ಲಿ ಬಂದು ಅಲ್ಲಿಂದ ವ್ಯಾಪಾರದ ವಿನಿಮಯದಿಂದ ಯುರೋಪಖಂಡದಲ್ಲಿ ಪಸರಿಸಿತು. ಈ ಹೊಸ ಶೋಧದಿಂದ ಮೊದಲಿಗಿಂತ ನಾಲ್ಕು ಪಡಿಯಾಗಿ ಬೆಳ್ಳಿ ಯುರೋಪದಲ್ಲಿ ಬಂದಿತು. ಇದರಿಂದ ಬೆಳ್ಳಿಯ ಬೆಲೆ ಇಳಿಯಿತು. ಚಲನ ನಾಣ್ಯಗಳು ಬಹುತರವಾಗಿ ಬೆಳ್ಳಿಯವು ಆಗಿರುತ್ತಿದ್ದುದರಿಂದ ಪದಾರ್ಥಗಳ ಬೆಲೆಗಳು ಬಹಳವಾಗಿ ಬೆಳೆದುವು. ಈ ಕಾರಣದಿಂದ ರಾಜ್ಯಕರ್ತರಿಗೆ ತಮ್ಮ ವಾಡಿಕೆಯ ಉತ್ಪನ್ನವು ಸಾಕಾಗದಂತೆ ಆಯ್ತು, ಮತ್ತು ಯುದ್ಧದ ಪ್ರಸಂಗಗಳಲ್ಲಿ ಸಾಲಮಾಡುವುದು ಅವಶ್ಯವಾಗತೊಡಗಿತು. ದೂರ ದೂರದ ಪ್ರದೇಶಗಳೊಡನೆ ವ್ಯಾಪಾರವು ಪ್ರಾರಂಭವಾದುದರಿಂದ ವ್ಯಾಪಾರಸ್ಥರಿಗೂ ಹಣದ ಕೊರತೆ ಹೆಚ್ಚಾಗ ತೊಡಗಿತು. ಆದುದರಿಂದ ಹಣದ ವಿನಿಮಯ, ಹುಂಡಿಗಳು, ಸಾಲವು ದೊರೆವ ಅನುಕೂಲತೆ ಇವೆಲ್ಲವು ಸರಿಯಾಗಿ ಆಗಬೇಕೆಂದು **ಸರ ಥಾಮಸ್ ಗ್ರೇಶ್ಯಾಮ್** ಇವನ ಪ್ರೇರಣೆಯಿಂದ ಲಂಡನಿನಲ್ಲಿ **ವಿನಿಮಯಗೃಹದ** (Royal Exchange) ಸ್ಥಾಪನೆಯಾಯ್ತು. ಈ ಸ್ಥಳದಲ್ಲಿ ದೊಡ್ಡ ದೊಡ್ಡ ವ್ಯಾಪಾರಸ್ಥರು ನೆರೆಯುತ್ತಿದ್ದರು ಮತ್ತು ಅವರ ಮುಖಾಂತರವಾಗಿ ರಾಜ್ಯಕರ್ತರಿಗೂ ವ್ಯಾಪಾರಸ್ಥರಿಗೂ ಬೇಕಾದ ಸಾಲವು ಪರಕೀಯ (ಇಟ್ಯಾಲಿಯನ್ ಮತ್ತು ಜರ್ಮನ್) ವ್ಯಾಪಾರಸ್ಥರ ಬದಲಾಗಿ ಇಂಗ್ಲಿಶ್ ವ್ಯಾಪಾರಸ್ಥರಿಂದೆಯೆ ದೊರೆವ ಅನುಕೂಲತೆ ಆಯ್ತು.

**ಪ್ರವಾಸಗಳೂ ವಸಾಹತುಗಳೂ**—ಸಮುದ್ರಪ್ರವಾಸಗಳು, ಹೊಸ ಪ್ರದೇಶಗಳ ಶೋಧವು ಮತ್ತು ನಾವಿಕ ಸತ್ತೆ ಈ ಕಾರಣಗಳಿಂದ ದೂರದೂರದ ಪ್ರದೇಶಗಳಿಗೆ ಹೋಗಿ ಅಲ್ಲಿ ವಸಾಹತುಗಳನ್ನು ಸ್ಥಾಪಿಸಲು ಪ್ರಯತ್ನಗಳಾಗ ತೊಡಗಿದುವು. ದೂರದೂರದ ದೇಶಗಳ ಸಂಬಂಧವು ಉಂಟಾದುದರಿಂದ ಅಲ್ಲಿಯ ಬೆಳೆಗಳನ್ನು ಇಂಗ್ಲಂಡಿನಲ್ಲಿ ಬೆಳೆಯಿಸುವ ಉಪಕ್ರಮವು ಆರಂಭವಾಯ್ತು. ಸರ ವಾಲ್ಟರ್ ರ್ಯಾಲೆ ಇವನು ತಂಬಾಕವನ್ನೂ ಬಟಾಟೆಗಳನ್ನೂ ಇಂಗ್ಲಂಡಿನಲ್ಲಿ ತಂದನು.

**ಶಿಕ್ಷಣವೂ ವಾಙ್ಮಯವೂ**—ಈ ಕಾಲದಲ್ಲಿ ಅನೇಕ ಪ್ರಾಥಮಿಕ ಶಾಲೆಗಳೂ (Grammar Schools, Primary Schools) ಕೆಲವು ಮಾಧ್ಯಮಿಕಶಾಲೆಗಳೂ (Secondary Schools) ಸ್ಥಾಪಿಸಲ್ಪಟ್ಟುವು. **ಜೆಸುಯಿಟ್**

ಪಂಥದವರು ಶಿಕ್ಷಣ ಪ್ರಸಾರದ ಕಾರ್ಯವನ್ನು ಬಹಳವಾಗಿ ಮಾಡಿದರು. ಮೊದಲಿನ ನೀರಸವೂ ಬೇಸರಿಕೆಯನ್ನು ಹುಟ್ಟಿಸುವಂತಹದೂ ಮುಖಪಾಠವನ್ನೇ ಅವಲಂಬಿಸಿದುದೂ ಆದ ಶಿಕ್ಷಣಪದ್ಧತಿಯ ಸ್ಥಳದಲ್ಲಿ ವಿದ್ಯಾರ್ಥಿಗಳ ಮನೋರಂಜನೆಯನ್ನು ಮಾಡಿ ಅವರಲ್ಲಿ ವಿದ್ಯಾಲಾಲಸೆಯನ್ನು ಹುಟ್ಟಿಸುವಂತಹ ಹೊಸಪದ್ಧತಿಯ ಶಿಕ್ಷಣವನ್ನು ಕೊಡಲು ಕಾಲೆಟನು ಸೆಂಟ ಪಾಲ ಎಂಬ ಶಾಲೆಯನ್ನು ಸ್ಥಾಪಿಸಿದನು. ಮೊದಲೂ ಶಿಕ್ಷಣದ ಪ್ರಸಾರವು ಉಚ್ಚ ವರ್ಗದವರಲ್ಲಿದ್ದಿತು. ಅದು ಈಗ ಮಧ್ಯಮ ವರ್ಗದಲ್ಲಿಯೂ ಬರತೊಡಗಿತು. ಟ್ಯೂಡರ ವಂಶದಲ್ಲಿಯ ರಾಜರಾಜ್ಞಿಯರು ಸುಸಂಸ್ಕೃತರೂ ವಿದ್ಯಾಸಂಪನ್ನರೂ ಆಗಿದ್ದರು. ವಿದ್ಯೆ ಕಲೆ ಮೊದಲಾದುವುಗಳಿಗೆ ಅವರಿಂದ ಉತ್ತೇಜನವು ದೊರೆತಿತು. ಅವರು ಕವಿಗಳಿಗೂ ಗ್ರಂಥಕಾರರಿಗೂ ಪ್ರೋತ್ಸಾಹವನ್ನಿತ್ತರು. ಇವರಲ್ಲಿ ಶೇಕ್ಸಪಿಯರ್, ಎಡ್ವರ್ಡ ಸ್ಪೆನ್ಸರ್, ಹೂಕರ್, ಬೇಕನ್, ರ್‍ಯಾಲೆ ಇವರು ಪ್ರಮುಖರಿದ್ದರು.

**ಕಟ್ಟಡಗಳೂ ಇತರ ವಸ್ತುಗಳೂ**—ಮಧ್ಯಯುಗದಲ್ಲಿ ದೊಡ್ಡ ದೊಡ್ಡ ಸರದಾರರು ಭದ್ರವಾದ ಕೋಟೆಗಳಲ್ಲಿ ವಾಸಿಸುತ್ತಿದ್ದರು. ಆ ಕಾಲದಲ್ಲಿ ಕಲಹಗಳೂ ದೊಂಬೆಗಳೂ ಆಗಾಗ ಒದಗುತ್ತಿದ್ದುದರಿಂದ ಜೀವಿತವೂ ಜೀವನಸಾಧನೆಗಳೂ ಸುರಕ್ಷಿತವಾಗಿರಲಿಲ್ಲ. ಆದುದರಿಂದ ಆಗಿನ ಕೋಟೆಗಳನ್ನು ಕಟ್ಟಿಸುವಾಗ ಸೌಂದರ್ಯದ ಕಡೆಗೆ ಲಕ್ಷ್ಯವಿರುತ್ತಿರಲಿಲ್ಲ. ಅವುಗಳ ಭದ್ರತೆ ಮತ್ತು ಸುರಕ್ಷಿತತೆ ಇವುಗಳ ಕಡೆಗೆ ಹೆಚ್ಚು ಲಕ್ಷ್ಯವನ್ನು ಪೂರೈಸಬೇಕಾಗುತ್ತಿತ್ತು. ಆದರೆ ಟ್ಯೂಡರರ ಕಾಲದಲ್ಲಿ ಅಂತಃಸ್ಥ ಕಲಹಗಳೂ ದೊಂಬೆಗಳೂ ಇಲ್ಲದಂತಾಗಿ ಶಾಂತತೆ ಸ್ಥಾಪಿಸಲ್ಪಟ್ಟುದರಿಂದ ಸರದಾರರು ತಮ್ಮ ಭೂಮಿಗಳಲ್ಲಿ ಸುಂದರವೂ ವಿಶಾಲವೂ ಆದ ಮಂದಿರಗಳನ್ನು ಕಟ್ಟಿಸಿ ಅಲ್ಲಿಯೇ ಇರತೊಡಗಿದರು. ಅವುಗಳ ಸುತ್ತಲು ಚೆಂದವಾದ ತೋಟಗಳನ್ನು ಮಾಡಲಾರಂಭಿಸಿದರು. ಮಧ್ಯಯುಗದಲ್ಲಿ ಸಾಮಾನ್ಯ ಜನರ ಮನೆಗಳು ಮಣ್ಣಿನವಾಗಲಿ ಕಟ್ಟಿಗೆಯವಾಗಲಿ ಇರುತ್ತಿದ್ದುವು. ಆದರೆ ಈಗ ಇಟ್ಟಿಗೆಯವೂ ಕಲ್ಲಿನವೂ ಆಗತೊಡಗಿದುವು. ಮೊದಲು ಮನೆಗಳಲ್ಲಿಯ ಹೊಗೆ ಹೊರಗೆ ಹೋಗಲು ಚಪ್ಪರಗಳಲ್ಲಿ ಹೊಗೆಗಿಂಡಿಗಳು ಮಾಡಲ್ಪಡುತ್ತಿದ್ದುವು. ಆದರೆ ಈಗ ಹೊಗೆಗೊಳವಿಗಳು ಉಪಯೋಗದಲ್ಲಿ ಬಂದುವು. ಮೊದಲು ಶ್ರೀಮಂತರಷ್ಟೆ ಕಿಟಕಿಗಳಿಗೆ ಕಾಜನ್ನು ಕೂಡಿಸುತ್ತಿದ್ದರು. ಆದರೆ ಈಗ ಸಾಮಾನ್ಯಜನರ ಮನೆಗಳಲ್ಲಿಯೂ ಕಾಜು ಬಂದಿತು. ಮನೆಯಲ್ಲಿ ತರಟು ಚಾಪೆಗಳ ಸ್ಥಳದಲ್ಲಿ ಜಮುಖಾನೆಗಳ ಉಪಯೋಗವಾಗತೊಡಗಿತು. ಕಟ್ಟಿಗೆಯ ತಟ್ಟೆಗಳು ಹೋಗಿ ಧಾತುವಿನ ತಟ್ಟೆಗಳೂ ಚಮಚೆಗಳೂ ಬಂದುವು.

ಮೊದಲು ಗೋದಿ, ಕೋಬಿ ಗಡ್ಡೆ, ಬಟಾಟೆ ಮೊದಲಾದುವು ಶ್ರೀಮಂತರ ಊಟದ ಪದಾರ್ಥಗಳಾಗಿದ್ದುವು. ಈಗ ಅವುಗಳನ್ನು ಸಾಮಾನ್ಯರೂ ಉಪಯೋಗಿಸ ಲಾರಂಭಿಸಿದರು. ಪಟ್ಟಣಗಳಲ್ಲಿಯ ಮಾರ್ಗಗಳು ಇಕ್ಕಟ್ಟಾಗಿದ್ದುವು. ನೋಡಿದ ಲ್ಲೆಲ್ಲ ಹೊಲಸು! ಬೀದಿಯ ಮಗ್ಗುಲಿನ ಮನೆಗಳ ಅಟ್ಟಗಳ ಕೆಲವೊಂದು ಭಾಗವು ಬೀದಿಯ ಮೇಲೆ ಬಂದಿರುತ್ತಿದ್ದುವು. ಊರಿಂದೂರಿಗೆ ಹೋಗುವ ಮಾರ್ಗ ಗಳಲ್ಲಿ ತಗ್ಗುಮಿಟ್ಟಿಗಳು ಇರುತ್ತಿದ್ದುವು. ಕೊಲೆಸುಲಿಗೆಗಳ ಭೀತಿ ಇರುತ್ತಿದ್ದುದ ರಿಂದ ರಾತ್ರಿಯ ಪ್ರವಾಸವು ಸುರಕ್ಷಿತವಾಗಿರಲಿಲ್ಲ. ಪ್ರವಾಸಕ್ಕೆ ನಾಲ್ಕು ಗಾಲಿಯ ಕುದುರೆಯ ಗಾಡಿಗಳು ಉಪಯೋಗಿಸಲ್ಪಡುತ್ತಿದ್ದುವು.

**ಮನೋರಂಜನೆಯ ಸಾಧನಗಳು**—ಬೇಟೆ, ಅಶ್ವಾರೋಹಣ, ಟೇನಿಸ್ ಇವು ಸರದಾರ ವರ್ಗದವರ ಮನೋರಂಜನೆಯ ಸಾಧನಗಳಾಗಿದ್ದುವು. ಕ್ರೀಡಾ ಪ್ರದರ್ಶನಗಳಲ್ಲಿಯ (Tournament) ದ್ವಂದ್ವ-ಯುದ್ಧಗಳು ನಿಂತುವು. ಎತ್ತು, ನಾಯಿ, ಕೋಳಿ ಇವುಗಳ ಕಾದಾಟವು, ಕರಡಿಯ ಆಟವು, ಕುಣಿತವು, ಬಿಲ್ಲು ಗಾರಿಕೆ, ದೊಡ್ಡಾಟಗಳು ಇವೇ ಮೊದಲಾದುವು ಮಧ್ಯಮ ವರ್ಗದವರ ಮನೋರಂಜನೆಯ ಸಾಧನಗಳಾಗಿದ್ದುವು. ಬೈಬಲಿನ ಕತೆಗಳು ನಾಟಕಗಳ ವಿಷಯಗಳಾಗಿದ್ದುವು. ಎಲಿಝಾಬೆಥ್ ರಾಣಿಯ ಆಳ್ಕೆಯಲ್ಲಿ ಶೇಕ್ಸಪಿಯರನು ಬೇರೆ ಕಥಾನಕಗಳನ್ನು ತನ್ನ ನಾಟಕಗಳಲ್ಲಿ ಹೆಣೆದನು. ಆ ನಾಟಕಗಳು ಈಗ ಪ್ರಯೋಗಿಸಲ್ಪಡಲಾರಂಭಿಸಿದುವು. ಆಗ ನಾಟಕಗೃಹಗಳಿರಲಿಲ್ಲ. ದೊಡ್ಡವರ ಮನೆಯ ಮುಂದೆ ವಿಶಾಲವಾದ ಬೈಲಲ್ಲಿ ಅಟ್ಟವನ್ನು ಕಟ್ಟಿ ನಾಟಕವಾಡುತ್ತಿ ದ್ದರು. ಎಲಿಝಾಬೆಥ್ ಇವಳ ಆಳಿಕೆಯಲ್ಲಿ ನಾಟಕಗೃಹಗಳು ಕಟ್ಟಲ್ಪಟ್ಟುವು. ನಾಟಕಗಳಲ್ಲಿ ಸ್ತ್ರೀಪಾತ್ರವನ್ನು ಪುರುಷರೇ ವಹಿಸುತ್ತಿದ್ದರು. ಚಿತ್ರದ ಪರದೆ, ಪಟ ಮೊದಲಾದುವು ಇರುತ್ತಿರಲಿಲ್ಲ. ಪ್ಯೂರಿಟನ್ ಜನರಿಗೆ ಈ ಮನೋರಂಜ ನೆಯ ಸಾಧನೆಗಳು ಸೇರುತ್ತಿರಲಿಲ್ಲ. ಇವು ಧರ್ಮವಿರುದ್ಧವಾದುವೆಂದು ಅವರು ತಿಳಿಯುತ್ತಿದ್ದರು.

**ಉಡಿಗೆತೊಡಿಗೆ**—ಮಧ್ಯಮವರ್ಗದವರು ಶ್ರೀಮಂತರಾಗಲಾರಂಭಿಸಿದುದ ರಿಂದ ಉಡಿಗೆತೊಡಿಗೆಗೋಸುಗ ಅವರು ಬಹಳವಾಗಿ ಹಣವನ್ನು ವೆಚ್ಚಮಾಡ ತೊಡಗಿದರು. ಸರದಾರರು ಬೆಲೆಯುಳ್ಳ ಉಣ್ಣೆಯ ಬಣ್ಣಬಣ್ಣದ ನಿಲುವಂಗಿ ಗಳನ್ನು ತೊಡುತ್ತಿದ್ದರು. ಉಚ್ಚವರ್ಗದ ಸ್ತ್ರೀಯರು ಪಿನ್ (Pin)ಗಳನ್ನು ಉಪ ಯೋಗಿಸುತ್ತಿದ್ದರು. ಮಧ್ಯಮವರ್ಗದವರು ತೊಡುವ ಬಟ್ಟೆ ಉರುಟಾಗಿದ್ದುವು. ಎಲಿಝಬೆಥ್ ರಾಣಿ ಬಟ್ಟೆಗೋಸುಗ ಬಹಳೇ ವೆಚ್ಚಮಾಡುತ್ತಿದ್ದಳು. ಪರಿ

ವಾರದವರು ಅವಳ ಅನುಕರಣವನ್ನು ಮಾಡಲು ಯತ್ನಿಸುತ್ತಿದ್ದರು. ಸಾಯುವಾಗ ಎಲಿಝಾಬೆಥ್ ರಾಣಿಯ ೩ ಸಾವಿರ ಬಟ್ಟೆಗಳಿದ್ದುವು!

ಮೂಢ ವಿಶ್ವಾಸಗಳು—ಭೂತ ಪಿಶಾಚಿ, ಮಾಟ, ಫಲಜ್ಯೋತಿಷ್ಯ, ಇಂದ್ರಜಾಲ ಮೊದಲಾದುವುಗಳಲ್ಲಿ ಸಾಮಾನ್ಯಜನರಿಗೆ ವಿಶ್ವಾಸವಿದ್ದಿತು. ಆದರೆ ಇವುಗಳಲ್ಲಿಯ ಸತ್ಯವನ್ನು ಕಾಣಲು ಪ್ರಯತ್ನವು ನಡೆದುದರಿಂದ ಹೊಸ ಹೊಸ ಶೋಧಗಳಾಗಿ ಜ್ಞಾನದಲ್ಲಿ ವೃದ್ಧಿಯಾಯಿತು. ಕಬ್ಬಿಣದಿಂದ ಬಂಗಾರವನ್ನು ಮಾಡುವ ಪ್ರಯತ್ನದಿಂದ ರಸಾಯನಶಾಸ್ತ್ರದಲ್ಲಿ ಪ್ರಗತಿಯಾಯಿತು. ಫಲಜ್ಯೋತಿಷ್ಯದಿಂದ ಗ್ರಹನಕ್ಷತ್ರಗಳನ್ನು ಕುರಿತು ಹೆಚ್ಚಿನ ಸಂಗತಿಗಳನ್ನು ತಿಳಿದುಕೊಳ್ಳಲು ಪ್ರಯತ್ನಗಳು ಸಾಗಿದುವು. ಅದರಂತೆ ವೈದ್ಯಕಶಾಸ್ತ್ರದಲ್ಲಿಯೂ ಇತರ ಭೌತಿಕಶಾಸ್ತ್ರಗಳಲ್ಲಿಯೂ ಪ್ರಗತಿಯಾಯಿತು.

---

## ಸಾರಾಂಶವು

ರಾಜಕೀಯ ಸ್ಥಿತಿ—ರಾಜಸತ್ತೆ ಪ್ರಬಲವೂ ಅನಿಯಂತ್ರಿತವೂ ಆಯಿತು. ಸರದಾರರ ಮನೆತನಗಳು ಮಣ್ಣುಗೂಡಿದುವು. ಅವರ ಮಹತ್ವವನ್ನು ಕಡಿಮೆಮಾಡುವುದು ರಾಜರ ನೀತಿಯಾಗಿತ್ತು. ಪಾರ್ಲಿಮೆಂಟಿನ ಮೇಲೆ ರಾಜ್ಯಕರ್ತರ ವರ್ಚಸ್ಸು; ರಾಜ್ಯಕರ್ತರಿಗೆ ಪಾರ್ಲಿಮೆಂಟಿನ ಬೆಂಬಲವು. ವಿದ್ಯೆ, ಕಲೆ, ಜಲಪರ್ಯಟನ, ವ್ಯಾಪಾರ, ಉದ್ಯೋಗ ವ್ಯವಸಾಯ ಈ ಮೊದಲಾದುವುಗಳಿಗೆ ರಾಜ್ಯಕರ್ತರಿಂದ ಪ್ರೋತ್ಸಾಹನವು ದೊರೆತುದರಿಂದ ಅವರ ಪ್ರಬಲವೂ ಅನಿಯಂತ್ರಿತವೂ ಅದ ಸತ್ತೆಯೂ ಲೋಕಪ್ರಿಯವಾಗಿದ್ದಿತು.

ಸಾಮಾಜಿಕ ಸ್ಥಿತಿ—ಮಧ್ಯಮವರ್ಗದ ಜನರು ವ್ಯಾಪಾರೋದ್ಯೋಗಗಳಿಂದ ಶ್ರೀಮಂತರಾಗಿ ಅವರ ಮಹತ್ವವು ಹೆಚ್ಚಿತು. ಕುರಿಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ವ್ಯವಸಾಯವು ಲಾಭಕರವಾಗಿ ತೋರಿದುದರಿಂದ ಜಮೀನದಾರರೂ ಒಕ್ಕಲತನವನ್ನು ಬಿಟ್ಟು ಈ ವ್ಯವಸಾಯಕ್ಕೆ ಮನಸ್ಸನ್ನಿತ್ತು ರೈತರನ್ನು ಭೂಮಿಗಳಿಂದ ಹೊರಗಟ್ಟಿದರು. ಧರ್ಮಮಠಗಳು ಮುರಿಯಲ್ಪಟ್ಟುದರಿಂದ ಅವನ್ನು ಅವಲಂಬಿಸಿದ ಜನರು ನಿರಾಶ್ರಯರಾದರು. ನಿರುದ್ಯೋಗಿತೆ ಹೆಚ್ಚಿತು. ಕೊಲೆಸುಲಿಗೆಗಳು ನಡೆದುವು. ಬಡಜನರಿಗೆ ಉದ್ಯೋಗವೂ ಆಶ್ರಯವೂ ದೊರೆಯಬೇಕೆಂದು "ಬಡವರ ಕಾಯದೆ" (Poor law) ಮಾಡಲ್ಪಟ್ಟಿತು. ೧೫೦೦ರಲ್ಲಿ ಇಂಗ್ಲಂಡಿನ ಜನಸಂಖ್ಯೆ ೩೫ ಲಕ್ಷ ಮತ್ತು ೧೬೦೦ರಲ್ಲಿ ೪೫ ಲಕ್ಷ.

ಆರ್ಥಿಕ ಸ್ಥಿತಿ—ವ್ಯಾಪಾರೋದ್ಯೋಗಗಳು ಬೆಳೆದುವು. ನೆದರಲಂಡಿನಲ್ಲಿಯ ನೇಕಾರರು ಇಂಗ್ಲಂಡಿನಲ್ಲಿ ಬಂದು ನೆಲಸಿದುದರಿಂದ ಉಣ್ಣೆಯ ಬಟ್ಟೆಯನ್ನು ನೇಯುವ ವ್ಯವಸಾಯವು ಪ್ರಾರಂಭವಾಯ್ತು. ಕಾಗದವನ್ನು ಮಾಡುವ ಕಾರಖಾನೆಗಳಾದುವು.

ಮುದ್ರಣಾಲಯುಗಳು. ದೂರದೂರದ ದೇಶಗಳೊಡನೆ ವ್ಯಾಪಾರವು ಮತ್ತು ಹಣದ ವ್ಯವಹಾರವು ಇಂಗ್ಲಿಶ ವ್ಯಾಪಾರಸ್ಥರ ಕೈಯಲ್ಲಿ. ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ. ಹೊಸ ಪ್ರದೇಶಗಳ ಶೋಧವು ಮತ್ತು ಅಲ್ಲಿ ವಸಾಹತುಗಳ ಸ್ಥಾಪನೆ. ಸರ್ ವಾಲ್ಟರ ರ್‍ಯಾಲೆ ಇಂಗ್ಲಂಡಿಗೆ ತಂಬಾಕು ಬಟಾಟೆಗಳನ್ನು ತಂದನು.

ಶಿಕ್ಷಣವೂ ವಾಙ್ಮಯವೂ— ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಬೆಳವಣಿಗೆ. ಜೆಸುಯಿಟ್ ಪಂಥದವರ ಶಿಕ್ಷಣ ಪ್ರಸಾರದ ಪ್ರಯತ್ನವು. ಕಾಲೆಟ್‌ನ ಹೊಸ ಪದ್ಧತಿಯ "ಸೆಂಟ ಪಾಲ್" ವಿದ್ಯಾಲಯವು. ವಿದ್ಯೆ ಮತ್ತು ಕಲೆಗಳಿಗೆ ಪ್ರೋತ್ಸಾಹನವು. ಶೇಕ್ಸಪಿಯರ್, ಸ್ಪೆನ್ಸರ್, ಬೇಕನ್, ಹೂಕರ್, ರ್‍ಯಾಲೆ ಮೊದಲಾದ ಕವಿಗಳು ಮತ್ತು ಲೇಖಕರು.

ಕಟ್ಟಡಗಳೂ ಇತರ ವಸ್ತುಗಳೂ— ಕೋಟೆಗಳ ಬದಲು ಸರದಾರರ ಸುಂದರವೂ ಭವ್ಯವೂ ಆದ ಮಂದಿರಗಳು. ಸಾಮಾನ್ಯಜನರ ಮನೆಗಳು ಇಟ್ಟಿಗೆ ಕಲ್ಲುಗಳಿಂದ ಕಟ್ಟಲ್ಪಡಲಾರಂಭಿಸಿದುವು. ಮನೆಗಳಲ್ಲಿ ಹೊಗೆಗೊಳವೆ ಮತ್ತು ಕಾಜಿನ ಉಪಯೋಗವು. ಅಸ್ವಚ್ಛವೂ ಇಕ್ಕಟ್ಟಿನವೂ ಆದ ಮಾರ್ಗಗಳು. ಪ್ರವಾಸವು ಸುರಕ್ಷಿತವಿರಲಿಲ್ಲ.

ಮನೋರಂಜನೆಯ ಸಾಧನೆಗಳು— ಸರದಾರ ಜನರ ಬೇಟೆ, ಟೇನಿಸ್, ಅಶ್ವಾರೋಹಣ ಇವುಗಳಲ್ಲಿ ತಮ್ಮ ವೇಳೆಯನ್ನು ಕಳೆಯುತ್ತಿದ್ದರು. ಸಾಮಾನ್ಯರು ಕುದುರೆ, ನಾಯಿ, ಹುಂಜ ಇವುಗಳ ಕಾದಾಟ, ನರ್ತನ, ತಮಾಷೆ ಇವುಗಳಿಂದ ಮನೋರಂಜನೆ ಮಾಡಿಕೊಳ್ಳುತ್ತಿದ್ದರು. ಪ್ಯುರಿಟನ್ ಜನರಿಗೆ ಇದಾವುದೂ ಸೇರುತ್ತಿರಲಿಲ್ಲ.

ಉಡಿಗೆತೊಡಿಗೆ— ಶ್ರೀಮಂತ ಸರದಾರರು ಬೆಲೆಯುಳ್ಳ ಉಣ್ಣೆಯ ಬಟ್ಟೆಗಳನ್ನು ಧರಿಸುತ್ತಿದ್ದರು. ಸಾಮಾನ್ಯರ ಬಟ್ಟೆಗಳು ಒರಟಾಗಿರುತ್ತಿದ್ದುವು. ಸ್ತ್ರೀಯರಲ್ಲಿ ಪಿನ್‌ಗಳ ಉಪಯೋಗವು. ಬಟ್ಟೆಯ ಕಡೆಗೆ ಎಲಿಝಬೆಥ್ ಇವಳ ವಿಶೇಷ ಲಕ್ಷ್ಯವು.

ಮೂಢ ವಿಶ್ವಾಸಗಳು— ಮಾಟ, ಭೂತ ಪಿಶಾಚಿ, ಇಂದ್ರಜಾಲ, ಮತ್ತು ಫಲಜ್ಯೋತಿಷ್ಯ ಇವುಗಳಲ್ಲಿ ವಿಶ್ವಾಸವು. ಆದರೆ ಇವುಗಳಲ್ಲಿಯ ಸತ್ಯವನ್ನು ಕಾಣಲು ಪ್ರಯತ್ನಗಳು. ಆದರಿಂದ ಹೊಸ ಶೋಧಗಳು. ಪರಿಣಾಮವು ಜ್ಞಾನವೃದ್ಧಿ.

## ಪರಿಶಿಷ್ಟವು ೧.

### ಟ್ಯೂಡರರ ಕಾಲದಲ್ಲಿಯ ಪ್ರಸಿದ್ಧ ಪುರುಷರು.

ಥಾಮಸ್ ವೂಲ್ಸೆ (೧೪೭೧—೧೫೩೦)— ಥಾಮಸ್ ವೂಲ್ಸೆ ಇಪ್ಸ್ವಿಚ್ ಎಂಬಲ್ಲಿ ಹುಟ್ಟಿದನು. ಕುಶಾಗ್ರಬುದ್ಧಿಯುವನಾದ ಇವನು ತನ್ನ ೧೫ನೆಯ ವರ್ಷದಲ್ಲಿಯೇ ವಿಶ್ವವಿದ್ಯಾಲಯದಲ್ಲಿಯ ಶಿಕ್ಷಣವನ್ನು ಪೂರ್ಣಗೊಳಿಸಿದನು. ಏಳನೆಯ ಹೆನ್ರಿಯ ಕಾಲದಲ್ಲಿ ಪರರಾಷ್ಟ್ರೀಯ ಖಾತೆಯಲ್ಲಿ ಇವನು ನಿಯೋಜಿತನಾದನು. ಎಂಟನೆಯ ಹೆನ್ರಿ ಇವನನ್ನು ಯಾರ್ಕದ ಆರ್ಚಬಿಶಪನಾಗಿ ನಿಯೋಜಿಸಿದನು. ೧೫೧೫ರಲ್ಲಿ

ಇವನು ಚಾನ್ಸೆಲರ್ ಎಂದರೆ ಮುಖ್ಯಮಂತ್ರಿಯಾದನು. ಲಾರ್ಡರ ಸಭೆಯ ಅಧ್ಯಕ್ಷನಾಗಿದ್ದನು, ಮತ್ತು ಕಾಮನ್ಸ ಸಭೆಯಲ್ಲಿಯೂ ಅವನ ವರ್ಚಸ್ಸಿದ್ದಿತು. ಅವನು ಮುಖ್ಯಮಂತ್ರಿಯಾದ ಬಳಿಕ ಎಂಟನೆಯ ಹೆನ್ರಿಯ ಪರರಾಷ್ಟ್ರೀಯ ರಾಜಕಾರಣವು ಅವನ ಆಲೋಚನೆಯಂತೆಯೆ ನಡೆಯಿತು. ಆದುದರಿಂದ ಪರರಾಷ್ಟ್ರಗಳ ರಾಜರು ಹೆನ್ರಿಯನ್ನು ತಮಗೆ ಅನುಕೂಲಮಾಡಿಕೊಳ್ಳಲು ಅವನ ಮುಖಾಂತರವಾಗಿಯೆ ಪ್ರಯತ್ನಮಾಡುತ್ತಿದ್ದರು. ಯುರೋಪದಲ್ಲಿ ಸತ್ತೆಯ ಸಮತೂಕವು ಉಳಿಯಬೇಕೆಂಬುದು ಅವನ ರಾಜನೀತಿಯಾಗಿದ್ದಿತು. ೧೫೧೭ರಲ್ಲಿ ರೋಮದ ಪೋಪನು ಅವನನ್ನು ಇಂಗ್ಲಂಡಿನಲ್ಲಿಯ ತನ್ನ ಪ್ರತಿನಿಧಿಯಾಗಿ (Legate) ನಿಯೋಜಿಸಿದನು. ರೋಮದ ಪೋಪನಾಗಬೇಕೆಂದೂ ವೂಲ್ಸೆಗೆ ಮಹತ್ವಾಕಾಂಕ್ಷೆ. ಕ್ಯಾಥರಿನ್ ಇವಳೊಡನೆ ಘಟಸ್ಫೋಟವನ್ನು ಮಾಡಿಕೊಳ್ಳಲು ಪೋಪನ ಸಮ್ಮತಿಯನ್ನು ದೊರೆಕಿಸುವ ಕೆಲಸವನ್ನು ಹೆನ್ರಿ ಅವನಿಗೆ ಒಪ್ಪಿಸಿದನು. ಆದರೆ ಈ ಕೆಲಸವು ಅವನಿಂದ ಆಗದುದನ್ನು ಕಂಡು ಹೆನ್ರಿ ಅವನನ್ನು ಮುಖ್ಯಮಂತ್ರಿಯ ಪದದಿಂದ ತಳ್ಳಿದನು (೧೫೨೯), ಮತ್ತು ಅವನ ಮೇಲೆ ರಾಜದ್ರೋಹದ ಆರೋಪವನ್ನಿಟ್ಟನು. ೧೫೩೦ರಲ್ಲಿ ವೂಲ್ಸೆ ಮರಣಹೊಂದಿದನು.

ಸರ್ ಥಾಮಸ ಮೋರ (೧೪೭೮—೧೫೩೫)—ಪ್ರಾಚೀನ ವಿದ್ಯಾಕಲೆಗಳ ಪುನರುಜ್ಜೀವನವಾಗಿ ಜನರಲ್ಲಿ ವಿಚಾರಕ್ರಾಂತಿಯಾಯ್ತು. ಇದಕ್ಕೆ ಸರ ಥಾಮಸ್ ಮೋರನು ಒಬ್ಬ ಪುರಸ್ಕರ್ತನಾಗಿದ್ದನು. ಅವನು ಮುತ್ಸದ್ದಿಯೂ ವಾಙ್ಮಯಭಕ್ತನೂ ಎಂದು ಪ್ರಸಿದ್ಧಿಯನ್ನು ಪಡೆದಿದ್ದನು. ಆದರ್ಶರಾಜ್ಯಪದ್ಧತಿ ಹೇಗಿರಬೇಕೆಂಬುದನ್ನು ತೋರಿಸಲು ಅವನು 'ಯುಟೋಪಿಯಾ' (Utopia) ಎಂಬ ಗ್ರಂಥವನ್ನು ಬರೆದನು. ವೂಲ್ಸೆಯ ತರುವಾಯದಲ್ಲಿ ಅವನು ಹೆನ್ರಿಯ ಮುಖ್ಯಮಂತ್ರಿ((ಚಾನ್ಸೆಲರ್) ಯಾದನು. ಹೆನ್ರಿ ಮತ್ತು ಮೋರ ಇವರಿಬ್ಬರಲ್ಲಿ ಮಿತ್ರತ್ವವಿದ್ದಿತು. ಆದರೆ 'ಅಕ್ಟ ಅಫ್ ಸುಪ್ರಿಮಸಿ' ಕಾಯ್ದೆಯಂತೆ (೧೫೩೪) ರಾಜನು ಧಾರ್ಮಿಕ ವಿಷಯದಲ್ಲಿ ಇಂಗ್ಲಂಡಿನಲ್ಲಿಯ ಮುಖ್ಯಾಧಿಕಾರಿಯೆಂಬ ಮಾತಿಗೆ ಅವನು ಮಾನ್ಯತೆಯನ್ನು ಕೊಡಲಿಲ್ಲವಾದುದರಿಂದ ಹೆನ್ರಿ ಅವನ ಮೇಲೆ ರಾಜದ್ರೋಹದ ಆರೋಪವನ್ನು ಹೊರಿಸಿ ಅವನನ್ನು ಶೂಲಕ್ಕೇರಿಸಿದನು (೧೫೩೫).

ಮಾರ್ಟಿನ್ ಲೂಥರ್ (೧೪೮೩—೧೫೪೬)—ಲೂಥರನು ಜರ್ಮನಿಯಲ್ಲಿ ಹುಟ್ಟಿದನು. ಅವನ ತಂದೆ ಕಣಿಯಲ್ಲಿ ಕೆಲಸಮಾಡುವ ಕೂಲಿಯವನಾಗಿದ್ದನು. ಲೂಥರನು ಕುಶಾಗ್ರಮತಿಯೂ ಪ್ರಯತ್ನಶೀಲನೂ ಆಗಿದ್ದನು. ಅವನು ವಕೀಲನಾಗಬೇಕೆಂದು ಅವನ ತಂದೆಯ ಇಚ್ಛೆಯಿದ್ದಿತು, ಆದರೆ ಅತ್ತ ಅವನ ಒಲವು ಇರಲಿಲ್ಲ. ಅವನಿಗೆ ಧರ್ಮವೂ ತತ್ವಜ್ಞಾನವೂ ಪ್ರೀತಿಯ ವಿಷಯಗಳಾಗಿದ್ದುವು. ಅವುಗಳ ಅಧ್ಯಯನಕ್ಕೋಸುಗ ಅವನು ೧೫೧೦ರಲ್ಲಿ ರೋಮನಗರಕ್ಕೆ ಹೋದನು. ಅಲ್ಲಿಂದ ಮರಳಿ ಬಂದ ಬಳಿಕ ಅವನು ವಿಟೆನ್‌ಬರ್ಗದ ವಿಶ್ವವಿದ್ಯಾಲಯದಲ್ಲಿ ತತ್ವಜ್ಞಾನದ ಪ್ರಾಧ್ಯಾಪಕನಾಗಿ ನಿಯೋಜಿಸಲ್ಪಟ್ಟನು. ೧೫೧೭ರಲ್ಲಿ ಟೆಟ್‌ಝೆಲ ಎಂಬ ಧರ್ಮಾಧಿಕಾರಿ "ಪಾಪದಿಂದ ಮುಕ್ತಗೊಳಿಸುವ ಪತ್ರಿಕೆ"ಗಳನ್ನು ವಿಟೆನ್‌ಬರ್ಗದಲ್ಲಿ ಮಾರಲು ತಂದನು. ಲೂಥರನು

ಅವನನ್ನು ವಿರೋಧಿಸಿದನು. ಇದಕ್ಕೋಸುಗ ಅವನು ಪೋಪನಿಂದ ಧರ್ಮಬಹಿಷ್ಕೃತನಾಗಿ ಮಾಡಲ್ಪಟ್ಟನು. ಆದರೆ ಲೂಥರನು ಪೋಪನ ಧಾರ್ಮಿಕ ಸತ್ತೆಯನ್ನು ಒಪ್ಪಲಿಲ್ಲ. ಇದರಿಂದ ಧರ್ಮಸುಧಾರಣೆಯ ಆಂದೋಲನವು ಪ್ರಾರಂಭವಾಯ್ತು. ಲೂಥರನಿಗೂ ಅವನ ಅನುಯಾಯಿಗಳಿಗೂ "ಪ್ರಾಟೆಸ್ಟಂಟ್ಸ" (ಪೋಪನ ವಿರೋಧಿಗಳು) ಎಂದು ಹೆಸರು ಬಂದಿತು. ಲೂಥರನಲ್ಲಿ ಹೇಳಿಕೊಳ್ಳುವಂತಹ ಪಾಂಡಿತ್ಯವಾಗಲಿ ವಿದ್ವತ್ತೆಯಾಗಲಿ ಇರಲಿಲ್ಲ. ಆದರೆ ಅವನು ಕೈಕೊಂಡ ಕೆಲಸವನ್ನು ನೆರವೇರಿಸುವ ಸ್ವಭಾವದವನಾಗಿದ್ದನು.

ಕ್ಯಾಲ್ವಿನ್ (೧೫೦೯—೧೫೬೪)—ಕ್ಯಾಲ್ವಿನನ ಜನ್ಮವೂ ಶಿಕ್ಷಣವೂ ಫ್ರಾನ್ಸಿನಲ್ಲಿ ಆಯ್ತು. ಧಾರ್ಮಿಕ ವಿಷಯದ ಆಂದೋಲನವನ್ನು ನಡೆಯಿಸಿದುದರಿಂದ ಅವನು ಫ್ರಾನ್ಸ್‌ದೇಶವನ್ನು ಬಿಡಬೇಕಾಯ್ತು. ಆ ಬಳಿಕ ಅವನು ಸ್ವಿಝರ್ಲಂಡಿನಲ್ಲಿಯ ಜಿನೆವಾ ನಗರಕ್ಕೆ ಹೋದನು. ಪೋಪನ ಸತ್ತೆ ಅವನಿಗೆ ಮಾನ್ಯವಿರಲಿಲ್ಲ. ಆದುದರಿಂದ ಅವನಿಗೂ ಅವನ ಅನುಯಾಯಿಗಳಿಗೂ ಪ್ರಾಟೆಸ್ಟಂಟ್ಸ ಎಂದು ಹೆಸರು ಬಂದಿತು. ಅವನ ಮತದ ಪ್ರಸಾರವು ಫ್ರಾನ್ಸ್, ಸ್ವಿಝರ್ಲಂಡ್ ಮತ್ತು ಸ್ಕಾಟಲಂಡ್ ಈ ದೇಶಗಳಲ್ಲಿ ಮತ್ತು ಅಲ್ಪ ಪ್ರಮಾಣದಲ್ಲಿ ಇಂಗ್ಲಂಡಿನಲ್ಲಿ ಆಯ್ತು.

ಥಾಮಸ್ ಕ್ರಾಮವೆಲ್ (೧೪೮೫—೧೫೪೦)—ವೂಲ್ಸೆ ಮುಖ್ಯಮಂತ್ರಿಯಾಗಿರುವಾಗ ಕ್ರಾಮವೆಲನು ಅವನ ಸೆಕ್ರೆಟರಿಯಾಗಿದ್ದನು. ವೂಲ್ಸೆಯ ತರುವಾಯದಲ್ಲಿ ೮ನೆಯ ಹೆನ್ರಿ ಅವನನ್ನು ತನ್ನ ಮುಖ್ಯಮಂತ್ರಿಯಾಗಿ ಮಾಡಿಕೊಂಡನು. ಧರ್ಮಸುಧಾರಣೆಯ ಕಡೆಗೆ ಅವನ ಒಲವಿದ್ದಿತು. ಧರ್ಮಮಠಗಳನ್ನು ಮುರಿದು ಅಲ್ಲಿಯ ಸಂಪತ್ತನ್ನು ಜಪ್ತಗೊಳಿಸಲು ಅವನು ಹೆನ್ರಿಗೆ ಆಲೋಚನೆಯನ್ನಿತ್ತನು. ಜರ್ಮನಿಯಲ್ಲಿಯ ಆನ್ ಆಫ್ ಕ್ಲೀವ್ಜ್ ಎಂಬ ರಾಜಕನ್ಯೆಯೊಡನೆ ಹೆನ್ರಿಯ ಮದುವೆಯನ್ನು ಒದಗಿಸಿದನು. ಆದರೆ ಮದುವೆಯಾದ ಬಳಿಕ ಆನ್ ಇವಳು ಅರೆಹುಚ್ಚಿಯೆಂಬುದನ್ನು ಕಂಡು ಹೆನ್ರಿ ಅವನ ಮೇಲೆ ರಾಜದ್ರೋಹದ ಆರೋಪವನ್ನಿಟ್ಟು ಅವನನ್ನು ಶೂಲಕ್ಕೇರಿಸಿದನು.

ಥಾಮಸ್ ಕ್ರ್ಯಾನ್ಮರ್ (೧೪೮೯—೧೫೫೬)—ವೂಲ್ಸೆಯ ತರುವಾಯದಲ್ಲಿ ೮ನೆಯ ಹೆನ್ರಿ ಥಾಮಸ್ ಕ್ರ್ಯಾನ್ಮರ್‌ನನ್ನು ಯಾರ್ಕದ ಆರ್ಚಬಿಶಪ್‌ನಾಗಿಯೂ ತನ್ನ ಮುಖ್ಯಮಂತ್ರಿಯಾಗಿಯೂ ನಿಯೋಜಿಸಿದನು. ಧರ್ಮಸುಧಾರಣೆಯ ಕಡೆಗೆ ಅವನ ಒಲವಿದ್ದಿತು. ಕ್ಯಾಥರಿನ್ ಇವಳೊಡನೆ ಆದ ಹೆನ್ರಿಯ ಮದುವೆ ಕ್ರೈಸ್ತಧರ್ಮಕ್ಕೆ ಸಮ್ಮತವಾಗಿದ್ದುದಲ್ಲವೆಂದು ಅವಳೊಡನೆ ಘಟಸ್ಫೋಟವನ್ನು ಮಾಡಲು ಹೆನ್ರಿಗೆ ಅವನು ಆಲೋಚನೆಯನ್ನಿತ್ತನು. ಬೈಬಲನ್ನು ಇಂಗ್ಲಿಷ್ ಭಾಷೆಗೆ ಪರಿವರ್ತಿಸುವ ಕೆಲಸದಲ್ಲಿ ಇವನಿಂದ ಬಹಳ ಸಾಹಾಯ್ಯವಾಯಿತು. ೬ನೆಯ ಎಡ್ವರ್ಡನ ಆಳ್ವಿಕೆಯಲ್ಲಿ ಪ್ರಾರ್ಥನೆಯ ಪುಸ್ತಕವನ್ನು ಸಿದ್ಧಗೊಳಿಸುವುದರಲ್ಲಿ ಇವನು ಭಾಗವನ್ನು ವಹಿಸಿದ್ದನು. ಮೇರಿರಾಣಿಯ ಆಳ್ವಿಕೆಯಲ್ಲಿ ಇವನು ಪಾಖಂಡನೆಂಬ ಆರೋಪದಿಂದ ಸುಡಿಸಲ್ಪಟ್ಟನು.

ವಿಲಿಯಮ್ ಸೆಸಿಲ್ (ಲಾರ್ಡ ಬರ್ಲೆ) (೧೫೨೦—೧೫೯೮)—ಚಿಕ್ಕಂದಿನಲ್ಲಿ ವಿಲಿಯಮ್ ಸೆಸಿಲನು ಕಾಯದೆಯ ಅಭ್ಯಾಸವನ್ನು ಮಾಡಿದ್ದನು. ೧೫೪೬ರಲ್ಲಿ ಅವನು

ಪಾರ್ಲಿಮೆಂಟಿನ ಸದಸ್ಯನಾದನು. ಎಡ್ವರ್ಡನ ಆಳ್ಕೆಯಲ್ಲಿ ಅವನು ರಾಜಪಾಲಕ ಸಮರ್‌ಸೆಟ್ ಇವನ ಸೆಕ್ರೆಟರಿಯಾಗಿದ್ದನು. ಎಲಿಝುಬೆಥ್ ಇವಳು ಅವನನ್ನು ತನ್ನ ಮಂತ್ರಿಯಾಗಿ ಮಾಡಿಕೊಂಡಳು. ಮುಂದೆ ಅವನು ೪೦ ವರ್ಷಗಳ ವರೆಗೆ ಅವಳ ಮುಖ್ಯಮಂತ್ರಿಯಾಗಿ ಕೆಲಸಮಾಡಿದನು. ಎಲಿಝುಬೆಥ್ ಇವಳ ವಿರುದ್ಧವಾಗಿ ಎಷ್ಟೋ ಸಂಚುಗಳಾಗುತ್ತಿದ್ದುವು. ಆದರೆ ಸೆಸಿಲನು ಯಾವಾಗಲೂ ಎಚ್ಚರಿಕೆಯುಳ್ಳವನು ಆಗಿರುತ್ತಿದ್ದುದರಿಂದ ಯಾವ ಸಂಚೂ ಯಶಸ್ವಿಯಾಗಲಿಲ್ಲ. ೧೫೭೧ರಲ್ಲಿ ಎಲಿಝುಬೆಥ್ ಇವಳು ಅವನಿಗೆ ಲಾರ್ಡ ಬರ್ಲೆ ಎಂದು ಪದವಿಯನ್ನಿತ್ತು ಅವನನ್ನು ಸರದಾರನಾಗಿ ಮಾಡಿದಳು.

ಸರ್ ಫ್ರ್ಯಾನ್ಸಿಸ್ ಡ್ರೇಕ್ (೧೫೪೦—೧೫೯೬)—ಡ್ರೇಕನು ಎಲಿಝುಬೆಥ್ ರಾಣಿಯ ಆಳಿಕೆಯಲ್ಲಿ ಪ್ರಸಿದ್ಧನಾದ ನಾವಿಕನಾಗಿದ್ದನು. ಅವನು ಸ್ಪೇನದ ಬೆಳ್ಳಿಬಂಗಾರಗಳಿಂದ ತುಂಬಿದ ಹಡಗುಗಳಿಗೆ ದಾಳಿಯಿಕ್ಕಿ ಬಹಳ ಸುಲಿಗೆಯನ್ನು ದೊರಕಿಸಿದನು. ಇವನು ತನ್ನ ಗೋಲ್ಡನ್-ಹಿಂದ ಎಂಬ ಹಡಗಿನಲ್ಲಿ ಭೂಪ್ರದಕ್ಷಿಣೆಯನ್ನು ಮಾಡಿದನು (೧೫೭೭ರಿಂದ ೧೫೮೦). ಆದರಿಂದ ಎಲಿಝುಬೆಥ್ ಇವಳು ಅವನ ಹಡಗಿನಲ್ಲಿ ಹೋಗಿ ಅವನನ್ನು ಗೌರವಿಸಿ ಅವನನ್ನು "ಸರದಾರ"ನಾಗಿ ಮಾಡಿದಳು. ಅವನು ಹಡಗುಪಡೆಯ ಉಪಸೇನಾಪತಿಯಾಗಿ ನಿಯೋಜಿಸಲ್ಪಟ್ಟನು. ಅವನು ಕ್ಯಾಡಿಜ್ ಬಂದರದಲ್ಲಿ ಇದ್ದ ಸ್ಪ್ಯಾನಿಶ್ ಹಡಗುಗಳಲ್ಲಿ ಕೆಲವನ್ನು ನಾಶಗೊಳಿಸಿದನು (೧೫೮೭). ಮತ್ತು ೧೫೮೮ರಲ್ಲಿ ಸ್ಪೇನದ ಹಡಗುಪಡೆಯನ್ನು ಸೋಲಿಸುವ ಕೆಲಸದಲ್ಲಿಯೂ ಭಾಗವಹಿಸಿದ್ದನು.

## ಪರಿಶಿಷ್ಟವು ೨.

### ಆ ಕಾಲದ ಪತ್ರಿಕೆಗಳ ಅನುವಾದವು.

(೧) ಕುರಿಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ವ್ಯವಸಾಯವು—ಸರ ಥಾಮಸ ಮೋರನು (೧೪೭೮—೧೫೩೫) 'ಯುಟೋಪಿಯಾ' ಎಂಬ ಗ್ರಂಥವನ್ನು ಬರೆದು ಅದರಲ್ಲಿ 'ಆದರ್ಶರಾಜ್ಯವು' ಹೇಗಿರಬೇಕೆಂಬುದನ್ನು ಹೇಳಿದ್ದಾನೆ. ಈ ಗ್ರಂಥವು ಲ್ಯಾಟಿನ್ ಭಾಷೆಯಲ್ಲಿದೆ. ಅದು ೧೫೧೬ರಲ್ಲಿ ಪ್ರಸಿದ್ಧವಾಯ್ತು. ಇಂಗ್ಲಿಶ್ ಭಾಷೆಯಲ್ಲಿ ಅದರ ಭಾಷಾಂತರವಾಗಿ ೧೫೫೬ರಲ್ಲಿ ಅದು ಪ್ರಸಿದ್ಧಿಸಲ್ಪಟ್ಟಿತು. ಈ ಗ್ರಂಥದಲ್ಲಿ ಕುರಿಗಳನ್ನು ಸಾಕಿ ಉಣ್ಣೆಯನ್ನು ಹುಟ್ಟಿಸುವ ವ್ಯವಸಾಯವನ್ನು ಕುರಿತು ಕೆಳಗಿನಂತೆ ಉಲ್ಲೇಖವಿದೆ.

". . . ನಿಮ್ಮ ಆ ಕುರಿಗಳು ಮೊದಲು ನಿರುಪದ್ರವಿಗಳಾಗಿಯೂ ಮನುಷ್ಯನನ್ನು ನಂಬಿದಂತಹವೂ ಆಗಿದ್ದುವು, ಮತ್ತು ಅವುಗಳ ಆಹಾರವೂ ಅಲ್ಪವಾಗಿತ್ತು. ಆದರೆ ಅವು ಈಗ ಅತ್ಯಂತ ಭಯಂಕರವಾಗಿರುವುದಲ್ಲದೆ ಆಹಾರವನ್ನಾದರೂ ಬಹಳವಾಗಿ ತಿನ್ನುವುವು, ಮನುಷ್ಯರನ್ನೇ ನುಂಗುವುವು. . . . ಪಾವಿತ್ರ್ಯದ ಮತ್ತು ದಯೆಯ ಮೂರ್ತಿಗಳೆಂದು ತಿಳಿಯಲ್ಪಟ್ಟ ಧರ್ಮಮಠಗಳಲ್ಲಿಯ ಸಾಧುಗಳು

(ಅಬಟ್ಸ್) ಮತ್ತು ಧರ್ಮಾಧಿಕಾರಿಗಳು ತಮಗೆ ದೊರೆವ ವಾರ್ಷಿಕ ಉತ್ಪನ್ನದಿಂದ ಸಂತುಷ್ಟರಾಗಿರದೆ, (ಹೆಚ್ಚಿನ ಪ್ರಾಪ್ತಿಯ ಆಶೆಯಿಂದ) ಹೊಲಗಳ ಸುತ್ತಲು ಬೇಲಿಗಳನ್ನು ಕಟ್ಟಿ ಅಲ್ಲಿ ಕುರಿಗಳನ್ನು ಸಾಕಲು ಆರಂಭಿಸಿರುವರು . . . . ಮನೆಮಾರುಗಳನ್ನೂ ಊರುಕೇರಿಗಳನ್ನೂ ಹಾಳುಗೆಡವಿ ಚರ್ಚುಗಳನ್ನು ಕುರಿದಡ್ಡಿಗಳಾಗಿ ಮಾಡಬೇಕೆಂಬ ವಿಚಾರವು ಅವರದಿದೆಯೋ ಯಾರು ಬಲ್ಲರು!"

(೨) ಲ್ಯಾಟಿಮರನ ಮೃತ್ಯುಸಮಯದ ಉದ್ಗಾರಗಳು—ಮೇರಿಯ ಆಳ್ಕೆಯಲ್ಲಿ ಪ್ರಾಟೆಸ್ಟಂಟ ಪಂಥದ ಬಿಶಪನಾಗಿದ್ದ ಲ್ಯಾಟಿಮರನು (೧೪೮೫—೧೫೫೫) ರಿಡ್ಲೆ ಮತ್ತು ಬೇರೆ ಬಿಶಪರೊಡನೆ ಸುಡಿಸಲ್ಪಟ್ಟನು. ಆ ಕಾಲದಲ್ಲಿಯ ಅವನ ಉದ್ಗಾರಗಳು:—

"ಗೆಳೆಯಾ ರಿಡ್ಲೆ, ಗಂಡಸಿನಂತೆ ವರ್ತಿಸು. ಇಂದು ನಾವು ಇಂಗ್ಲಂಡಿನಲ್ಲಿ ಅತ್ಯಂತ ಉಜ್ಜ್ವಲವಾದ ಜ್ಯೋತಿಯನ್ನು ಹೊತ್ತಿಸುವ! ಈಶ್ವರನ ಕೃಪೆಯಿಂದ ಅದು ಎಂದೂ ನಂದದೆಂದು ನನಗೆ ನಂಬುಗೆಯದೆ.

(೩) ಎಲಿಝಬೆಥ್ ಮತ್ತು ಪಾರ್ಲಿಮೆಂಟು—ಎಲಿಝಬೆಥ್ ರಾಣಿಯ ಮದುವೆಯನ್ನು ಮತ್ತು ಪರರಾಷ್ಟ್ರೀಯ ನೀತಿಯನ್ನು ಕುರಿತು ಪಾರ್ಲಿಮೆಂಟಿನ ಸದಸ್ಯರು ಚರ್ಚೆಯನ್ನು ಮಾಡಿದರು. ಈ ವಿಷಯದಲ್ಲಿ ಎಲಿಝಬೆಥ್ ರಾಣಿಯ ಉದ್ಗಾರಗಳು ಇಂತಿವೆ:—

"ಪಾರ್ಲಿಮೆಂಟಿನಲ್ಲಿ ಚರ್ಚೆಗೋಸುಗ ಇಡಲ್ಪಟ್ಟ ವಿಷಯಗಳಲ್ಲದೆ ಬೇರೆ ಯಾವ ವಿಷಯಗಳಲ್ಲಿಯೂ (ತನ್ನ ಮದುವೆ ಮತ್ತು ಪರರಾಷ್ಟ್ರೀಯ ನೀತಿ) ಸದಸ್ಯರು ಮನಸ್ಸನ್ನು ಹಾಕದಿರುವುದು ಒಳಿತು."

ಪಾರ್ಲಿಮೆಂಟಿನ ಸದಸ್ಯರಿಗೆ ಇದ್ದ ಭಾಷಣಸ್ವಾತಂತ್ರ್ಯದ ವಿಷಯದಲ್ಲಿ ಎಲಿಝಬೆಥ್ ರಾಣಿಯ ಉದ್ಗಾರಗಳು ಇಂತಿವೆ:—

"ನಿಮಗೆ (ಪಾರ್ಲಿಮೆಂಟಿನ ಸದಸ್ಯರಿಗೆ) ಭಾಷಣಸ್ವಾತಂತ್ರ್ಯದ ಅಧಿಕಾರವಿರುವುದು, ಆದರೆ ಅದು ಯಾವುದೆಂಬುದರ ಅರಿವು ನಿಮಗಿರಬೇಕು. ನಿಮ್ಮ ಕಿವಿಗೆ ಬಂದ ಇಲ್ಲವೆ ನಿಮ್ಮ ತಲೆಯಲ್ಲಿ ಬಂದ ಮಾತುಗಳನ್ನು ಮನಬಂದಂತೆ ಆಡುವುದು ಆ ಅಧಿಕಾರವಲ್ಲ. ನಿಮ್ಮ ಭಾಷಣಸ್ವಾತಂತ್ರ್ಯದ ಅಧಿಕಾರವೆಂದರೆ (ನಿಮ್ಮ ಮುಂದೆ ಇಡಲ್ಪಟ್ಟ ವಿಷಯಗಳಿಗೆ) ನಿಮ್ಮ ಸಮ್ಮತಿ 'ಇದೆ' ಅಥವಾ 'ಇಲ್ಲ'ವೆಂದು ಹೇಳುವುದು ಮಾತ್ರ."

(೪) ಇಂಗ್ಲಂಡಿಗೆ ದಾಳಿಯಿಕ್ಕಲು ಜೆಸುಯಿಟ್ ಪಂಥದವರನ್ನು ಹುರಿದುಂಬಿಸುವುದು—ಫಾದರ ಪಾರ್ಸನ್ಸ ಎಂಬವನೊಬ್ಬ ಜೆಸುಯಿಟ್ ಪಂಥದವನು ಎಲಿಝಬೆಥ್ ರಾಣಿಯ ಆಳ್ಕೆಯಲ್ಲಿ ಇಂಗ್ಲಂಡಿಗೆ ಬಂದು ಅಲ್ಲಿಯ ಕ್ಯಾಥಲಿಕ್ ಪಂಥದ ಇಂಗ್ಲಿಶ್ ಜನರನ್ನು ಎಲಿಝಬೆಥ್ ರಾಣಿಯ ವಿರುದ್ಧವಾಗಿ ಬಂಡನ್ನು ಹೂಡಲು ಪ್ರವೃತ್ತಗೊಳಿಸಲು ಪ್ರಯತ್ನಿಸಿದನು. ಅವನು ೧೫೮೦ರಲ್ಲಿ ಪೋಪನಿಗೆ ಬರೆದ ಪತ್ರದಲ್ಲಿಯ ಕೆಲವು ಅಂಶವನ್ನು ಇಲ್ಲಿ ಕೊಟ್ಟಿದೆ:—

"ನಾವು ಎದುರಿಸಬೇಕಾದ ಶತ್ರುಗಳೆಂದರೆ 'ಪ್ಯುರಿಟನ್'ರೆಂದು ತಿಳಿಯಲ್ಪಡುವ

ಪಾಖಂಡಿಗಳು ಮತ್ತು ಲೀಸ್ಟರ, ಹಂಟಿಂಗ್‌ಟನ್ ಮೊದಲಾದ ರಾಣಿಯ ವಿಶ್ವಾಸ ಪಾತ್ರರಾದ ಸರದಾರರು. ಇಂಗ್ಲಂಡಿನಲ್ಲಿಯ ಹಣ, ಶಸ್ತ್ರಾಸ್ತ್ರಗಳು, ಸೈನ್ಯ ಮತ್ತು ಹಡಗು ಪಡೆ ಇವುಗಳ ಉಪಯೋಗವನ್ನು ಅವರು ಮಾಡಿಕೊಳ್ಳಬಲ್ಲರೆಂಬುದು ನಿಜ; ಆದರೆ ಅದರಲ್ಲಿ ಯಾವನೂ ಯುದ್ಧವು ಹೇಗಿರುತ್ತದೆಂಬುದನ್ನು ಅರಿಯನು. ದೇಶದಲ್ಲಿಯ ಮುಂದಾಳುಗಳೆಂಬವರು ವಿಲಾಸಪ್ರೇಮಗಳಲ್ಲಿ ಮಗ್ನರಾಗಿರುವರು. ಯುದ್ಧವು ಪ್ರಾರಂಭವಾದ ಸುದ್ದಿಯನ್ನು ಕೇಳಿದೊಡನೆಯೆ ಅವರು ಇಂಗ್ಲಂಡನ್ನು ಬಿಟ್ಟು ಓಡುವ ರೆಂಬುದು ಖಂಡಿತವು. ಯುದ್ಧದ ಕಾಲದಲ್ಲಿ ಸೇನಾಪತಿತ್ವವನ್ನು ವಹಿಸಲು ಒಬ್ಬ ನಾದರೂ ಮುಂದೆ ಬರುವಂತಿಲ್ಲ. ಇಡಿಯ ದೇಶದಲ್ಲಿ ಎರಡೇ ಕೋಟೆಗಳಿರುತ್ತವೆ, ಮತ್ತು ಅವಾದರೂ ಎರಡು ದಿನಗಳಿಗಿಂತ ಹೆಚ್ಚು ಕಾಲ ಗಟ್ಟಿಯಾಗಿ ನಿಲ್ಲವು. ಶಾಂತತೆ ಯಲ್ಲಿ ಎಷ್ಟೊ ಕಾಲವು ಕಳೆದುದರಿಂದ ಫ್ಲ್ಯಾಂಡರ್ಸಿಗೆ ಹೋಗಿ ಬಂದ ಪಾಖಂಡಿಗಳ ಹೊರ್ತಾಗಿ ಉಳಿದೆಲ್ಲರೂ ಯುದ್ಧಪರಾಙ್ಮುಖರಾದವರೇ. ಅವರು ಶಸ್ತ್ರಗಳನ್ನು ಧರಿ ಸರು. ಇವರಲ್ಲಿ ಕೆಲವರು ಡ್ಯೂಕ ಆಫ್ ಪಾರ್ಮಾ (ನೆದರ್ಲಂಡಿನಲ್ಲಿಯ ಸ್ಪೇನದ ಸೇನಾಪತಿ) ಇವನನ್ನು ಕೂಡಿರುವರು. ಈ ಮಾತಿನಿಂದ (ಎಲಿಝುಬೆಥ್ ರಾಣಿಯ ವಿರುದ್ಧವಾಗಿ) ಬಂಡನ್ನು ಮಾಡಲು ಅವರಿಗೆ ಉತ್ಕಟವಾದ ಇಚ್ಛೆಯಿದೆ ಎಂಬುದು ಸ್ಪಷ್ಟ ವಾಗುತ್ತದೆ. . . . . ಯುದ್ಧಶಿಕ್ಷಣವನ್ನು ಪಡೆದ ೧೫ ಸಾವಿರ ಸೈನಿಕರು ನಮಗೆ ಸಾಕು. ಈ ಸೈನ್ಯದೊಡನೆ ಇಂಗ್ಲಂಡಿನ ಮೇಲೆ ಏರಿಹೋದರೆ ಇಲ್ಲಿಯ ಜನರು ನಮ್ಮನ್ನು ಕೂಡುವರು ಮತ್ತು ನಮಗೆ ಜಯವು ದೊರೆವುದು. ಸೈನ್ಯದಲ್ಲಿ ಅಶ್ವಬಲ ವಿದ್ದರೆ ನಮಗೆ ಜಯವು ದೊರೆಯಲು ತಡವಾಗದು. ಯುದ್ಧಪರಾಙ್ಮುಖರಾದ ಮತ್ತು ಶಿಸ್ತನ್ನರಿಯದ ಜನರ ಗುಂಪಿನೊಡನೆಯೆ ನಾವು ಯುದ್ಧವನ್ನು ಮಾಡಬೇಕಾಗು ವುದು . . . . ಅದುದರಿಂದ ಇಂಗ್ಲಂಡಿಗೆ ದಾಳಿಯನ್ನಿಕ್ಕುವ ಈ ಕೆಲಸವನ್ನು ಪೋಪ ಜಗದ್ಗುರು ಬೇಗನೆ ಕೈಕೊಳ್ಳಬೇಕೆಂದು ನನ್ನ ಆಗ್ರಹದ ಮತ್ತು ನಮ್ರತಾ ಪೂರ್ವಕವಾದ ವಿನಂತಿಯಿದೆ."

(೫) ಎಲಿಝುಬೆಥ್ ರಾಣಿ ಇಂಗ್ಲಿಶ್ ಸೈನಿಕರ ಮುಂದೆ ಮಾಡಿದ ಭಾಷ ಣವು—ಸ್ಪೇನವು ಮಾಡಿದ ಹಡಗುಪಡೆಯ ದಾಳಿಯ ಕಾಲದಲ್ಲಿ ಇಂಗ್ಲಿಶ್ ಸೈನಿಕರ ಮುಂದೆ ಎಲಿಝುಬೆಥ ರಾಣಿ ಮಾಡಿದ ಭಾಷಣದಲ್ಲಿಯ ಒಂದು ಭಾಗವು (೧೫೮೮).

"ಪ್ರಿಯ ಜನರೆ, ನಮ್ಮ (ನನ್ನ) ಸಂರಕ್ಷಣೆಯ ಚಿಂತೆಯನ್ನು ವಹಿಸುತ್ತಿದ್ದ ನಮ್ಮ (ನನ್ನ) ಕೆಲವು ಹಿತಚಿಂತಕರು ಸಶಸ್ತ್ರ ಜನರ ಸಮೂಹದಲ್ಲಿ ನಾವು (ನಾನು) ಹೋದರೆ ಮೋಸವಾಗುವ ಸಂಭವವುಂಟೆಂದು ಇಲ್ಲಿ ನಿಮ್ಮ ಮಧ್ಯದಲ್ಲಿ ಬಂದು ನಮ್ಮ (ನನ್ನ) ಜೀವಿತವನ್ನು ಗಂಡಾಂತರದಲ್ಲಿ ಹಾಕಕೂಡದೆಂದು ನಮ್ಮ (ನನ್ನ) ಮನವನ್ನು ಒಲಿಸಲು ಪ್ರಯತ್ನಿಸಿದರು; ಆದರೆ ಇಲ್ಲಿ ಬರುವುದನ್ನು ತಪ್ಪಿಸಿ ನಮಗೆ (ನನಗೆ) ಪ್ರಿಯರಾಗಿದ್ದ ಪ್ರಜೆಗಳ ವಿಷಯದಲ್ಲಿ ಅವಿಶ್ವಾಸವನ್ನು ತೋರಿಸಿ ಬದುಕಿರಲು ನನಗೆ ಸ್ವಲ್ಪವೂ ಇಚ್ಛೆಯಿಲ್ಲ.

ಪ್ರಜಾಪೀಡಕರಾದ ರಾಜ್ಯಕರ್ತರು ಭೀತಿಯುಳ್ಳವರಾಗಬಹುದು. ನನ್ನ ಪ್ರಿಯ ಪ್ರಜೆ

ಗಳ ಅಂತಃಕರಣದಲ್ಲಿಯ ನನ್ನ ವಿಷಯದಲ್ಲಿರುವ ಸ್ವಾಮಿನಿಷ್ಠೆ ಮತ್ತು ಸದಿಚ್ಛೆ, ಇದುವೆ ಈಶ್ವರನ ಕೃಪೆಯಿಂದ ನನ್ನ ಮುಖ್ಯವಾದ ಆಧಾರಸ್ತಂಭವಾಗಿರುವುದು, ಇದುವೆ ನನ್ನ ಸಾಮರ್ಥ್ಯವಾಗಿರುವುದು. ಇಲ್ಲಿಗೆ ಕೇವಲವಾಗಿ ಮನೋರಂಜನೆಗೋಸುಗ ನಾನು ಬಂದಿಲ್ಲ, ಆದರೆ ಯುದ್ಧದ ಪ್ರಸಂಗದಲ್ಲಿ ಪರಮೇಶ್ವರನಿಗೋಸುಗ, ನನ್ನ ದೇಶಕ್ಕೋಸುಗ, ನನ್ನ ದೇಶಬಾಂಧವರಿಗೋಸುಗ ನಿಮ್ಮಂತೆಯೆ ಕಾದಲು ಮತ್ತು ನನ್ನ ಪ್ರಾಣಗಳನ್ನು, ನನ್ನ ಸರ್ವಸ್ವವನ್ನು ಮತ್ತು ನನ್ನ ಶರೀರವನ್ನು ಮಣ್ಣುಗೂಡಿಸಲು ನಾನು ಬಂದಿರುವೆನು.

ನನ್ನ ಶರೀರವು ದುರ್ಬಲೆಯಾದ ಸ್ತ್ರೀಯದಿರುತ್ತದೆಂದು ನಾನು ಬಲ್ಲೆನು, ಆದರೆ ನನ್ನ ಹೃದಯವು ರಾಜನದು—ಇಂಗ್ಲಂಡಿನ ರಾಜನದು—ಇರುತ್ತದೆ. ಸ್ಪ್ಯಾನಿಶ್ ಸೇನಾಪತಿಯಾದ ಪಾರ್ಮಾ ಇವನನ್ನಾಗಲಿ ನನ್ನ ಇಂಗ್ಲಂಡಿಗೆ ದಾಳಿಯಿಕ್ಕಲು ಸಾಹಸಮಾಡಲೆಳಸುವ ಯುರೋಪದಲ್ಲಿಯ ಯಾವ ರಾಜನನ್ನಾಗಲಿ ನಾನು ತುಚ್ಛನಾಗಿ ಗಣಿಸುವೆನು; ಮತ್ತು ಪ್ರಸಂಗವು ಬಂದರೆ ಅಪಕೀರ್ತಿ ಬರುವ ಮೊದಲೆ ನಾನೇ ಸ್ವತಃ ಶಸ್ತ್ರವನ್ನು ಧರಿಸಿ ನಿಮ್ಮ ಸೇನಾಪತಿಯಾಗುವೆನು, ಮತ್ತು ನಿಮ್ಮ ಪ್ರತಿಯೊಬ್ಬನ ಶೌರ್ಯಕ್ಕೋಸುಗ ಮತ್ತು ಗುಣಕ್ಕೋಸುಗ ನಿಮಗೆ ಪ್ರೋತ್ಸಾಹನವನ್ನೂ ಪಾರಿತೋಷಕವನ್ನೂ ಕೊಡುವೆನು."

## ಪರಿಶಿಷ್ಟವು ೩.

### ಟ್ಯೂಡರ್ ವಂಶದವರ ಆಳ್ಕೆಯ ವಿಷಯದಲ್ಲಿ ಮಹತ್ವದ ಪ್ರಶ್ನೆಗಳು.

(೧) ಅರ್ವಾಚೀನ ಯುಗವು ಎಂದು ಪ್ರಾರಂಭವಾಯಿತು? ಯಾವ ಕಾರಣದಿಂದ ಅದಕ್ಕೆ ಅರ್ವಾಚೀನ ಯುಗವೆಂದು ಹೆಸರು ಬಂದಿತು?

(೨) ೭ನೆಯ ಹೆನ್ರಿ ತನ್ನ ಸತ್ತೆಯನ್ನು ಅನಿಯಂತ್ರಿತವಾಗಿಯೂ ಪ್ರಬಲವಾಗಿಯೂ ಮಾಡಲು ಏನು ಮಾಡಿದನು? ಸರದಾರರ ವಿಷಯದಲ್ಲಿಯೂ ಪರರಾಷ್ಟ್ರಗಳ ವಿಷಯದಲ್ಲಿಯೂ ಅವನು ಕೈಕೊಂಡ ನೀತಿ ಯಾವುದು?

(೩) ೭ನೆಯ ಹೆನ್ರಿಯ ಆಳ್ಕೆಯಲ್ಲಿ ಆದ ಬಂಡುಗಳಾವುವು? ಏಕೆ ಆದುವು?

(೪) ೮ನೆಯ ಹೆನ್ರಿಯ ಆಳ್ಕೆಯಲ್ಲಿ ಆದ ಸಂಗತಿಗಳಿಂದ ಅವನ ಸ್ವಭಾವವು ಹೇಗಿತ್ತೆಂಬುದನ್ನೂ ಅವನ ಅಂತಃಸ್ಥ ಮತ್ತು ಪರರಾಷ್ಟ್ರೀಯ ನೀತಿ ಹೇಗಿದ್ದಿತೆಂಬುದನ್ನೂ ಹೇಳಿರಿ.

(೫) ಧರ್ಮಮಠಗಳು ಮುರಿಯಲ್ಪಟ್ಟುದರಿಂದ ಆದ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಪರಿಣಾಮಗಳಾವುವು?

(೬) ಧರ್ಮಸುಧಾರಣೆಯ ಆಂದೋಲನವೆಂದರೇನು? ಅದನ್ನು ಯಾರು ಎಲ್ಲಿ ಮತ್ತು ಯಾವಾಗ ಪ್ರಾರಂಭಿಸಿದರು?

(೭) ಕ್ರೈಸ್ತಧರ್ಮದಲ್ಲಿಯ ವಿವಿಧ ಪಂಥಗಳ ವಿಷಯದಲ್ಲಿ ಗೊತ್ತಿದ್ದುದನ್ನು ಹೇಳಿ ಆ ಪಂಥಗಳಲ್ಲಿಯ ವೈಶಿಷ್ಟ್ಯಗಳೇನೆಂಬುದನ್ನು ಸ್ಪಷ್ಟಗೊಳಿಸಿರಿ.

(೮) ಪ್ರಾಟೆಸ್ಟಂಟ ಮತ್ತು ರೋಮನ್ ಕ್ಯಾಥೊಲಿಕ್ ಪಂಥಗಳಲ್ಲಿಯ ಸಾಮ್ಯ ವೈಷಮ್ಯಗಳನ್ನು ಕುರಿತು ಹೇಳಿರಿ.

(೯) ಕೆಳಗೆ ಹೇಳಿದ ಸಂಗತಿಗಳ ವಿಷಯದಲ್ಲಿ ಟಿಪ್ಪಣಿಗಳನ್ನು ಬರೆಯಿರಿ:— ಸ್ಟಾರ ಚೇಂಬರ ಕೋರ್ಟ, ಹಾಯರ್ ಕಮಿಶನ್ ಕೋರ್ಟ, ಲಿವ್ವರಿ ಮತ್ತು ಮೆಂಟೆನನ್ಸ ಮಾರ್ಟನನ ಮುಳ್ಳು, ಸತ್ತೆಯ ಸಮತೂಕವು (Balance of Power), ಕಡಲು-ನಾಯಿಗಳು (Sea dogs), ಸುವರ್ಣವಸ್ತ್ರಭೂಮಿ (Field of the cloth of gold), ಆರು ಕಲಮುಗಳ ಕಾಯದೆ, ಮತ್ತು ಆ್ಯಕ್ಟ ಆಫ್ ಸುಪ್ರಿಮಸಿ (Act of supremacy).

(೧೦) ಕೆಳಗಿನ ಇತಿಹಾಸಪ್ರಸಿದ್ಧ ಸ್ತ್ರೀಪುರುಷರ ವಿಷಯದಲ್ಲಿ ವೃತ್ತಾಂತವನ್ನು ಬರೆಯಿರಿ:— ವೂಲ್ಸೆ, ಸ್ಕಾಟಲಂಡಿನ ರಾಣಿ ಮೇರಿ, ಜಾನ್ ನಾಕ್ಸ, ಮಾರ್ಟಿನ್ ಲೂಥರ್, ಕ್ಯಾಲ್ವಿನ್, ಡ್ರೇಕ್, ವಿಲಿಯಮ್ ಸೆಸಿಲ್, ರ್‍ಯಾಲೆ, ಕೋಲಂಬಸ, ಥಾಮಸ್ ಕ್ರಾಮವೆಲ್, ಮೇರಿ ರಾಣಿ, ಲೇಡಿ ಜೇನ್ ಗ್ರೇ.

(೧೧) ಟ್ಯೂಡರ್ ವಂಶದವರ ಸತ್ತೆ ಪ್ರಬಲವೂ ಅನಿಯಂತ್ರಿತವೂ ಆಗಲು ಕಾರಣಗಳಾವುವು? ಈ ಸತ್ತೆ ಲೋಕಪ್ರಿಯವಾಗಿರಲು ಕಾರಣಗಳೇನು?

(೧೨) ಎಲಿಝುಬೆಥ್ ಇವಳ ಆಳ್ಕೆಗೆ ಸುವರ್ಣಯುಗವೆಂದು ಹೆಸರೇಕೆ? ಅವಳ ಅಂತಃಸ್ಥ, ಪರರಾಷ್ಟ್ರೀಯ ಮತ್ತು ಧಾರ್ಮಿಕ ನೀತಿ ಹೇಗಿದ್ದಿತು?

(೧೩) ಇಂಗ್ಲಂಡ ಸ್ಪೇನಗಳಲ್ಲಿ ವೈರವು ಹುಟ್ಟಲು ಕಾರಣಗಳಾವುವು? ಸ್ಪೇನದ ಅಜಿಂಕ್ಯ-ನೌಕಾದಳದ ಪರಾಭವವೇಕಾಯಿತು? ಮತ್ತು ಅದರಿಂದಾದ ಪರಿಣಾಮಗಳಾವುವು?

(೧೪) ನೀವು ಸ್ಪೇನದ ಹಡಗುಪಡೆಯಲ್ಲಿಯ ಒಬ್ಬ ಸೈನಿಕನೆಂದು ತಿಳಿದು ಆ ಹಡಗುಪಡೆಯ ಪರಾಭವದ ವೃತ್ತಾಂತವನ್ನು ಬರೆಯಿರಿ.

(೧೫) ಇಂಗ್ಲಂಡಿನಲ್ಲಿ ಧರ್ಮಸುಧಾರಣೆ ಯಾವಾಗ ಮತ್ತು ಏಕೆ ಪ್ರಾರಂಭವಾಯಿತು? ಈ ಆಂದೋಲನದ ವಿಷಯದಲ್ಲಿ ಟ್ಯೂಡರ ವಂಶದ ರಾಜ್ಯಕರ್ತರ ನೀತಿ ಹೇಗಿದ್ದಿತು? ತಮ್ಮ ನೀತಿಯನ್ನು ವ್ಯವಹಾರದಲ್ಲಿ ತರಲು ಅವರು ಯಾವ ಉಪಾಯಗಳನ್ನು ಯೋಚಿಸಿದರು?

(೧೬) ಟ್ಯೂಡರರ ಕಾಲದಲ್ಲಿಯ ಸಾಮಾಜಿಕ ಸ್ಥಿತಿ, ಉದ್ಯೋಗ ವ್ಯವಸಾಯಗಳು, ವ್ಯಾಪಾರ, ಕಟ್ಟಡಗಳು, ಮನೋರಂಜನೆಯ ಸಾಧನಗಳು, ಮತ್ತು ಮೂಢ ವಿಶ್ವಾಸಗಳು ಇವುಗಳ ವಿಷಯದಲ್ಲಿ ಮಾಹಿತಿಯನ್ನು ಕೊಡಿರಿ.

---

